# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



ಚಿತ್ರಗಳು : ಮೋನಪ್ಪ, ಶ್ರೀಹರಿ, ಜಿ. ಎಂ. ಬೊಮ್ನಳ್ಳಿ, ಸಂತೀಶ್ ವಗ್ಗಾ, ಬಿ. ವಿಲ್ಸನ್
ಮುಖಚಿತ್ರ : ಕೆ. ಪಿ. ಸ್ವಾಮಿ
ವಿನ್ಯಾಸ : ನವಕರ್ನಾಟಕ ವಿನ್ಯಾಸ
ಕಚೇರಿ ಸಹಕಾರ : ಜಿ. ವಿ. ತೇಜೋವತಿ

## ಈ ತಿಂಗಳು

**ಮೊ**ದಲು ಬ್ರಹ್ಮಕುಮಾರಿಯರು, ಆಮೇಲೆ ಅಮೃತಾನಂದಮಯಿ, ಮತ್ತು ಈಚೆಗೆ ರವಿಶಂಕರ್ : ಎಲ್ಲರನ್ನೂ ನಮ್ಮ ದುರ್ದರ್ಶನವು ಗಂಟೆಗಟ್ಟಲೆ ಪ್ರಚಾರ-ಪ್ರಸಾರ ಮಾಡಿ ದೇಶದ ಅತ್ಯುತ್ತಮ ದುರ್ದರ್ಶನ ಕೇಂದ್ರವೆಂಬ ಖ್ಯಾತಿ (?) ಪಡೆದಿದೆ. ಇವರು ಮೂವರೂ ಬೆಂಗಳೂರಿನ ರಸ್ತೆಗಳಲ್ಲಿ ಪೋಸ್ಟರ್ ಹಚ್ಚಿದರು, ಬ್ಯಾನರ್ ಕಟ್ಟಿದರು, ಗೋಡೆಬರಹ ಮಾಡಲು ಅದೇಕೋ ಮುಂದಾಗಲಿಲ್ಲ. ನಗರಸಭೆಗೆ ಇವರು ಎಷ್ಟು ತೆರಿಗೆ ಕಟ್ಟಿದ್ದರೆಂಬುದನ್ನು ಯಾರೂ ಹೇಳುತ್ತಿಲ್ಲ; ಬಹುಶಃ ಏನೂ ಕಟ್ಟಿಲ್ಲ. ದೇವದೂತರಿಗೆ ತೆರಿಗೆ ವಿಧಿಸುವುದುಂಟೆ ! ಇವರೆಲ್ಲಾ, ವಿಶೇಷವಾಗಿ ರವಿಶಂಕರ್, ಬೆಂಗಳೂರಿನ ಸಂಚಾರಿ ವಾಹನಗಳಿಗೆ, ಜನಸಾಮಾನ್ಯರಿಗೆ ಎಲ್ಲಿಲ್ಲದ ಉಪಟಳ ಉಂಟುಮಾಡಿದರು. ಶಾಲಾ-ಕಾಲೇಜುಗಳ ವಿದ್ಯಾರ್ಥಿಗಳಿಗೆ ಉಂಟಾದ ತೊಂದರೆ ವರ್ಣಿಸಲಾಗದಷ್ಟು. ರಾಷ್ಟ್ರಾಧ್ಯಕ್ಷರಿಂದ ಹಿಡಿದು ಅನೇಕ ಪಕ್ಷಗಳ ದೊಡ್ಡ ದೊಡ್ಡ ನಾಯಕರು 'ಗುರೂಜಿ'ಯ ಪಾದಸ್ಪರ್ಶ ಮಾಡಿ ಪುನೀತಭಾವ ತಳೆದರು. ವಿದೇಶಗಳಿಂದ ಬಹಳ ಮಂದಿ ರಾಜಕೀಯ ನೇತಾರರು, ಕೆಲಸಕ್ಕೆ ಬಾರದ ರಾಜ-ರಾಣಿಯರು, ಎಲ್ಲಾ ಮೇಳೈಸಿ ನಾಲ್ಕೈದು ದಿನ ಬೆಂಗಳೂರಿನ ದಿನನಿತ್ಯದ ಜೀವನಕ್ಕೆ ಕಷ್ಟ-ಕೋಟಲೆ ಒಡ್ಡಿ ನಾಗರಿಕ ರಕ್ಷಣಾ ಕಾಯಿದೆಗೆ ಬೇಕಾಬಿಟ್ಟಿ ಭಂಗ ತಂದರು. ಆಸ್ಪತ್ರೆಗಳಿಗೆ ಹೋಗುತ್ತಿದ್ದ ಎಷ್ಟು ರೋಗಿಗಳು ಸಂಚಾರಕ್ಕೆ ಅಡ್ಡಿಯುಂಟಾದ್ದರಿಂದ ಕ್ಷಿಪ್ರವಾಗಿ ಭಗವಂತನ ಪಾದ ಸೇರಿಕೊಂಡರೋ ತಿಳಿಯದು, ಆದರೆ ಎಷ್ಟೋ ಶಾಲಾಮಕ್ಕಳು ಹತ್ತಾರು ಕಿಲೋಮೀಟರ್ ಹಾದಿಯನ್ನು ನಡೆದೇ ಹೋಗಬೇಕಾಯಿತು. ಬಸ್ಸುಗಳೆಲ್ಲಾ ಇವರಿಗೇ !

ಕೇರಳದ ಉಚ್ಚ ನ್ಯಾಯಾಲಯವು ಒಂದು ಕಾರ್ಮಿಕ ಸಂಘಕ್ಕೆ ಹತ್ತುಸಾವಿರ ರೂಪಾಯಿ ಜುಲ್ಮಾನೆ ವಿಧಿಸಿದೆ; ಸಂಘವು ಪ್ರತಿಭಟನೆಗೆ ಕರೆ ನೀಡಿದ್ದಾಗೊಮ್ಮೆ ಯಾವನೋ ವ್ಯಾಪಾರಿಗೆ ನಷ್ಟ ಉಂಟಾಯಿತಂತೆ, ಆ ಕಾರಣಕ್ಕೆ. ರವಿಶಂಕರ್‌ಗೆ ಎಷ್ಟು ದಂಡ ವಿಧಿಸಬೇಕೆಂಬುದನ್ನು ಊಹಿಸಬಹುದು, ಆದರೆ ಕೋರ್ಟ್ ಅಂತಹ ತೀರ್ಪು ನೀಡಿಲ್ಲ. ಸಾಮಾನ್ಯ ದುಡಿಯುವ ಜನರ ಸಂಘಟನೆಗಳ ಪ್ರತಿಭಟನೆಯ ಮೆರವಣಿಗೆಗೆ ಅಡ್ಡಿಯುಂಟುಮಾಡುವ ಪೊಲೀಸ್ ಇಲಾಖೆ ಅಮ್ಮ ಮತ್ತು ರವಿಶಂಕರ್ ನೀಡಿದ ಬಾಧೆಗೆ ಯಾವ ಕಾನೂನಿನ ನಿಯಮದಡಿಯಲ್ಲೂ ಕ್ರಮ ತೆಗೆದುಕೊಳ್ಳಲಿಲ್ಲ. ನಮ್ಮ ದೇಶದ ಸಾಧು-ಸಂತರಿಗೆ ಕಾನೂನು ಅನ್ವಯವಾಗದಿರುವುದು ಒಂದು ದುರಂತ. ರಾಷ್ಟ್ರಾಧ್ಯಕ್ಷರಾದಿಯಾಗಿ ಈ ನಾಯಕಗಣವು ದೇಶವನ್ನು ಎತ್ತ ಕೊಂಡೊಯ್ಯುತ್ತಿದೆ ? ಭ್ರಮೆ ಮತ್ತು ಮೌಢ್ಯಗಳ ಸಾಂದ್ರ ಮೂರ್ಖತನದತ್ತ ಅಲ್ಲವೆ ? ಸುಳ್ಳಿನ ವಿಶ್ವವೊಂದನ್ನು ಕಟ್ಟಿಕೊಂಡು ಎಲ್ಲೋ ತೇಲಾಡುತ್ತಾ ವಾಸ್ತವ ವ್ಯವಹಾರಗಳಲ್ಲಿ ಕಾಣಬರುವ ಕ್ರೌರ್ಯ, ದೌರ್ಜನ್ಯ ಮತ್ತು ಕುತಂತ್ರಗಳನ್ನು ಜನರು ಗುರುತಿಸಬಾರದೆಂಬ ಒಂದೇ ತತ್ವ ಕಣ್ಣಿಗೆ ರಾಚುತ್ತದೆ. ರವಿಶಂಕರ್ ಹೇಳಿದರು : "ಶಾಂತಿಯೊಂದಿದ್ದರೆ ವಿಶ್ವದ ಸಮಸ್ಯೆಗಳೆಲ್ಲಾ ಬಗೆಹರಿಯುತ್ತವೆ." ಇಲ್ಲಿಯ ಆಶಯಕ್ಕೆ ವಿರೋಧವಿಲ್ಲ, ಆದರೆ ಬಾಲಿಶತನವನ್ನು ಸಹಿಸಲಾಗುವುದಿಲ್ಲ. "ಶಾಂತಿ ಇದ್ದರೆ" ಎನ್ನುವ ಈ ಧೀಮಂತನು ಶಾಂತಿ ಏಕಿಲ್ಲವೆಂಬ ಪ್ರಶ್ನೆಯನ್ನೇ ಹಾಕಿಕೊಂಡಿಲ್ಲ. "ಎಲ್ಲರೂ ಉದ್ಯೋಗಿಗಳಾಗಿದ್ದರೆ ದೇಶವು ನಲಿಯುತ್ತಿರುತ್ತದೆ" ಎಂದು ಹೇಳಿ ಇನ್ನೊಂದು ಕನಸಿನ ಸಾಮ್ರಾಜ್ಯವನ್ನು ಕಲ್ಪಿಸಬಹುದು. ಆದರೆ ಅದು ನಿರರ್ಥಕ. ರವಿಯವರಿಗೆ ನಾವು ಹೇಳಬೇಕು : "ವಿಶ್ವದ ಸಮಸ್ಯೆಗಳು ಬಗೆಹರಿದರೆ ಶಾಂತಿ ನೆಲೆಸುತ್ತದೆ", ಎಂದು. ಮಾತಿನ ಮಲ್ಲರಾಗಿ ದೊಡ್ಡಸ್ತಿಕೆ ಸಾಧಿಸಿರುವ ಜನಕ್ಕೆ ನಮ್ಮಲ್ಲಿ ಕೊರತೆಯಿಲ್ಲವಲ್ಲ! ರವಿಶಂಕರ್ ಆ ಪದವಿ ಪಡೆಯಲು ಕೋಟಿಗಟ್ಟಲೆ ಹಣ "ಸಂಪಾದಿಸಿದ್ದಾರೆ", ಯಾವ ದುಡಿಮೆಯೂ ಇಲ್ಲದೆ. ಅವರು ನೀಡುವ ಪರಿಹಾರ ಭ್ರಾಮಕ, ಅಪ್ರಸ್ತುತ.

ಅಮೆರಿಕಾದ ಪಾತಕಿಗಳಿಂದ ೧೯೭೩ರ ಸೆಪ್ಟೆಂಬರ್ ೧೧ರಂದು ಹತ್ಯೆಗೊಳಗಾಗಿದ್ದ ಚಿಲಿಯ ಅಧ್ಯಕ್ಷ ಡಾ|| ಸಾಲ್ವೆಡರ್ ಅಲೆಂದೆ ಹೇಳಿದ್ದರು : "ಚಿಲಿಯ ಸಂದರ್ಭದಲ್ಲಿ ಶಾಂತಿ ಎಂದರೆ ನಮ್ಮ ಸಂಪತ್ತಾದ ತಾಮ್ರವು ಜನರ ಮಾಲಿಕತ್ವದಲ್ಲಿರುವುದು", ಎಂದು. ಜನರ ದುಡಿಮೆಯ ಸಂಪತ್ತು ಮತ್ತು ದೇಶದ ನೈಸರ್ಗಿಕ ಸಂಪತ್ತುಗಳನ್ನು ದೋಚಿ ಆ ಚಿತೆಯ ಮೇಲೆ ಶಾಂತಿಯನ್ನು ಸ್ಥಾಪಿಸಬೇಕೆಂಬ ಬೋಧನೆಗೆ ಕವಡೆ ಕಾಸಿನ ಕಿಮ್ಮತ್ತೂ ಇರಲಾರದೆಂದು ಕಲಾಂ, ಅಡ್ವಾನಿ, ರವಿಶಂಕರ್ ಹಾಗೂ ಅವರೆಲ್ಲರ ಮೂರ್ಖ ಭಕ್ತಗಣ ಅರಿತುಕೊಳ್ಳಬೇಕು. ಜನರಾದರೂ ಜವಾಬ್ದಾರಿಯುತ ವಿವೇಚನೆಯಿಂದ ನಡೆದುಕೊಳ್ಳಬೇಕಲ್ಲವೇ ? ಸಾವಿರಾರು ಸಂಗೀತಗಾರರ ಗಾನಸುಧೆಯನ್ನು ಸವಿಯುವುದು ಸರಿ, ಆದರೆ ಆ ಆನಂದದಲ್ಲಿ ರವಿಶಂಕರ್‌ರವರ ಮೋಹಪಾಶಕ್ಕೆ ಸಿಲುಕಿಕೊಳ್ಳಬಾರದು. ನಗರದ ಹಾಗೂ ರಾಜ್ಯದ ಬೇರೆ ಭಾಗಗಳ ಸಾಮಾನ್ಯರ ಜನಜೀವನ ಅಸ್ತವ್ಯಸ್ತಗೊಳಿಸಿದ ರವಿಶಂಕರ್ ಜೀವನ ಕಲೆಯ ಹೆಸರಿನಲ್ಲಿ ಜೀವನವನ್ನು ನಿರ್ಜೀವಗೊಳಿಸುತ್ತಾರೆಂಬ ಸತ್ಯವನ್ನರಿಯಬೇಕು. ಪ್ರಭುತ್ವ,

೮ನೇ ಪುಟಕ್ಕೆ

ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೭ ಸಂಚಿಕೆ-೮ ಮಾರ್ಚ್ ೨೦೦೬



**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೬೭೪೨೬

**ಹೊಸತು ಕಚೇರಿಯ ವಿಳಾಸ**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : nkp@bgl.vsnl.net.in
website : www.navakarnatakabooks.com



# ಬುಷ್ ಎಂಬ ಪಾತಕಿಗೆ ಭಾರತದಲ್ಲಿ ಸ್ವಾಗತವಿಲ್ಲ

ಅಮೆರಿಕಾದ ಅಧ್ಯಕ್ಷರುಗಳ ಪೈಕಿ ಮಹಾಪಾತಕಿ ಎಂದರೆ ಜಾರ್ಜ್ ಡಬ್ಲ್ಯು ಬುಷ್. ಈ ಇಪ್ಪತ್ತೊಂದನೇ ಶತಮಾನದಲ್ಲಿ ಯುದ್ಧಾಪರಾಧಕ್ಕಾಗಿ ಯಾರನ್ನಾದರೂ ಅಂತಾರಾಷ್ಟ್ರೀಯ ನ್ಯಾಯಾಲಯದ ಮುಂದೆಯೂ, ವಿಶೇಷ ಟ್ರಿಬ್ಯೂನಲ್ ಮುಂದೆಯೂ ವಿಚಾರಣೆಗೆ ಕಟಕಟೆಯಲ್ಲಿ ನಿಲ್ಲಿಸಬೇಕಾದ ವ್ಯಕ್ತಿ ಎಂದರೆ ಅಮೆರಿಕಾದ ಅಧ್ಯಕ್ಷ ಜಾರ್ಜ್ ಬುಷ್. ನ್ಯಾಯಪೀಠದಲ್ಲಿ ಯಾರೇ ಇದ್ದಾಗ್ಯೂ ಖಂಡಿತ ಆತನನ್ನು ಅಪರಾಧಿ ಎಂದು ಘೋಷಿಸಿ ದಂಡಿಸದೇ ಇರುವುದಿಲ್ಲ. ಇಂಥ ಧೂರ್ತನಿಗೆ ಭಾರತದಲ್ಲಿ ಎಂದಿಗೂ ಸ್ವಾಗತವಿಲ್ಲ. ನಮ್ಮ ದೇಶದ ಅತಿಥಿಯಾಗಲು ಕಿಂಚಿತ್ತೂ ಯೋಗ್ಯತೆ ಇಲ್ಲದ ಅಧ್ಯಕ್ಷ ಬುಷ್‌ಗೆ ಭಾರತದಲ್ಲಿ ಪ್ರವೇಶವಿಲ್ಲ. ಹಿಂದಿರುಗು ಎಂದು ಭಾರತದ ಲಕ್ಷೋಪಲಕ್ಷ ಜನ ಪ್ರದರ್ಶನ ನಡೆಸದೇ ಇರುವುದಿಲ್ಲ. 'ಬುಷ್ ಭಾರತದಿಂದ ತೊಲಗು' ಎಂಬ ಘೋಷಣೆ ಮಾರ್ದನಿಸುವುದರಲ್ಲಿ ಸಂದೇಹವಿಲ್ಲ. ಈ ಕೊಲೆಗಡುಕನ ಭೇಟಿಯನ್ನು ವಿರೋಧಿಸಿರುವ ಎಡಪಕ್ಷಗಳು ದೇಶಾದ್ಯಂತ ಎಲ್ಲೆಡೆಯಲ್ಲಿಯೂ ಬೃಹತ್ ಪ್ರದರ್ಶನಗಳನ್ನು ನಡೆಸಲು ಕರೆ ನೀಡಿವೆ. ಮಾನವನ ಜೀವಿಸುವ ಹಕ್ಕನ್ನು ಎತ್ತಿಹಿಡಿಯುವ ಪ್ರಜಾಪ್ರಭುತ್ವ, ಸ್ವಾತಂತ್ರ್ಯ ಸಾರ್ವಭೌಮತ್ವಗಳನ್ನು ಗೌರವಿಸುವ ಎಲ್ಲ ಸಭ್ಯ ಜನರು ಈ ಪ್ರತಿಭಟನೆಗಳಲ್ಲಿ ಭಾಗವಹಿಸುತ್ತಾರೆ. 'ಹೊಸತು' ಕೂಡ ಅವರೊಂದಿಗೆ ದನಿಗೂಡಿಸುತ್ತದೆ.

ಎರಡನೇ ಮಹಾಯುದ್ಧಾನಂತರ ಧನಬಲ, ಶಸ್ತ್ರಾಸ್ತ್ರಬಲ ಅಪಾರವಾಗಿ ವರ್ಧಿಸಿಕೊಂಡ ಅಮೆರಿಕಾ ನಿರಂತರವಾಗಿ ಪ್ರಪಂಚದಲ್ಲಿ ಒಂದಲ್ಲ ಒಂದು ಹಿಂಸಾಚಾರದಲ್ಲಿ ತೊಡಗಿಕೊಂಡಿದೆ. ಯುದ್ಧ ಮುಗಿಯುತ್ತಿದ್ದು ಇನ್ನೇನು ಜಪಾನ್ ಶರಣಾಗಲಿದ್ದ ಸಮಯದಲ್ಲಿ ಪ್ರಯೋಗಾರ್ಥವಾಗಿ ಹಿರೋಷಿಮಾ, ನಾಗಸಾಕಿ ನಗರಗಳ ಮೇಲೆ ಪರಮಾಣು ಬಾಂಬು ಹಾಕಿ ಲಕ್ಷಾಂತರ ಜನರನ್ನು ಆಹುತಿ ತೆಗೆದುಕೊಂಡದ್ದು ಅಮೆರಿಕಾ ಎಸಗಿದ ಘೋರ ಅಪರಾಧ. ತನ್ನ ಬಳಿ ಮಾತ್ರವೇ ಸಾಮೂಹಿಕ ವಿನಾಶಕಾರಿ ಅಸ್ತ್ರವಿದೆ ಎಂದು ಅಹಂಕಾರದಿಂದ ಇತರ ದೇಶಗಳಿಗೆ ಬೆದರಿಕೆ ಹಾಕಲು ಮನುಕುಲದ ಮೇಲೆ ನಡೆಸಿದ ಅತ್ಯಾಚಾರ ಇದು ; ಇಪ್ಪತ್ತನೇ ಶತಮಾನದಲ್ಲಿ ಅಮೆರಿಕಾ ನಡೆಸಿದ ಮರೆಯಲಾಗದ ನರಮೇಧ. ಅನಂತರದ ವರ್ಷಗಳಲ್ಲಿ ಮಾನವಹಕ್ಕುಗಳ ಏಕೈಕ ಪ್ರತಿಪಾದಕನೆಂದು, ಪ್ರಜಾಪ್ರಭುತ್ವದ, ಸ್ವಾತಂತ್ರ್ಯದ ರಕ್ಷಕನೆಂದು ಕೊಚ್ಚಿಕೊಳ್ಳುತ್ತ ಅಮೆರಿಕಾದ ಅಧ್ಯಕ್ಷರುಗಳು ತಮ್ಮ ಆಡಳಿತೆಯ ಕಾಲದಲ್ಲಿ ಅನ್ಯದೇಶಗಳಲ್ಲಿ ಅವನ್ನು ಹರಣ ಮಾಡಲು ನಡೆಸಿದ ದುಷ್ಕೃತ್ಯಗಳ ಪಟ್ಟಿ ಸಾಕಷ್ಟು ದೊಡ್ಡದಾಗಿದೆ. ಕಮ್ಯುನಿಸಮ್ ವಿಸ್ತರಣೆಯನ್ನು ತಡೆಯುವ ಮೂರ್ಖತನದಿಂದ ರಾಷ್ಟ್ರೀಯ ವಿಮೋಚನಾ ಹೋರಾಟಗಳನ್ನು ಹತ್ತಿಕ್ಕಲು ನಡೆಸಿದ ಪರೋಕ್ಷ ಯುದ್ಧಗಳನ್ನು, ಮಾರಣ ಹೋಮಗಳನ್ನು ಜಗತ್ತು ಹೆಚ್ಚುಕಡಿಮೆ ಅರ್ಧಶತಮಾನ ಕಂಡಿತು. ನ್ಯೂಕ್ಲಿಯರ್ ಹಾಗೂ ರಾಸಾಯನಿಕ ಅಸ್ತ್ರಗಳನ್ನು ವರ್ಧಿಸಿ ತನ್ನ ಶಸ್ತ್ರಾಗಾರವನ್ನು ತುಂಬಿಕೊಂಡು ನಡೆಸಿದ ಮಾರಣಹೋಮಗಳಲ್ಲಿ ಎದ್ದುಕಾಣುವುದು ವಿಯೆಟ್ನಾಮ್‌ನ ಮೇಲೆ ಎರಡು ದಶಕಗಳ ಕಾಲ ನಡೆಸಿದ ಕ್ರೂರ ಕೃತ್ಯ. ಸ್ವಾತಂತ್ರ್ಯಪ್ರೇಮಿ, ಸ್ವಾಭಿಮಾನಿ ಜನರನ್ನು ಸೇನಾಬಲದಿಂದ ಮಣಿಸಲಾಗದು ಎಂಬುದನ್ನು ಪುಟ್ಟ ವಿಯೆಟ್ನಾಮ್ ಜನ ತೋರಿಸಿಕೊಟ್ಟರು. ಹೀನಾಯ ಸೋಲನ್ನು ಅನುಭವಿಸಿದರೂ ಅದರಿಂದ ಅಮೆರಿಕಾ ಪಾಠ ಕಲಿಯಲಿಲ್ಲ, ತನ್ನ ಪಾತಕ ಕೃತ್ಯಗಳನ್ನು ಮುಂದುವರಿಸಿದೆ. ಅಂದು ಅಮೆರಿಕಾದ ಗುರಿ ಇದ್ದುದು ಒಂದೇ, ಮಾನವ ಜೀವನವನ್ನು ಉಪೇಕ್ಷಿಸಿ ಎಲ್ಲೆಡೆ ಯಜಮಾನಿಕೆ ಸ್ಥಾಪಿಸಿ, ಅಮೆರಿಕಾದ ಜೀವನ ವಿಧಾನವನ್ನು ಇತರರ ಮೇಲೆ ಹೊರಿಸುವುದು. ಇಪ್ಪತ್ತನೇ ಶತಮಾನದ ಕೊನೆಯಲ್ಲಿ ಸೋವಿಯತ್ ಒಕ್ಕೂಟದ ವಿಘಟನೆಯ ನಂತರ ಏಕೈಕ ಬಲಿಷ್ಠ ರಾಷ್ಟ್ರವಾಗಿ ಹೊರಹೊಮ್ಮಿದ ಅಮೆರಿಕಾದ ಗುರಿ ಪ್ರಪಂಚದ ಎಲ್ಲ ರಾಷ್ಟ್ರಗಳ ಮೇಲೆ ತನ್ನ ಅಧಿನಾಯಕತ್ವ ಸ್ಥಾಪಿಸುವುದಾಗಿತ್ತು. ಈ ಗುರಿಯ ಸಾಧನೆಗಾಗಿ ಪರೋಕ್ಷ ಸಮರಗಳನ್ನು ನಡೆಸುವ, ಹಸ್ತಕ್ಷೇಪ ಮಾಡುವ ಕ್ರಮಗಳನ್ನು ಬದಿಗಿರಿಸಿ ನೇರ ದುರಾಕ್ರಮಣ ಕೃತ್ಯಗಳಲ್ಲಿ ತೊಡಗಿಕೊಳ್ಳಲಾರಂಭಿಸಿದೆ. ಇತರ ದೇಶಗಳ ಜನರನ್ನು ನಾನಾರೀತಿಯಲ್ಲಿ ಅಮಾನುಷವಾಗಿ ಕಗ್ಗೊಲೆ ಮಾಡುವುದರಲ್ಲಿ ಅಮೆರಿಕಾ ಲವಲೇಶವೂ ಹಿಂದೆ ಮುಂದೆ ನೋಡುತ್ತಿಲ್ಲ. ಈ ರಾಕ್ಷಸ ಪ್ರವೃತ್ತಿಯನ್ನು ಅಧ್ಯಕ್ಷ ಜಾರ್ಜ್ ಬುಷ್ ಎಂಬ ಮೂರ್ಖ ತೋರಿಸಿದ್ದಾನೆ, ತೋರಿಸುತ್ತಿದ್ದಾನೆ. ಇಪ್ಪತ್ತೊಂದನೇ ಶತಮಾನದಲ್ಲಿ ಅಮೆರಿಕಾದ ಕ್ರೌರ್ಯ ಯಾವ ಬಗೆಯದ್ದಾಗಿರುತ್ತದೆ ಎನ್ನುವುದಕ್ಕೆ ಇರಾಕಿನ ದುರಂತವೊಂದೇ ಸಾಕು. ಮಾನವ ಜೀವವನ್ನು ಅಮೆರಿಕದ ಆಡಳಿತವರ್ಗ ಎಷ್ಟು ನಿಕೃಷ್ಟವಾಗಿ ಕಾಣುತ್ತದೆ ಎಂಬುದಕ್ಕೆ ಅದು ಸಾಕ್ಷಿ.

ಅಮೆರಿಕದ ಆಳುವ ವರ್ಗದ ಇಂಥ ಘೋರ ಅಸಂವೇದಿ ಪ್ರವೃತ್ತಿಗೆ ಹಿನ್ನೆಲೆಯಿದೆ. ಆ ದೇಶದ ಇತಿಹಾಸವನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಅದು ವೇದ್ಯವಾಗುತ್ತದೆ. ಇತರ ದೇಶಗಳಂತೆ ಸುದೀರ್ಘವಾದ ಚರಿತ್ರೆ, ಸಾಂಸ್ಕೃತಿಕ ಪರಂಪರೆಗಳನ್ನು ಹೊಂದಿರುವ ನಾಡಲ್ಲ ಅದು. ಇನ್ನೂರ ಮೂವತ್ತು ವರ್ಷಗಳ ಹಿಂದಷ್ಟೇ ಸ್ಥಾಪನೆಗೊಂಡ ದೇಶ. ಕ್ರಿ.ಶ. ಹದಿನಾಲ್ಕನೇ ಶತಮಾನದಿಂದ ಸಿರಿಸಂಪತ್ತನ್ನು ಅರಸಿಕೊಂಡು ಬಂದು ನೆಲೆಸಿದ ಐರೋಪ್ಯ ದೇಶಗಳ 'ನಾಗರಿಕರು' ಕಟ್ಟಿ ಬೆಳೆಸಿದ ನಾಡು. ಅವರು ಬಂದು ನೆಲೆಸಿದ್ದ ದೇಸೀ ಜನರನ್ನು, ಅಂದರೆ ಅಮೆರಿಕನ್ ಇಂಡಿಯನ್ ಜನಾಂಗದವರನ್ನು ಒತ್ತರಿಸಿ, ಕೊಚ್ಚಿಹಾಕಿ, ಅವರ ನೆಲವನ್ನು ಕಬಳಿಸಿ, ಅವರ ನೆತ್ತರು ಕೋಡಿ ಹರಿಸಿ. ಈಗ ಈ ದೇಸೀ ಜನ ಸಣ್ಣ ಗುಂಪಾಗಿ ನಿರ್ನಾಮದ ಅಂಚಿನಲ್ಲಿದ್ದಾರೆ. ಹಾಗೆ ವಶಪಡಿಸಿಕೊಂಡ ನೆಲದಲ್ಲಿ ದುಡಿಯಲು ಬಿಳಿಯರು ಕರೆತಂದದ್ದು ತಮ್ಮ ವಸಾಹತುಗಳಲ್ಲಿದ್ದ ಕರಿಯ ಜನರನ್ನು. ಗುಲಾಮರನ್ನಾಗಿ ಅಂದು ಅರಬ್ ರಾಷ್ಟ್ರಗಳಲ್ಲಿದ್ದ ಗುಲಾಮರ ಮಾರಾಟಕೇಂದ್ರಗಳಿಂದ ಸಾಕಷ್ಟು ಮಂದಿ ಗುಲಾಮರನ್ನು ತಂದು ತೀವ್ರ ಶೋಷಣೆಗೀಡುಮಾಡಿ ಪ್ರವರ್ಧಮಾನಕ್ಕೆ ಬಂದ ದೇಶ ಅಮೆರಿಕಾ. ವಲಸೆಗಾರರಲ್ಲಿ ಮೇಲುಗೈ ಪಡೆದಿದ್ದ ಬ್ರಿಟಿಷರ ಪ್ರಾಬಲ್ಯದಿಂದಾಗಿ ಅವರ ವಸಾಹತಾಗಿದ್ದ ಈ ಭೂಭಾಗ ಸ್ವತಂತ್ರಗೊಂಡದ್ದು ಹದಿನೆಂಟನೇ ಶತಮಾನದ ಕೊನೆಯಲ್ಲಿ. ಸ್ವಾತಂತ್ರ್ಯ ಪಡೆದ ನಂತರವೂ ಸುಮಾರು ನೂರು ವರ್ಷಗಳ ಕಾಲ ಅತ್ಯಂತ ಹೀನಾಯವಾದ ಗುಲಾಮಿಪದ್ಧತಿ ಅಸ್ತಿತ್ವದಲ್ಲಿತ್ತು. ಗುಲಾಮರನ್ನು ಪ್ರಾಣಿಗಳಿಗಿಂತ ಕೀಳಾಗಿ ಕಾಣುತ್ತಿದ್ದುದಲ್ಲದೆ ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಅವರನ್ನು ಬಲಿಪಶುಗಳನ್ನಾಗಿ ಬಳಸಿಕೊಳ್ಳಲಾಗಿತ್ತು. ಅಮೆರಿಕಾದಲ್ಲಿ ಮಾನವಜೀವನವನ್ನು ಎಷ್ಟು ಕೀಳಾಗಿ ಕಾಣಲಾಗುತ್ತಿತ್ತು ಎನ್ನುವುದನ್ನು ಇಂದು ಊಹಿಸಿಕೊಳ್ಳುವುದೂ ಕಷ್ಟ. ಗುಲಾಮಿ ಪದ್ಧತಿ ಕೊನೆಗಾಣಿಸಲು ಅಂತರ್ಯುದ್ಧವೇ ನಡೆದುಹೋದುದು ಎಲ್ಲರಿಗೂ ತಿಳಿದಿರುವ ಸಂಗತಿ. ಅನಂತರವೂ ಕೂಡ ಕರಿಯ ಜನರ ಸ್ಥಿತಿ ಅಷ್ಟೇನೂ ಉತ್ತಮಗೊಳ್ಳಲಿಲ್ಲ. ನಾಗರಿಕ ಹಕ್ಕುಗಳಿಂದ ವಂಚಿತರಾದ ಈ ಜನ ನೂರಾರು ವರ್ಷ ಹೋರಾಟ ನಡೆಸಿ, ರಕ್ತ ಸುರಿಸಿ, ಜೀವ ತೆತ್ತು ಆಧುನಿಕ ಅಮೆರಿಕಾದಲ್ಲಿ ಸಮಾನ ಹಕ್ಕುಗಳನ್ನು ಪಡೆದುಕೊಂಡಿದ್ದಾರೆ. ಆದರೂ ಆರ್ಥಿಕವಾಗಿ ಅವರಿನ್ನೂ ಕೂಡ ಹಿಂದುಳಿದವರೇ ಆಗಿದ್ದಾರೆ. ಅಮೆರಿಕದ ಸಾಮ್ರಾಜ್ಯ ದಾಹಕ್ಕೆ ಬಲಿಪಶುಗಳಾಗಿದ್ದಾರೆ. ಈ ಹಿನ್ನೆಲೆಯನ್ನು ಸ್ಥೂಲವಾಗಿ ಪರಿಗಣಿಸಿದರೆ ಅನ್ಯಜನರ ಸಾವುನೋವುಗಳಿಂದ ಅಮೆರಿಕನ್ನರು ಏಕೆ ವಿಚಲಿತರಾಗದೇ ಇದ್ದಾರೆ ಎನ್ನುವುದು

ತಿಳಿಯುತ್ತದೆ, ಅಮೆರಿಕಾದ ಆಡಳಿತವರ್ಗ ಪ್ರಪಂಚದಲ್ಲಿ ನಡೆಸುತ್ತಿರುವ ರಾಕ್ಷಸೀಕೃತ್ಯಗಳನ್ನು ಸಹಿಸಿಕೊಂಡಿದ್ದಾರೆ ಎನ್ನುವುದು ಸ್ಪಷ್ಟವಾಗುತ್ತದೆ. ಆಳುವ ವರ್ಗ ಕೂಡ ತನ್ನ ನಾಗರಿಕರನ್ನು ವಂಚಿಸಿ, ಅಜ್ಞಾನಿಗಳನ್ನಾಗಿಸಿ, ಮಂಕು ಬರಿಸಿ ಅವರ ಬೆಂಬಲವನ್ನು ಗಿಟ್ಟಿಸಿಕೊಂಡಿದೆ. ಕಾರ್ಪೋರೇಟ್‌ಗಳ, ಬಹುರಾಷ್ಟ್ರೀಯ ಸಂಸ್ಥೆಗಳ ಕೈಯಲ್ಲಿರುವ ಮಾಧ್ಯಮಗಳು ಈ ಕಾರ್ಯದಲ್ಲಿ ನೆರವಾಗಿವೆ. ಮುಕ್ತ ಮಾರುಕಟ್ಟೆ ಅರ್ಥವ್ಯವಸ್ಥೆಯ ಪ್ರಯೋಜನದ ಕುರಿತು ತಲೆಕೆಡಿಸಿ, ಬಳಕೆದಾರಿ ಸಮಾಜವನ್ನು ಸೃಷ್ಟಿಸಿರುವ ದೇಶದಲ್ಲಿ ಎಲ್ಲವೂ ಮಾರಾಟದ ಸರಕುಗಳೇ. ಅಂಥ ನಾಡು ಸೃಷ್ಟಿಸುವ ನಾಯಕನೂ ಭಂಡನೇ, ನಿರ್ದಯಿಯೇ.

ಅಮೆರಿಕಾದ ಅಧ್ಯಕ್ಷ ಸ್ಥಾನದಲ್ಲಿ ಇಂದು ಕುಳಿತಿರುವ ಜಾರ್ಜ್ ಬುಷ್ ಇದರ ಪ್ರತಿರೂಪವೇ. ಈತ ಬುದ್ಧಿವಂತನೇನಲ್ಲ, ಮಹಾದಡ್ಡ ಎಂದು ಅಮೆರಿಕನ್ನರೇ ಕರೆದಿದ್ದಾರೆ. ಆದರೂ ಅವರಿಗೆ ಈ ಭಂಡನೇ ಬೇಕು. ಅಪ್ಪನಿಗೆ ತಕ್ಕ ಮಗ ಎನ್ನುವುದಕ್ಕಿಂತ ಅವನನ್ನೂ ಮೀರಿಸಿದವನು ಅನಾಚಾರದಲ್ಲಿ. ಸುಳ್ಳು ಹೇಳುವುದು, ಅಧಿಕಾರದ ದರ್ಪ ತೋರಿಸುವುದು, ಕ್ರೌರ್ಯದಲ್ಲಿ ಮಿಂಚುವುದು ಈ ಬುಷ್‌ಗೆ ನೀರು ಕುಡಿದ ಹಾಗೆ. ಇರಾಕಿನ ಜನರನ್ನು ಮಣಿಸಲು ಮಕ್ಕಳು ಮರಿ ಎನ್ನದೇ ಲಕ್ಷಗಟ್ಟಲೆ ಜನರನ್ನು ಆಹುತಿ ತೆಗೆದುಕೊಂಡಿರುವ ಮಹಾಕ್ರೂರಿ. ಅಬುಘ್ರಾಬ್, ಗ್ವಾಂಟೆನಾಮೋ ಕಾರಾಗಾರಗಳಲ್ಲಿ ಅಂತಾರಾಷ್ಟ್ರೀಯ ಕಾನೂನುಗಳೆಲ್ಲವನ್ನು ಗಾಳಿಗೆ ತೂರಿ ನಡೆಸಿರುವ ಅಮಾನುಷ ಹಿಂಸಾಚಾರವನ್ನು ಹಿಂಬಿಟ್ಟುಕೊಳ್ಳುವ ಮಹಾಮೊಂಡ ಈತ. ಸೆಪ್ಟೆಂಬರ್ ೧೧ರ ಘಟನೆಯ ನಂತರ ಹುಚ್ಚೆದ್ದು ಕುಣಿಯುತ್ತಿರುವ ಬುಷ್ ಮನಸೋ ಇಚ್ಛೆ ನಡೆದುಕೊಳ್ಳುತ್ತಿದ್ದಾನೆ. ಎಲ್ಲೆಲ್ಲೂ ಭಯೋತ್ಪಾದನೆ ಕಾಣುತ್ತಿರುವ ಈತ ಅದರ ವಿರುದ್ಧ ಸಮರ ನಡೆಸುವ ಹೆಸರಿನಲ್ಲಿ ತಲೆಕೆಟ್ಟವನಂತೆ ಆಡತೊಡಗಿದ್ದಾನೆ. ಇರಾಕಿನ ರಾಡಿಯಲ್ಲಿ ಸಿಕ್ಕುಹಾಕಿಕೊಂಡಿರುವ ಈತ ಈಗ ಇರಾನಿನ ಮೇಲೆ ಬೀಳಲು ಹಾತೊರೆಯುತ್ತಿದ್ದಾನೆ. ಅದಕ್ಕಾಗಿ ಷಡ್ಯಂತ್ರ ರೂಪಿಸಿದ್ದಾನೆ. ಒತ್ತಡ ಹೇರಿ ಭಾರತವನ್ನೂ ಇದರಲ್ಲಿ ಎಳೆದುಕೊಂಡಿದ್ದಾನೆ. ಇಂಥ ದುಷ್ಟ ಬುಷ್‌ಗೆ ಭಾರತದಲ್ಲಿ ಖಂಡಿತ ಸ್ವಾಗತವಿಲ್ಲ. ಸ್ವಾಭಿಮಾನವುಳ್ಳ ಭಾರತದ ಜನತೆ ಈತ ಭಾರತಕ್ಕೆ ಬರುವುದನ್ನು ವಿರೋಧಿಸಿದ್ದಾರೆ, ಪ್ರತಿಭಟಿಸಿದ್ದಾರೆ. ದುರಾಕ್ರಮಣಕಾರಿ ಬುಷ್ ಭಾರತದ ಅತಿಥಿಯಾಗಿರಲು ಅನರ್ಹ. ಆತ ಹಿಂದಿರುಗಲಿ ಎಂಬ ಘೋಷಣೆಗಳು ಮೊಳಗುತ್ತವೆ. ಮರ್ಯಾದಸ್ಥನಾಗಿದ್ದರೆ ಈತ ಇಲ್ಲಿಗೆ ಬರುತ್ತಲೇ ಇರಲಿಲ್ಲ. ಈತ ತೊಲಗಲಿ ಎಂಬುದೇ ನಮ್ಮ ಅಪೇಕ್ಷೆ.

ಅಮೆರಿಕಾದ ದುರಹಂಕಾರಕ್ಕೆ ಉದ್ಧಟತನಕ್ಕೆ ಅದರ ರಾಯಭಾರಿಗಳ ವರ್ತನೆ ಒಂದು ಉದಾಹರಣೆ. ಸಜ್ಜನಿಕೆಯ ಎಲ್ಲೆಯನ್ನೂ, ರಾಯಭಾರಿ ನಡವಳಿಕೆಯ ಕುರಿತ ಅಂತಾರಾಷ್ಟ್ರೀಯ ನಿಯಮ, ರೀತಿನೀತಿಗಳನ್ನೂ ಮೀರಿ ನಡೆದುಕೊಳ್ಳುತ್ತಾರೆ ಇವರು. ಬಲಾಢ್ಯ ರಾಷ್ಟ್ರವನ್ನು ಪ್ರತಿನಿಧಿಸುವ ಈ ರಾಯಭಾರಿಗಳು ಆಂತರಿಕ ವಿಷಯಗಳಲ್ಲಿ ತಲೆತೂರಿಸಲು ನೋಡುತ್ತಾರೆ. ಎಷ್ಟೋ ಪ್ರಕರಣಗಳಲ್ಲಿ ಅವರು ಇಪ್ಪತ್ತನಾಲ್ಕು ಗಂಟೆಗಳಲ್ಲಿ ದೇಶದಿಂದ ಹೊರದೂಡಲ್ಪಟ್ಟಿದ್ದಾರೆ. ಈಗ ಭಾರತದಲ್ಲಿ ಅಮೆರಿಕಾದ ರಾಯಭಾರಿ ಮುಲ್‌ಫೋರ್ಡ್‌ಗೆ ಆ ಕಾಲ ಬಂದಿದೆ. ಆದಷ್ಟು ಬೇಗ ಈತನನ್ನು ಜಾಗ ಖಾಲಿಮಾಡಲು ಹೇಳಿ ದೇಶದಿಂದ ಹೊರಹಾಕಬೇಕಾಗಿದೆ. ಈತನ ಉದ್ಧಟತನ ಕೆಲದಿನಗಳಿಂದ ವಿಪರೀತ ಮಟ್ಟಕ್ಕೆ ಹೋಗಿದೆ. ಮೊದಲನೆಯದು ಮುಲ್‌ಫೋರ್ಡ್ ಭಾರತ ಐಎಇಎ ಸಭೆಯಲ್ಲಿ ಇರಾನಿನ ವಿರುದ್ಧವಾಗಿ ಮತ ಚಲಾಯಿಸದಿದ್ದರೆ ಅಮೆರಿಕದೊಂದಿಗೆ ಮಾಡಿಕೊಂಡಿರುವ ಒಪ್ಪಂದದ ಗಡು ಮುಗಿಯುತ್ತದೆ ಎಂದು ಬೆದರಿಕೆ ಹಾಕಿದ. ಪತ್ರಿಕೆಗಳಲ್ಲಿ ಮಾಧ್ಯಮಗಳಲ್ಲಿ ಅದು ವರದಿಯಾಗಿ ಪ್ರತಿಭಟನೆ ಬಂದಾಗ ಕೂಡಲೇ ತಾನು ಹಾಗೆ ಹೇಳಲೇ ಇಲ್ಲ ಎಂದು ನುಣುಚಿಕೊಳ್ಳಲು ನೋಡಿದ. ಎರಡನೆಯದು, ಅವನ ಯಜಮಾನ ಜಾರ್ಜ್ ಬುಷ್‌ನ ಭಾರತದ ಪ್ರವಾಸದ ವಿರುದ್ಧ ಎಡಪಕ್ಷಗಳು ನೀಡಿರುವ ಕರೆಯನ್ನು ಟೀಕಿಸಿ, ಅಂಥ ಪ್ರತಿಭಟನೆಗಳು ಕೂಡದು ಎಂದು ಪಶ್ಚಿಮ ಬಂಗಾಳದ ಮುಖ್ಯಮಂತ್ರಿಗಳಿಗೆ ಪತ್ರವೊಂದನ್ನು ಬರೆದ. ಈ ವರ್ತನೆಯನ್ನು ಪ್ರತಿಭಟಿಸಿ ಪಶ್ಚಿಮ ಬಂಗಾಳದ ಮುಖ್ಯಮಂತ್ರಿ ಪ್ರಧಾನಿ ಮನಮೋಹನ ಸಿಂಗ್ ಅವರಿಗೆ ಪತ್ರ ಬರೆದು ರಾಯಭಾರಿಯನ್ನು ಹೊರಹಾಕಬೇಕೆಂದು ಕೋರಿದ್ದಾರೆ. ಎಡಪಕ್ಷಗಳು ಅಮೆರಿಕದ ಈ ರಾಯಭಾರಿಯನ್ನು ಕೂಡಲೇ ಉಚ್ಚಾಟನೆ ಮಾಡಬೇಕೆಂದು ಕೋರಿವೆ ಮತ್ತು ಈ ದುರ್ವರ್ತನೆಯನ್ನು ಪ್ರತಿಭಟಿಸಿವೆ. ಭಾರತದ ಜನತೆ ಸ್ವಾಭಿಮಾನವುಳ್ಳವರು, ಹದ್ದುಮೀರಿದ ರಾಯಭಾರಿ ವರ್ತನೆಯನ್ನು ಸಹಿಸುವುದಿಲ್ಲ. ಈತನನ್ನು ಹೊರಹಾಕುವಂತೆ ಒತ್ತಾಯ ತರಲು ಹೋರಾಟ ನಡೆಸುತ್ತಾರೆ. ಇದಕ್ಕೆ ನಮ್ಮ ಸಂಪೂರ್ಣ ಬೆಂಬಲವಿದೆ. ಈ ರಾಯಭಾರಿ ಕೂಡಲೇ ಇಲ್ಲಿಂದ ಕಾಲ್ತೆಗೆಯಲೇಬೇಕು.

## ಚಿತ್ರ - ವಿಚಿತ್ರ

೧೯೫೦ರ ದಶಕದಲ್ಲಿ ಮೈಸೂರಿನ ಮಹಾರಾಜ ಕಾಲೇಜಿನ ಸಂಸ್ಕೃತ ವಿದ್ಯಾರ್ಥಿಗಳ ಸಂತೋಷಕೂಟ. ಅಧ್ಯಾಪಕರೊಡನೆ ವಿದ್ಯಾರ್ಥಿಗಳ ಛಾಯಾಗ್ರಹಣ ಅದರ ಒಂದು ಮುಖ್ಯ ಭಾಗ. ಮಾನ್ಯ ಶ್ರೀ ಸಿ. ಮೃತ್ಯುಂಜಯಾಚಾರ್‌ಗೆ ಫೋಟೋ ಹಿಡಿಸಿಕೊಳ್ಳಲು ಸೈದ್ಧಾಂತಿಕ (!) ಅಡಚಣೆ ಇತ್ತು. ಭಾರತೀಯ ತತ್ತ್ವಶಾಸ್ತ್ರದಡಿ ಫೋಟೋಗೆ ನಿಲ್ಲಬಹುದೇ ಎಂದು ಅದ್ವೈತವಾರಿಧಿ ಪಾಟಣಕರ ಚಂದ್ರಶೇಖರ ಭಟ್ಟರನ್ನು ಕೇಳಿದರು. 'ನಾನಂತೂ ತೆಗೆಸಿಕೊಂಡಿದ್ದೇನೆ' ಎಂದು ನಿರಾಳವಾಗಿ ನುಡಿದುಬಿಟ್ಟರು ಅವರು. ನಮ್ಮ ಆಚಾರ್ ಅಂತೂ ಬರಲೇ ಇಲ್ಲ. ತಿಪಟೂರಿನ ಅವರ ಶಿಷ್ಯರಲ್ಲಿ ಯಾರಲ್ಲಾದರೂ ಆಚಾರ್ ಅವರ ಛಾಯಾಚಿತ್ರ ಇದೆಯೇ ಎಂದು ತನಿಖೆ ನಡೆಸಬೇಕು. ಅವರ ಮುಖ ಯಾರದ್ದಾದರೂ ಮನಸ್ಸಿನಲ್ಲಿ ಅಚ್ಚೊತ್ತಿದ್ದರೆ ಏನು ಮಾಡಬೇಕು ? ಅದನ್ನು ಅಳಿಸಿಹಾಕುವ ರಾಸಾಯನಿಕಗಳನ್ನು ಸಂಶೋಧಿಸಿ ತೆಗೆಯಬೇಕು. ಅದಿರಲಿ, ಆಚಾರ್ ಅವರಿಗೆ ಯಾರೂ ಒತ್ತಾಯ ಮಾಡಿ, ವಂಚಿಸಿ, ಫೋಟೋಗೆ ನಿಲ್ಲಲೇಬೇಕೆಂದು ಆಗ್ರಹಿಸಲಿಲ್ಲ. ಇದಾದ ಎಷ್ಟೋ ವರ್ಷಗಳ ನಂತರ ಯಾರೋ ತಿಳಿಗೇಡಿ ತನ್ನ ತರ್ಕಮತಿಯನ್ನು ಹರಿಯಬಿಟ್ಟು ಒಂದು ಮತಧರ್ಮದ ಗ್ರಂಥವನ್ನು ಸುಡುವುದಾಗಿ ಪ್ರಚಾರ ಮಾಡಿದ. ಎರಡು ದಿನದಲ್ಲಿ ದೆಹಲಿಯಿಂದ ಮೈಸೂರು ಪೊಲೀಸರಿಗೆ ಸೂಚನೆ ಬಂತು : ಹಾಗೆ ಮಾಡದಂತೆ ಆತನನ್ನು ನಿಗ್ರಹಿಸಿ, ಎಂದು. ಯಾವುದೋ ಪಶ್ಚಿಮ ಏಷ್ಯಾ ದೇಶದ ರಾಯಭಾರಿಯೊಬ್ಬ ಭಾರತದ ವಿದೇಶಾಂಗ ಸಚಿವರಿಗೆ ಆ ಬಗ್ಗೆ ಮನವಿ ಸಲ್ಲಿಸಿದ್ದನಂತೆ. ನಿರ್ಗುಣ ಬ್ರಹ್ಮತತ್ತ್ವವನ್ನು ಮಾನ್ಯಮಾಡುವವರಿಗೆ ಈ ರೀತಿಯ ಜಡ್ಡುತನ ಅರ್ಥವಾಗುವುದು ಸುಲಭ, ಆದರೆ ಅದನ್ನು ಅಂಗೀಕರಿಸುವುದು ಕಷ್ಟ. ಜಗತೀಕರಣದ ಮಹಾಪೂರ ಹೇಗಿದೆಯೆಂದರೆ ಡೆನ್ಮಾರ್ಕಿನಲ್ಲಿ ವ್ಯಂಗ್ಯಚಿತ್ರ ಬರೆದರೆ ಬೆಂಗಳೂರಿನ ಶಿವಾಜಿನಗರದಲ್ಲಿ ಸರ್ಕಾರಿ ಬಸ್ಸುಗಳ ಗಾಜುಗಳು ಪುಡಿಪುಡಿಯಾಗುತ್ತವೆ ! ''ಅವರನ್ನು ಕ್ಷಮಿಸು ಪ್ರಭುವೆ, ಅವರೇನು ಮಾಡುತ್ತಿದ್ದಾರೆಂದು ಅವರು ಅರಿಯರು'' ಎಂದು ವ್ಯಂಗ್ಯಚಿತ್ರ ಪ್ರಕಟಿಸಿ ಮೆರೆದವರಿಗೆ ಮತ್ತು ಬಸ್ಸು ಪುಡಿ ಮಾಡಿದವರಿಗೆ ಹೇಳೋಣವೇ ಎಂದರೆ ಸಂವಹನ ಸಾಧ್ಯವಿಲ್ಲದ ಸನ್ನಿವೇಶ !

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




**ಜನವರಿ ಸಂಚಿಕೆ**

ಹೊಸವರ್ಷದ ಶುಭಾಶಯಗಳೊಂದಿಗೆ ಪ್ರಕಟಿಸಿರುವ 'ಹೊಸತು' ವಿಶೇಷ ಸಂಚಿಕೆಯ ಬಗ್ಗೆ ನನ್ನ ಸಂತೋಷ ವ್ಯಕ್ತಪಡಿಸಲು ನನ್ನಲ್ಲಿ ಸಾಕಷ್ಟು ಪದ ಸಂಪತ್ತಿಲ್ಲವೆಂದರೆ ಅದು ಅತಿಶಯೋಕ್ತಿಯ ಹೇಳಿಕೆ ಎಂದು ಯಾರೂ ಭಾವಿಸುವಂತಿಲ್ಲ. ಹೊರಪುಟ, ಒಳ ಹೂರಣ ಸಂಚಿಕೆಯನ್ನು ಅತ್ಯಂತ ಮೌಲಿಕಗೊಳಿಸಿದೆ. ಜಿ. ಆರ್. ಅವರ ಸುದೀರ್ಘ, ಪ್ರಬುದ್ಧ ಸಂಪಾದಕೀಯ ಹೊಸ ಆಲೋಚನೆಗಳನ್ನು ಅನಾವರಣಗೊಳಿಸಿದೆ. ಡಾ|| ರೊದ್ದಂ ಅವರ ಸಂದರ್ಶನ ವಿಜ್ಞಾನದ ಅಂತಿಮ ಗುರಿಯನ್ನು ಕುರಿತಾಗಿದೆ. ಹಾಗೆಯೇ ಸುವರ್ಣ ಕರ್ನಾಟಕದ ಅಭಿವೃದ್ಧಿ, ಶಿಕ್ಷಣ ಪದ್ಧತಿ, ರೈತರ ಸಮಸ್ಯೆ, ಸಾಹಿತ್ಯ-ಕಲೆ-ಸಂಸ್ಕೃತಿಗಳ ಅನನ್ಯತೆ, ಜನತಾ ಚಳವಳಿಗಳು – ಹೀಗೆ ಇವುಗಳ ಜೊತೆ ನಾಟಕ, ಹಾಸ್ಯ, ಲಲಿತ ಪ್ರಬಂಧ, ಕಾವ್ಯಗಳನ್ನೂ ಒಳಗೊಂಡು ಈ ಸಂಚಿಕೆಯನ್ನು ಬಹಳ ಉಪಯುಕ್ತಗೊಳಿಸಿದೆ. ಟೊಳ್ಳು ಬರಹಗಳಾಗಲೀ ಟೀಕೆಗೆ ಈಡುಮಾಡುವ ಮೈ ಪ್ರದರ್ಶನದ ಕೆಟ್ಟ ಚಿತ್ರಗಳಾಗಲೀ ಇಲ್ಲಿಲ್ಲ; ಜೊತೆಗೆ ತಪ್ಪುಗಳಿಲ್ಲದ ಸೊಗಸಾದ ಮುದ್ರಣ. ಇವೆಲ್ಲವೂ ಜಿ. ಆರ್. ಸಂಪಾದಕತ್ವದಲ್ಲಿ ಸಂಬಂಧಪಟ್ಟವರಲ್ಲಿ ಇರುವ ಬದ್ಧತೆ, ಪ್ರೀತಿಯಿಂದ ಸಂಚಿಕೆಯ ಬಗ್ಗೆ ತೊಡಗಿಸಿ ಕೊಂಡಿರುವ ಬಗೆಯನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಮತ್ತೆ ಮತ್ತೆ ಓದುತ್ತ ಒಂದು ಆಕರಗ್ರಂಥವನ್ನಾಗಿ ಜೋಪಾನ ಮಾಡುವಂಥ ಸಂಚಿಕೆ.

ಬೆಂಗಳೂರು **ಎಚ್. ಜಿ. ಸೋಮಶೇಖರ ರಾವ್**

ಹೊಸ ವರ್ಷದ ಶುಭಾಶಯಗಳೊಂದಿಗೆ, ಆಕರ್ಷಕ ಮುಖಪುಟದೊಂದಿಗೆ, ವಿಶೇಷ ಸಂಚಿಕೆಯಾಗಿ, ಮೌಲಿಕ ಲೇಖನಗಳೊಂದಿಗೆ ನಮ್ಮ ಮನೆ-ಮನ ತಲುಪಿದ ೨೦೦೬ರ ಮೊದಲ ಸಂಚಿಕೆ (೧/೦೬) ಹೃನ್ಮನ ತಣಿಸಿತು. ಸಂಪಾದಕೀಯ ಗಮನ ಸೆಳೆಯಿತು. ೨ನೇ ವರ್ಷದಲ್ಲಿ ಮುನ್ನಡೆಯುತ್ತಿರುವ 'ಹೊಸತು' ಸಂಪಾದಕೀಯ ಬಳಗಕ್ಕೆ ಅನಂತ ವಂದನೆಗಳು. ಈ ಸಂಚಿಕೆಯ ಪರಿವಿಡಿಯನ್ನು ಓದುತ್ತಾ ಹೋದೆ. ಯಾವ ಲೇಖನ ಓದುವುದು, ಯಾವುದು ಬಿಡುವುದು ಎಂಬ ಜಿಜ್ಞಾಸೆ ಮೂಡಿದ್ದಂತೂ ಸತ್ಯ. ಖ್ಯಾತನಾಮರ ಬರಹ ಗಳು ನಮ್ಮೊಳಗಿನ ಅಂತರಂಗಕ್ಕೆ ಸ್ಪರ್ಶಸುಖ ನೀಡಿದವು. ಒಟ್ಟಿನಲ್ಲಿ ವರ್ಷದ ಪ್ರಾರಂಭದಲ್ಲಿಯೇ ಮೌಲಿಕ ಬರಹಗಳೊಂದಿಗೆ ವಿಭಿನ್ನ ರೀತಿಯ ಸಾಹಿತ್ಯ ದೂಟ ಉಣಬಡಿಸಿದ 'ಹೊಸತು' ಮುಂಬರುವ ಸಂಚಿಕೆಗಳಲ್ಲೂ ಇದೇ ರೀತಿ ಮುಂದುವರೆಯಲಿ. ಶುಭಾಶಯಗಳು.

ಮೈಸೂರು **ಕಾಳೀಹುಂಡಿ ಕೆ. ವಿ. ಶಿವಕುಮಾರ್**

ಪ್ರೊ|| ಕೆ. ಕುಶಾಲಪ್ಪ ಗೌಡ ಅವರ 'ಕಾಗುಣಿತದ ಮಾರ್ಪಾಟು' ಲೇಖನದಲ್ಲಿ ಕಾಗುಣಿತದ ಕೆಲವು ತಪ್ಪು ಪ್ರಯೋಗಗಳನ್ನು ತಿಳಿಸಿ ಸರಿಯಾದ ಕ್ರಮವೆಂದು ಕೆಲವೊಂದು ಉದಾಹರಣೆಗಳನ್ನು ನೀಡಿದ್ದಾರೆ. ಅದರಲ್ಲಿ 'ಅರ್ಕ ಒತ್ತು' ಮತ್ತು 'ದೀರ್ಘ ಚಿಹ್ನೆ'ಯ ಪಲ್ಲಟದ ಕುರಿತು ಪ್ರಸ್ತಾಪಿಸಿದ್ದಾರೆ.

'ನಿರ್ದೇಶನ' ಪದದಲ್ಲಿ ದೀರ್ಘವು 'ದೆ'ಗೆ ಸೇರಿದ್ದು ಅದನ್ನ ಅರ್ಕ ಒತ್ತು ಬೇರ್ಪಡಿಸುತ್ತಿದೆ. ಅದು ಭಾಷಿಕವಾಗಿಯೂ ಸರಿಯಾದದ್ದಲ್ಲ, ಆದ್ದರಿಂದ 'ನಿರ್ದೇಶನ' ಎಂದು ಬರೆಯುವುದು ಸರಿಯಾದ ಕ್ರಮ. ಆದರೆ 'ನಿರ್ದೇಶನ' ಪದವನ್ನು 'ನಿರ‍್ದೇಶನ' ಎಂದು ಬರೆದು ಅರ್ಕ ಒತ್ತನ್ನು ಉಳಿಸುವ ಮತ್ತು ಗೊಂದಲ ನಿವಾರಣೆಯಾಯಿತೆಂದು ಖುಷಿಪಡಲು ಸಾಧ್ಯವಿಲ್ಲ.




ಏಕೆಂದರೆ 'ನಿರ‍್ದೇಶನ' ಎಂಬುದನ್ನು ಓದುವಾಗ 'ನಿರ್‌ದೇಶನ' ಎಂದಾಗಿ ಒತ್ತು 'ದೇ'ಯ ಮೇಲೆ ಬೀಳುತ್ತದೆ. ಬರವಣಿಗೆಯಲ್ಲಿ 'ರೇ' ಪ್ರಧಾನ ಅಕ್ಷರವಾಗಿ ದೀರ್ಘ ಅದರದ್ದೇ ಭಾಗವಾಗಿ ಕಾಣುತ್ತದೆ. ಶ್ರಾವ್ಯದಲ್ಲಿ ಮಾತ್ರ 'ದೇ'ಯ ಪ್ರಾಧಾನ್ಯತೆ ಉಳಿಯುತ್ತದೆ. 'ಅರ್ಕ' ಎಂಬಲ್ಲಿ ಕೂಡಾ ಅವರು ಹೇಳುವಂತೆ ಬರೆದಲ್ಲಿ – 'ಅರ‍್ಕ' – ಇದೇ ಸಮಸ್ಯೆ ತಲೆದೋರುತ್ತದೆ. ಪ್ರೊ|| ಕೆ. ಕುಶಾಲಪ್ಪ ಗೌಡರು ಹೇಳುವಂತೆ ಲಿಪಿಯಲ್ಲಿ ಒಂದು ಸಂಜ್ಞೆಯ ಉಳಿತಾಯವಾದಂತೆ ಆಗುವುದು ನಿಜವಾದರೂ ಗೊಂದಲ ಹಾಗೆಯೇ ಮುಂದುವರಿಯುತ್ತದೆ.

ಪ್ರಾಯಶಃ ಈ ಗೊಂದಲವನ್ನು ಗಮನಿಸಿಯೇ 'ರ'ಕ್ಕೆ ಎರಡು ಒತ್ತುಗಳನ್ನು ಬಳಕೆಗೆ ತಂದಂತೆ ಕಾಣುತ್ತದೆ : '್ರ' ಮತ್ತು 'ೕ'ಗಳನ್ನು, 'ಸರ‍್ರನೆ', 'ತಿರ‍್ರನೆ' ಮುಂತಾದ ಕಡೆಗಳಲ್ಲಿ ಅರ್ಕ ಒತ್ತನ್ನು ಬಳಸಲು ಸಾಧ್ಯವಿಲ್ಲ. ಹಾಗೆಯೇ 'ಅರ್ಕ', 'ತರ್ಕ' ಎನ್ನುವಲ್ಲಿ 'ಅರ‍್ಕ', 'ತರ‍್ಕ' ಎಂಬುದಾಗಿ ಬರೆಯಬಹುದೇ ಹೊರತು 'ಅರ‍್ಕ', 'ತರ‍್ಕ' ಎಂದು ಬರೆಯಲು ಸಾಧ್ಯವಿಲ್ಲ; ತರ್ಕ ಇದನ್ನು ಒಪ್ಪುವುದಿಲ್ಲ. ವಚನಕಾರರು 'ಶಕ್ತಿ', 'ಭಕ್ತಿ'ಗಳನ್ನು 'ಶಕುತಿ', 'ಭಕುತಿ' ಎಂದು ಬಳಸಿದ್ದರ ಹಿಂದೆ ಕೂಡ ಇದೇ ಬಗೆಯ 'ತರ್ಕ' ಇದ್ದಿರಬಹುದು.

ಇಷ್ಟಕ್ಕೂ 'ನಿರ್ದೇಶನ', 'ಸೂರ್ಯೋದಯ', 'ವರ್ಗೀಕರಣ' ಮುಂತಾಗಿ ಅರ್ಕ ಒತ್ತು ದೀರ್ಘ ದೊಂದಿಗೆ ಬರುವಲ್ಲಿ ಮಾತ್ರ ಈ ಗೊಂದಲವಿದೆ. ಇದನ್ನ 'ದೆ'ಯ ದೀರ್ಘವನ್ನ 'ದೇ'ಯೊಂದಿಗೇ ಬಳಸಿ ಅನಂತರ ಅರ್ಕ ಒತ್ತು ಹಾಕುವುದರ ಮೂಲಕ ಸರಳವಾಗಿ ಪರಿಹರಿಸಿಕೊಳ್ಳಬಹುದು. 'ನಿರ್ದೇಶನ' ಎಂದು ಬಳಸಿ ಅಲ್ಲ.

ಶಂಕರಘಟ್ಟ **ಬಿ. ಗಣಪತಿ**

ಕನ್ನಡದ ಕಾಗುಣಿತದಲ್ಲಿ 'ರ್ದೇ' ಎಂಬುದು ಹೇಗಿರಬೇಕೆಂಬ ಜಿಜ್ಞಾಸೆಯ ಹಿಂದೆ ಇರುವ ಕಾಳಜಿ ಸರಿ, ಆದರೆ ಸೂಚಿಸಲಾಗಿರುವ ಪರಿಹಾರ ಪೂರ್ತಿ ಸಮರ್ಪಕ ಎನಿಸುವುದಿಲ್ಲ. 'ಪಲ್ಯ' ಮುಂತಾದ ಯಾವುದೇ ಸಂಯುಕ್ತಾಕ್ಷರ ನೋಡಿ. ಅಲ್ಲಿ 'ಲ' ಅರ್ಧಾಕ್ಷರ; ಆದರೆ ನಾವು ಬರೆಯುವುದು ಪೂರ್ಣಾಕ್ಷರ. ಹೆಚ್ಚು ಉಚ್ಚಾರಿತವಾದ 'ಯ' ಕೇವಲ ಒತ್ತಾಗಿ ಪರಿಣಮಿಸಿದೆ. ಇನ್ನೂ ಅನೇಕ ಉದಾಹರಣೆಗಳನ್ನು ನೀಡಬಹುದು, ಆದರೆ ಇಲ್ಲಿ ಬೇಕಾಗಿಲ್ಲ. ಅಕ್ಷರಗಳು ಮತ್ತು ಲಿಪಿ ಭಾಷೆಗೆ ಪ್ರತಿಮೆಗಳು. ಅವನ್ನು ನಿಷ್ಕೃಷ್ಟವಾಗಿ ಉಚ್ಚಾರಣೆಗೆ ಹೊಂದಿಸಲೇಬೇಕೆಂಬ ತುರ್ತು ಏನೂ ಇಲ್ಲ. ವಿಶ್ವದ ಎಲ್ಲ ಭಾಷೆಗಳಲ್ಲೂ ಇಂತಹ ನ್ಯೂನತೆಗಳಿವೆಯಾದರೂ ಅವೆಲ್ಲಾ ವೃದ್ಧಿಹೊಂದಿವೆ, ಹೊಂದುತ್ತಿವೆ.

ಮೈಸೂರು **ಎಂ. ವಿಶ್ವಾಸ್**

**ಫೆಬ್ರವರಿ ಸಂಚಿಕೆ**

ಫೆಬ್ರವರಿ ಸಂಚಿಕೆಯ ಮುದ್ದಾದ ಮಗುವಿನ ಮುಖಪುಟ ನೋಡಿ ಸಂತಸವಾಯಿತು. ಸಂಪಾದಕೀಯ ವಂತೂ ಒಂದು ನಿಘಂಟಿದ್ದಹಾಗೆ. ಕರ್ನಾಟಕ 'ಕಣರಾಜ್ಯ' ವಿಷಯ ಅರಿತುಕೊಳ್ಳುವಂಥದ್ದು. ಬಾಹುಬಲಿ ಸ್ವಗತದಲ್ಲಿ ಡಾ|| ಸರಸ್ವತಿ ವಿಜಯ ಕುಮಾರ್‌ರವರು ಮಹಾಮಸ್ತಕಾಭಿಷೇಕ ಸಮಯದಲ್ಲಿ ಒಂದು ಸ್ವಗತ ನೀಡಿರುವುದು ಸಮಯೋಚಿತವಾಗಿದೆ. ದೇಶದ ಬೆನ್ನೆಲುಬು ರೈತ. ಆತನನ್ನು ಕಡೆಗಾಣಿಸಿದರೆ ಕೇಡು ತಪ್ಪದು. ಇದರ ಬಗೆಗಿನ ಲೇಖನ ಸ್ವಾಗತಾರ್ಹ. ಮುಗ್ಧ ಮನಸ್ಸಿನ ಚೋಮನ ಆಡು ಕಥೆ ತುಂಬಾ ಅರ್ಥಗರ್ಭಿತವಾಗಿತ್ತು. ಮಕ್ಕಳ ಮನಸ್ಸು ಜೇಡಿಮಣ್ಣಿನ ಮುದ್ದೆಯಂತೆ. ಅದನ್ನು ಯಾವ ರೀತಿ ಬೇಕಾದರೂ ಸಹ ಪರಿವರ್ತಿಸಬಹುದು. 'ಆಪ್ತಮಿತ್ರದಲ್ಲೇನಿದೆ ?' ವಿಮರ್ಶೆ ಚೆನ್ನಾಗಿದೆ. ಒಂದು ಜನಪದ ತ್ರಿಪದಿ ಬಗೆಗಿನ ತಿಳಿವು ತುಂಬಾ ಮಾರ್ಮಿಕವಾಗಿದೆ.

ವಿಟ್ಲಾಪುರ **ಆ. ಮೃತ್ಯುಂಜಯ**

ವಿಜ್ಞಾನವು ಕಾಲಿಕವಾದ ಒಂದು ಫ್ಯಾಷನ್ ಆಗಿದೆಯೇ ?

ಅಪರೂಪವೆಂದೆನಿಸಿದರೂ ಸಮರ್ಪಕವೆಂದೆನಿಸುವ ಸಾರ್ವಕಾಲಿಕ ವಿಚಾರವೊಂದರ ಅತ್ಯಂತ ಗಂಭೀರ ಚಿಂತನೆಗಳು ಎರ್‌ವಿನ್ ಸಿ. ಷ್ರೋಡಿಂಗರರ ಲೇಖನವನ್ನು ಪ್ರಕಟಿಸಿ ಓದುಗರಲ್ಲಿ ಕುತೂಹಲ ಮೂಡಿಸಿರುವ 'ಹೊಸತು' ಸದಾ ಹೊಸತನವನ್ನು ಮೆರೆಯುತ್ತಿರುವು ದಕ್ಕಾಗಿ ಅಭಿನಂದನೆಗಳು. ವಿಶೇಷವಾದ ಗುಣಗಳ ಅಧ್ಯಯನವು ವಿಜ್ಞಾನವೆಂದು ಮನುಕುಲಕ್ಕೆ ಪರಿಚಿತ ವಾಗಿದೆ. ಖಚಿತವಾದ ಮಾಹಿತಿಗಳಂತೆ ಸೃಷ್ಟಿಯ ನಿಗೂಢತೆ, ಅಗಾಧತೆ ಮತ್ತು ವಿಸ್ತಾರಗಳ ಬಗ್ಗೆ ಮಾನವರು ಕಂಡುಕೊಂಡ ಸಿದ್ಧಾಂತಗಳನ್ನು ತನ್ನ ಮನೋಭಿಪ್ರಾಯದಂತೆ ಮನಗಂಡು ಅದನ್ನು ಜನಸಮುದಾಯಕ್ಕೆ ತಿಳಿಸುವ ತಮ್ಮ ಪ್ರಯತ್ನಗಳನ್ನು ಪ್ರಯೋಗಗಳ ಮೂಲಕ ವಿವರಿಸಲು ಪಡುವ ಶ್ರಮವನ್ನು ಶೋಧನೆ, ಪರಿಶೋಧನೆ, ಸಂಶೋಧನೆ ಗಳೆಂದು ಕರೆದು ಅವುಗಳನ್ನು ವಿವಿಧ ಪ್ರಕಾರಗಳಾಗಿ ವಿಂಗಡಿಸಿ ಅಭ್ಯಸಿಸುವ ವಿಧಾನವನ್ನು ಆಧುನಿಕ ದಾರ್ಶನಿಕರೆನಿಸಿರುವ ವಿಜ್ಞಾನಿಗಳು ವಿಜ್ಞಾನವೆಂದು ಮನಗಂಡಿರುವರು. ಈ ಕ್ಷಣ ಎಂಬುದು ಮಾತ್ರ ಸತ್ಯ ಎಂಬ ವಿಷಯವನ್ನು ಮರೆಮಾಚಿ ನಾಗರಿಕತೆ ಎಂಬ ಮಾನವ ಜೀವವಿಧಾನವನ್ನು ಅತ್ಯಂತ ಕಠಿಣಗೊಳಿಸಿ ಪರಿಸರದ ಪರಿಜ್ಞಾನವಿಲ್ಲದೆ ಪ್ರಯೋಗಗಳಲ್ಲಿ ನಿರತರಾಗುತ್ತಾ ಜನರನ್ನೂ ಸೆಳೆಯುತ್ತಾ ನಿರ್ಮಿಸಿಕೊಂಡ ವಾದಗಳ ಸರಪಳಿಯಲ್ಲಿ ಜ್ಞಾನವನ್ನು ಕಳೆದುಕೊಂಡು ತರ್ಕಬದ್ಧತೆಗೆ ವಾಸ್ತವದ ಚೌಕಟ್ಟನ್ನು ನೀಡದೆ ಕಲ್ಪನೆ ಹಾದಿಯಲ್ಲಿ ಪ್ರಕೃತಿಯನ್ನು ಮರೆಮಾಚಿದ ತನ್ನ ವಿಚಾರಗಳು ಫ್ಯಾಷನ್ ಆಗಿ ಜನರನ್ನು ಸೆಳೆದಿರುವುದು ಸತ್ಯ. ಇಂದ್ರಿಯಗಳ ಮಿತಿಯೊಳಗಡೆ, ಚಲನೆ, ವಿಕಾಸ ಕ್ರಿಯೆ ಹಾಗೂ ವಿಶ್ವವನ್ನು ಒಪ್ಪಿಕೊಳ್ಳಲು ತಳೆದ ನಿಲುವುಗಳು ವಿಜ್ಞಾನ ಎಂಬ ಸಾಧನೆಯಲ್ಲಿ ನಿರತರಾಗಿ ಇರುವ ಮಾನವರು ಸತ್ಯದಿಂದ ದೂರ ಸರಿಯುತ್ತಿರು ವುದು ನಮ್ಮ ಆವಿಷ್ಕಾರಗಳಿಂದ ಸ್ಪಷ್ಟವಾಗಿದೆ.

ಬೆಂಗಳೂರು **ನರೇಂದ್ರ ಸಿರಕಜೆ**

**ಆಪ್ತಮಿತ್ರ**

ಡಾ|| ಪ್ರಕಾಶ್ ಸಿ. ರಾವ್‌ರವರು 'ಆಪ್ತಮಿತ್ರ' ಚಿತ್ರದ ಬಗ್ಗೆ ನೈಜ ವಿಶ್ಲೇಷಣೆ ನೀಡಿದ್ದಾರೆ. ಇಲ್ಲಿ ನೋಡುಗನ ದೃಷ್ಟಿಕೋನವನ್ನು ಪಕ್ಕಕ್ಕಿಡಬೇಕಾದ ಅವಶ್ಯಕತೆ ಹೆಚ್ಚಾಗಿ ಎದ್ದುಕಾಣುತ್ತದೆ. ವೈಜ್ಞಾನಿಕ ಮನೋಭಾವದಿಂದಲಾಗಲಿ, ಮಾನಸಿಕ ರೋಗಕ್ಕೆ ಗುರಿಯಾಗಿರುವಂತಹ ಓರ್ವ ವ್ಯಕ್ತಿಯ ಸುಪ್ತ ನಡವಳಿಕೆಗಳ ಕುರಿತಾಗಲಿ, ತುಲನಾತ್ಮಕ ಚಿಂತನೆಗೆ ಅವಕಾಶವಿಲ್ಲವೆಂಬುದು ಚಿತ್ರವನ್ನು ನೋಡಿಬಂದ ಪ್ರೇಕ್ಷಕನ ಅಂಬೋಣ. ಆದರೆ ಒಂದು ವಿಷಯದ ಕಡೆಗಂತೂ ಲೇಖಕರು ಪ್ರತಿಪಾದಿಸಿದಂತೆ ಒರೆಹಚ್ಚಿ ನೋಡಬೇಕಾದ ಅಗತ್ಯ ಹೆಚ್ಚಾಗಿ ತೋರುತ್ತದೆ.

ಸಾಮಾನ್ಯವಾಗಿ ಮನೋರೋಗಕ್ಕೆ ತುತ್ತಾದ ವ್ಯಕ್ತಿಯ ಬಗ್ಗೆ ಹೆಚ್ಚಾಗಿ ಊಹಾಪೋಹಗಳು, ಜನರ ವಿಕೃತ ನಡವಳಿಕೆ ಜೊತೆಗೆ ತಮ್ಮ ಹತ್ತಿರದವರಿಂದಲೇ ತಿರಸ್ಕಾರ ಪ್ರವೃತ್ತಿ ಇವೇ ಮೊದಲಾದುವುಗಳು ಹೆಚ್ಚು ಇಂತಹ ಸಂದರ್ಭ, ಸನ್ನಿವೇಶಗಳ ಪರಿಣಾಮಕಾರಿ ದೃಶ್ಯ, ಸನ್ನಿವೇಶಗಳು ಚಿತ್ರದಲ್ಲಿ ಅಷ್ಟಾಗಿ ಇಲ್ಲದಿದ್ದರೂ ಮೂಢನಂಬಿಕೆ ಮತ್ತು ಮನೋವೈಜ್ಞಾನಿಕ ಚಿಕಿತ್ಸಾಪದ್ಧತಿ ಇವೆರಡನ್ನೂ ಸಮಾನಾಂತರವಾಗಿ ಚಿತ್ರೀಕರಿಸಲು ಪ್ರಾಮಾಣಿಕ ಪ್ರಯತ್ನ ನಡೆದಿದ್ದರೂ, ವೈಜ್ಞಾನಿಕ ಪುರಾವೆ ಮತ್ತು ಚಿಕಿತ್ಸಾಪದ್ಧತಿ ಇವುಗಳನ್ನು ಅಳವಡಿಸಿಕೊಳ್ಳುವಲ್ಲಿ ಚಿತ್ರ ಸೋತಿದೆ ಎಂಬುದು ಲೇಖಕರ ವಾದ. ಅದಂತೂ ಖಂಡಿತ. ಇಷ್ಟೊಂದು ಮುಂದುವರಿದ ಕಾಲದಲ್ಲಿಯೂ ಪ್ರೇಕ್ಷಕ ಇಂತಹ ಕಟುಸತ್ಯವನ್ನು ಏಕೆ ಬದಿಗಿಟ್ಟು ನೋಡುತ್ತಾನೆ ಎಂಬುದಂತೂ ಒಂದು ಯಕ್ಷಪ್ರಶ್ನೆಯೇ ನಿಜ.

ದೇವರು-ದೆವ್ವ ಎನ್ನುವ ಎರಡು ಧ್ರುವಗಳ ಸುತ್ತಲೂ ಈಗಲೂ ಅನೇಕರು ಸುತ್ತುತ್ತಿರುವುದನ್ನು ಕಾಣಬಹುದು. ಈ ಲಾಭದ ಅಂಶವನ್ನು ನಿರ್ಮಾಪಕ, ನಿರ್ದೇಶಕರು ಬಳಸಿಕೊಂಡಿರುವುದು ಚಿತ್ರದ ಯಶಸ್ಸಿಗೆ ಕಾರಣವಿರಬಹುದೇನೋ !

ಒಟ್ಟಾರೆ ಮನೋರಂಜನೆ ದೃಷ್ಟಿಯಿಂದ ಚಿತ್ರ ಯಶ ಸಾಧಿಸಿದ್ದರೆ, ಮನೋವೈಜ್ಞಾನದ ಆಧಾರದಿಂದಲಂತೂ ದೂರ ಎನ್ನುವ ಮಾತನ್ನು ಒಪ್ಪಲೇ ಬೇಕು.

ಇಂತಹ ಹಲವಾರು ಧಾರಾವಾಹಿಗಳಂತೂ ನಮ್ಮ ಕಿರುತೆರೆಯಲ್ಲಿ ದಿನನಿತ್ಯ ರಾರಾಜಿಸುತ್ತಿರುವುದು ನಮ್ಮ ವೀಕ್ಷಕ ವೃಂದವನ್ನು ಎತ್ತಕಡೆ ಕೊಂಡೊಯ್ಯುವುದೋ ಕಾದುನೋಡಬೇಕಾಗಿದೆ.

ಬೆಂಗಳೂರು **ನೆ. ಲ. ರಾಮಮೂರ್ತಿ**

**ಭಾಷೆ ಮತ್ತು ವೃತ್ತಿ**

ಮಾಹಿತಿ ತಂತ್ರಜ್ಞಾನ ಹಾಗೂ ಉದಾರೀಕರಣ ದಿಂದಾಗಿ ಭಾರತದಲ್ಲಿ ಹಾಗೂ ವಿಶ್ವದಲ್ಲಿ ಉದ್ಯೋಗಾವಕಾಶಗಳು ಹೆಚ್ಚಾಗುತ್ತಿವೆ. ಅನಂತರ ಜಾಗತೀಕರಣದ ಪ್ರಕ್ರಿಯೆಯಿಂದಾಗಿ ಉದ್ಯೋಗಾವಕಾಶ ಗಳನ್ನು ಹುಡುಕಿಕೊಂಡು ಭಾರತದಿಂದ ಹೊರ ಹೋಗುವ ಕನ್ನಡಿಗರ ಸಂಖ್ಯೆ ಗಣನೀಯವಾಗಿ ಹೆಚ್ಚುತ್ತಿದೆ. ಇಂತಹ ಅವಕಾಶಗಳು ಉತ್ತಮರಿಗೆ ಮಾತ್ರ ದೊರಕುತ್ತಿದ್ದು, ನಗರದ ಬಡವರಿಗೆ ಹಾಗೂ ಹಳ್ಳಿಗಳ ಎಲ್ಲಾ ವರ್ಗದ ಜನರಿಗೆ ಶೂನ್ಯ. ಇದಕ್ಕೆಲ್ಲಾ ಇಂಗ್ಲಿಷ್ ಭಾಷೆಯೇ ಕಾರಣ. ಇಂಗ್ಲಿಷ್ ಭಾಷೆಯನ್ನು ಉದ್ಯೋಗದ ಭಾಷೆಯೆಂದು ಕರೆಯುವುದರಲ್ಲಿ ತಪ್ಪೇನೂ ಇಲ್ಲ, ಇದು ಅಂತರರಾಷ್ಟ್ರೀಯ ಭಾಷೆ ಯಾಗಿರುವುದರಿಂದ ಇಂಗ್ಲಿಷ್ ಕಲಿತಲ್ಲಿ ಪ್ರಪಂಚದ ಯಾವುದೇ ಭಾಗದಲ್ಲಿ ಬದುಕಬಹುದೆಂಬ ಭಾವನೆ ನಮ್ಮಲ್ಲಿ ಬೇರೂರಿದೆ. ಅದು ಸತ್ಯವೂ ಹೌದು. ಇದರಿಂದಾಗಿ, ಇಂಗ್ಲಿಷ್ ಕಲಿತಲ್ಲಿ ಜೀವನವನ್ನು ಉತ್ತಮಪಡಿಸಿಕೊಳ್ಳಬಹುದೆಂಬುದು ಉದ್ಯೋಗಕ್ಕಾಗಿ ಓದಿಸುವವರ, ಓದುವವರ ಸ್ಪಷ್ಟ ಅನ್ನಿಸಿಕೆಯಾಗಿದೆ.

ಮಾಹಿತಿ ತಂತ್ರಜ್ಞಾನದ ಹರಡುವಿಕೆಯಿಂದ, ಉದಾರೀಕರಣದಿಂದ, ಜಾಗತೀಕರಣದಿಂದ ಉದ್ಭವಿಸಿರುವ ಉದ್ಯೋಗಾವಕಾಶಗಳಿಂದ ವಂಚಿತರಾಗುತ್ತಿರುವ ಇಂಗ್ಲಿಷ್ ಕಲಿಯದ ಬಹುಪಾಲು ವರ್ಗ ಒಂದನೇ ತರಗತಿಯಿಂದ ಕಡ್ಡಾಯವಾಗಿ ಇಂಗ್ಲಿಷ್ ಪರಿಚಯಿಸಬೇಕೆಂದು ಕೇಳುತ್ತಿರುವುದು ಇದಕ್ಕೆ ನಾಡಿನ ಕೆಲ ಬುದ್ಧಿಜೀವಿಗಳು ಧ್ವನಿ ಗೂಡಿಸಿರುವುದರಲ್ಲಿ ಸ್ಪಷ್ಟವಾದ ತರ್ಕವಿದೆ. ಒಂದನೇ ತರಗತಿಯಿಂದ ಇಂಗ್ಲಿಷ್ ಪರಿಚಯಿಸುವುದು ಸಾಧುವಲ್ಲವೆಂಬ ಒಂದು ವರ್ಗದ ವಾದದಲ್ಲಿ ಸಮಂಜಸತೆಯಾಗಲಿ ತರ್ಕವಾಗಲಿ ಇಲ್ಲ.

ಈಗಿನ ಇಂಗ್ಲಿಷ್ ಪರಿಚಯಕ್ಕೆ ಸಂಬಂಧಿಸಿದಂತೆ ಎದ್ದಿರುವ ವಿವಾದ ಅಂದರೆ ಸರ್ಕಾರ ಒಂದನೇ ತರಗತಿಯಿಂದ ಕಡ್ಡಾಯವಾಗಿ ಇಂಗ್ಲಿಷ್ ಪರಿಚಯಿಸ ಬೇಕೆಂಬ ವಾದ ನಮ್ಮ ಭಾಷೆ, ಪರಂಪರೆ ಹಾಗೂ ಸಂಸ್ಕೃತಿಗಳಿಗೆ ಯಾವುದೇ ತೊಂದರೆಗಳನ್ನು ತಂದೊಡ್ಡು ವಂತಹುದಲ್ಲ. ಕರ್ನಾಟಕ ಸರ್ಕಾರ ಒಂದನೇ ತರಗತಿ ಯಿಂದ ಇಂಗ್ಲಿಷ್ ಪರಿಚಯಿಸುವುದನ್ನು ಕಡ್ಡಾಯ ಗೊಳಿಸಿ, ಬಹುಸಂಖ್ಯೆಯಲ್ಲಿರುವ ಪಟ್ಟಣ, ನಗರ ಹಾಗೂ ಗ್ರಾಮೀಣ ಪ್ರದೇಶದ ಬಡ ಜನರಿಗೆ ಸಾಮಾಜಿಕ ನ್ಯಾಯ ಒದಗಿಸುವ ನಿಟ್ಟಿನಲ್ಲಿ ಕ್ರಮ ಕೈಗೊಳ್ಳಲಿ.

ದಾವಣಗೆರೆ **ಎಂ. ಸಿದ್ದಯ್ಯ**

'ಜಾಗತೀಕರಣ ಮತ್ತು ಭಾರತೀಯ ಮಹಿಳೆ' ಎಂಬ ಮಲಯಾಳಂ ಮೂಲದ ಲೇಖನದಲ್ಲಿ ಜಾಗತೀಕರಣದಿಂದ ಕೈಗಾರಿಕಾ ಕ್ಷೇತ್ರದಲ್ಲಿ ಆಗಿರುವ, ಆಗಲಿರುವ ಅಪಾಯಗಳನ್ನು ಗುರುತಿಸಲಾಗಿದೆ. ಈ ಲೇಖನದಲ್ಲಿ ಬಹುಶಃ ವಿಮೆ ಮತ್ತು ಬ್ಯಾಂಕುಗಳ 'ಖಾಸಗೀಕರಣ' ಎಂಬ ಪದದ ಬದಲಿಗೆ 'ರಾಷ್ಟ್ರೀಕರಣ' ಎಂದಾಗಿದೆ. ಏಕೆಂದರೆ ಈ ಲೇಖನದ ಒಟ್ಟಾರೆ ಅಭಿಪ್ರಾಯಕ್ಕೆ ವ್ಯತಿರಿಕ್ತವಾಗಿ ಹಾಗೂ ವಾಸ್ತವತೆಯ ವಿರುದ್ಧವಾಗಿ ಈ ಎರಡು ಸಾಲುಗಳಲ್ಲಿ ಪದಗಳ ಪ್ರಯೋಗವಾಗಿದೆ. ಅದಕ್ಕೆ ನನ್ನ ಈ ಪ್ರತಿಕ್ರಿಯೆ.

'ವಿಮೆ ಮತ್ತು ... ಸಹಾಯ ಸಿಗದೆ ಇರಬಹುದು' ಎಂಬ ಸಾಲುಗಳಲ್ಲಿ ವಿಮೆ ಮತ್ತು ಬ್ಯಾಂಕುಗಳು ರಾಷ್ಟ್ರೀಕರಣವಾಗುವುದರಿಂದ ದುಡಿಯುವವರ, ಮಹಿಳೆಯರ ಉದ್ಯೋಗಾವಕಾಶಗಳು ಕಡಿತಗೊಳ್ಳುವು ದೆಂದು ಹೇಳಲಾಗಿದೆ. ಆದರೆ ಇದು ಸತ್ಯಕ್ಕೆ ದೂರವಾದದ್ದು. ನಮ್ಮ ದೇಶದಲ್ಲಿ ಸ್ವಾತಂತ್ರ್ಯಾ ನಂತರದಲ್ಲಿ ವಿಮೆ ಮತ್ತು ಬ್ಯಾಂಕುಗಳ ಮಾಲೀಕತ್ವ ಹೊಂದಿದ್ದ ಖಾಸಗಿ ಕಂಪನಿಗಳಿಂದ ಜನತೆಗೆ ಉಂಟಾದ ಕಹಿ ಅನುಭವಗಳು, ಶೋಷಣೆಗಳು ಈ ಕ್ಷೇತ್ರಗಳನ್ನು ರಾಷ್ಟ್ರೀಕರಿಸಬೇಕೆಂಬ ರಾಷ್ಟ್ರವ್ಯಾಪಿ ಬೃಹತ್ ಚಳವಳಿಗಳಿಗೆ ನಾಂದಿಯಾಗಿ, ೬೦-೭೦ರ ದಶಕಗಳಲ್ಲಿ ಈ ವಲಯಗಳ ರಾಷ್ಟ್ರೀಕರಣಕ್ಕೆ ಕಾರಣವಾದವೆಂಬು ದನ್ನು ನಾವು ಇಂದಿಗೂ ಮರೆಯುವಂತಿಲ್ಲ. ಅಲ್ಲದೆ ರಾಷ್ಟ್ರೀಕರಣದಿಂದಾಗಿಯೇ ಮಹಿಳೆಯರಿಗೆ ಹಾಗೂ ಇತರೆ ಶೋಷಿತ ಸಮುದಾಯಗಳಿಗೆ ಉದ್ಯೋಗಾ ವಕಾಶಗಳು ದೊರೆತು, ಸಾಮಾಜಿಕ ನ್ಯಾಯವನ್ನು ಈ ವರ್ಗಗಳು ಅನುಭವಿಸುವಂತಾದದ್ದು. ಆದ್ದರಿಂದ ಈ ಕ್ಷೇತ್ರಗಳ ರಾಷ್ಟ್ರೀಕರಣದಿಂದ ಸ್ತ್ರೀಯರ ಉದ್ಯೋಗಾವಕಾಶಗಳು ಹೆಚ್ಚುತ್ತವೆಯೇ ಹೊರತು ಕಡಿಮೆಯಾಗುವುದಿಲ್ಲ.

ಬೆಂಗಳೂರು **ಜ್ಯೋತಿ ಎ.**

# ಬೆಂಗಳೂರಿನ ಪ್ರಾಚೀನತೆಗೆ ಮತ್ತೆರಡು ವೀರಗಲ್ಲುಗಳ ಸೇರ್ಪಡೆ





**ಕೆಂ**ಪೇಗೌಡ ರಸ್ತೆಯ ಆಸುಪಾಸಿನಲ್ಲಿ ಈಗಾಗಲೇ ಬಹಳಷ್ಟು ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು ದೊರೆತಿವೆ. ಇತ್ತೀಚೆಗೆ ಬೆಂಗಳೂರು ವಿಶ್ವವಿದ್ಯಾಲಯದ ಕೆನರಾ ಬ್ಯಾಂಕ್ ತರಬೇತಿ ಕಟ್ಟಡಕ್ಕಾಗಿ ಭೂಮಿ ಅಗೆಯುವಾಗ ಎರಡು ವೀರಗಲ್ಲುಗಳು ಪತ್ತೆಯಾಗಿವೆ.

ಮೊದಲ ವೀರಗಲ್ಲು ಗ್ರಾನೈಟ್ ಕಲ್ಲಿನದಾಗಿದ್ದು ೯೫ ಸೆಂ.ಮೀ. ಎತ್ತರ ೧೦೦ ಸೆಂ. ಮೀ. ಅಗಲವಿದೆ. ಕಲ್ಲಿನ ಎಡಪಾರ್ಶ್ವದಲ್ಲಿ ಶಿಲ್ಪವಿದೆ. ವೀರನು ಶತ್ರುಗಳ ಎದುರು ನಿಂತು ಕತ್ತಿ ಮತ್ತು ಗುರಾಣಿ ಹಿಡಿದು ವೀರಾವೇಶದಿಂದ ಹೋರಾಡುತ್ತಿದ್ದಾನೆ. ಈ ಶಿಲ್ಪದಲ್ಲಿ ವೀರನನ್ನು ಪಾರ್ಶ್ವಮುಖಿಯಾಗಿ ಚಿತ್ರಿಸಿರುವುದು ಗಮನಾರ್ಹವಾಗಿದೆ. ಈತ ಯುದ್ಧದಲ್ಲಿ ಮಡಿದಾಗ ಸಹಗಮನ ಪದ್ಧತಿ ಅನುಸರಿಸಿರುವ ಈತನ ಪತ್ನಿ ವೀರನ ಬಲಬದಿಗೆ ನಿಂತಿದ್ದಾಳೆ. ಈಕೆಯೂ ಸಹ ಪಾರ್ಶ್ವನೋಟದಲ್ಲೇ ಇದ್ದು ಅಲಂಕೃತವಾದ ಉಡುಗೆತೊಡುಗೆಗಳನ್ನು ಧರಿಸಿದ್ದಾಳೆ. ಬಲಗೈನಲ್ಲಿ ಪುಷ್ಪಗುಚ್ಛದ ದಿಂಡನ್ನು ಹಿಡಿದಿದ್ದಾಳೆ. ಸಾಮಾನ್ಯವಾಗಿ ಸತಿ ಹೋಗಿರುವ ಶಿಲ್ಪಗಳಲ್ಲಿ ಮಾದಲದ ಹಣ್ಣು ಅಥವಾ ನಿಂಬೆ ಹಣ್ಣನ್ನು ಚಿತ್ರಿಸುವುದು ಸಂಪ್ರದಾಯ. ಬದಲಾಗಿ ಈ ಶಿಲ್ಪದಲ್ಲಿ ಪುಷ್ಪಗುಚ್ಛದ ದಿಂಡನ್ನು ಚಿತ್ರಿಸಿರುವುದು ವಿಶೇಷ. ಇಳಿಬಿಟ್ಟಿರುವ ಎಡಗೈನಲ್ಲಿ ಏನೂ ಇಲ್ಲ. ಯುದ್ಧವೊಂದರಲ್ಲಿ ವೀರನು ಶತ್ರುಗಳ ಜೊತೆ ಕಾದಾಡಿ ಮಡಿದಿದ್ದಾನೆ. ಅಂದಿನ ಪದ್ಧತಿಯಂತೆ ಪತ್ನಿಯೂ ಸಹ ಪತಿಯ ಮರಣದಲ್ಲಿ ಪಾಲುಗೊಳ್ಳಲು ಸಹಗಮನ ಪದ್ಧತಿ ಅನುಸರಿಸಿದ್ದಾಳೆ. ವೀರಗಲ್ಲುಗಳ ಲಕ್ಷಣಗಳಿಂದ ಈ ಸ್ಮಾರಕವು ಕ್ರಿ.ಶ. ಸುಮಾರು ಹದಿಮೂರನೆಯ ಶತಮಾನಕ್ಕೆ ಸೇರುತ್ತದೆ.

ಮತ್ತೊಂದು ವೀರಗಲ್ಲಿನಲ್ಲಿ ವೀರನ ಚಿತ್ರಣ ಮಾತ್ರವೇ ಇದ್ದು ೭೦ ಸೆಂ.ಮೀ. ಎತ್ತರ, ೮೦ ಸೆಂ.ಮೀ. ಅಗಲ ಮತ್ತು ೧೪ ಸೆಂ.ಮೀ. ದಪ್ಪ ಇದೆ. ಗ್ರಾನೈಟ್ ಕಲ್ಲಿನ ಈ ಶಿಲ್ಪದಲ್ಲಿ ಮೇಲೆ ಸೂರ್ಯಚಂದ್ರರ ಚಿತ್ರವಿದೆ. ವೀರನು ತನ್ನ ಎಡಗೈನಲ್ಲಿ ಗುರಾಣಿ, ಬಲಗೈನಲ್ಲಿ ಖಡ್ಗವನ್ನು ಹಿಡಿದಿದ್ದಾನೆ. ನಡುವಿನಲ್ಲಿ ಬಿಚ್ಚುಗತ್ತಿಯಿದೆ. ಚೋಳರಾಜರ ಕಾಲದಲ್ಲಿದ್ದಂತಹ ವೇಷಭೂಷಣಗಳನ್ನು ಧರಿಸಿದ್ದ ಈ ವೀರನು ತನ್ನ ಶತ್ರುಗಳೊಡನೆ ಯಾವುದೇ ಕಾರಣಕ್ಕಾಗಿ ಹೋರಾಡಿ ಮಡಿದಿದ್ದಾನೆ. ಕಾಲಮಾನದ ಪ್ರಕಾರ ಈ ಶಿಲ್ಪವು ಕ್ರಿ.ಶ. ಸುಮಾರು ಹನ್ನೆರಡನೆಯ ಶತಮಾನಕ್ಕೆ ಸೇರಿದ್ದು ಪ್ರಾಚೀನ ಬೆಂಗಳೂರಿನ ಮೇಲೆ ಹೊಸ ಬೆಳಕು ಚೆಲ್ಲಿದೆ.

**ಚಿತ್ರ ಲೇಖನ : ಮುತ್ತುರಾಜು, ಕನ್ನಡ ಅಧ್ಯಾಪಕರು, ಜವಾಹರಲಾಲ್ ನವೋದಯ ವಿದ್ಯಾಲಯ, ಉಡುವಳ್ಳಿ - ೫೭೨ ೧೪೩, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ**

*೩ನೇ ಪುಟದಿಂದ.... ಈ ತಿಂಗಳು*

ಆಳುವ ವರ್ಗ, ಅದ್ವಾನಿ ಮಂದೆ, ಅಂಬಾನಿ ಇತ್ಯಾದಿ ಲಾಭ-ಕೋವಿದರಿಗೆ ಬೇಕಾದ್ದು ಜನರ ಇಂತಹ ನಿಸ್ಸತ್ವವಾದ ಮಾನಸಿಕ ಸ್ಥಿತಿಯಲ್ಲದೆ ಮತ್ತೇನೂ ಅಲ್ಲ. ಈಗಲೂ ನಗರಪಾಲಿಕೆ ಹಾಗೂ ನ್ಯಾಯಾಲಯಗಳು ರವಿಶಂಕರ್ ನೀಡಿದ ಸಂಕಷ್ಟಕ್ಕೆ ಪರಿಹಾರ ವಸೂಲು ಮಾಡಬೇಕು. ಆತನಿಗೆ ಇಷ್ಟೊಂದು ಉಪಟಳ ಉಂಟುಮಾಡಲು ಪರವಾನಗಿ ನೀಡಿರುವ ಸರ್ಕಾರ ಸಾಮಾಜಿಕ-ರಾಜಕೀಯ ಹೋರಾಟಗಾರರಿಗೆ ಕನಿಷ್ಠ ಚಳುವಳಿ ಹಕ್ಕನ್ನೂ ನೀಡದಷ್ಟು ಗರ್ವಯುತವಾಗಿರುವುದು ಪ್ರಜಾಪ್ರಭುತ್ವಕ್ಕೆ ಮಾರಕವಾಗಿದೆ.

ಇನ್ನು ಶ್ರವಣಬೆಳಗೊಳದ ವಿದ್ಯಮಾನಗಳು ಇನ್ನೂ ಹೆಚ್ಚು ಅವಮಾನಕರ ಎಂಬುದನ್ನು ಹೇಳಬೇಕಾಗಿಲ್ಲ. ರಾಜ್ಯವನ್ನು ತ್ಯಾಗಮಾಡಿದ ಭವ್ಯಮೂರ್ತಿಗೆ ಈ ಜನ ರಕ್ತಸಿಕ್ತ ಹಣದಿಂದ ಅಭಿಷೇಕ ಮಾಡಿ ಪುಣ್ಯ ಕಟ್ಟಿಕೊಳ್ಳುತ್ತಾರೆ! ಬಾಹುಬಲಿಯ ಚರಿತ್ರೆಗೆ ಮತ್ತು ವ್ಯಕ್ತಿತ್ವಕ್ಕೆ ಸವಾಲು ಈ ಜನರ ಅದ್ದೂರಿ ಪ್ರದರ್ಶನ. ತನಗೇನೂ ಬೇಡವೆಂದವನಿಗೆ ಇವರು ಲಕ್ಷೋಪಲಕ್ಷ ಹಣ ನೀಡುವವರಿಂದ ತಲೆಯ ಮೇಲೆ ಕೇಸರಿ ನೀರು ಸುರಿಸುತ್ತಾರೆ. ಅಲ್ಲಿಯೂ ಜನಸಾಮಾನ್ಯರಿಗೆ ಪ್ರವೇಶವಿಲ್ಲ. ಅವರು ಬಾಹುಬಲಿಯಿಂದ ಹಲವು ಮೈಲಿ ದೂರ ನಿಲ್ಲಬೇಕು. ಜನರಿಗೆ ವ್ಯಾಪಾರದಲ್ಲಿ ಮೋಸ ಮಾಡಿ ಹಣ ಸಂಪಾದಿಸಿರುವ ಖದೀಮರು ಬಾಹುಬಲಿಗೆ ಕಲಶದಿಂದ ಪ್ರೋಕ್ಷಣೆ ಮಾಡುತ್ತಾರೆ. ಇತಿಹಾಸದ ವ್ಯಂಗ್ಯಗಳಲ್ಲಿ ಇದು ಅತ್ಯಂತ ಕರಾಳವಾದುದು, ಬಾಹುಬಲಿಯನ್ನು ಧ್ವಂಸ ಮಾಡಿಬಿಡುವಂತಹ ಹೇಯಕೃತ್ಯ. ''ಣಮೋ ಅರಿಹಂತಾಣಂ'' ಮತ್ತು ''ಣಮೋ ಲೋಯೇ ಸಬ್ಬಸಾಧೂಣಂ'' ಎಂಬ ಧ್ಯೇಯವಾಕ್ಯವಿರುವ ಜೈನಧರ್ಮಕ್ಕೆ ಈ ಪ್ರಜ್ಞಾಕೃಪಣರಿಂದ ರಕ್ಷಣೆ ದೊರಕುವುದು ಯಾವಾಗ ? ಜನಸಾಮಾನ್ಯರಿಗೆ ಲಾಟಿ ರುಚಿ ತೋರಿಸಿ, ಕೋಟ್ಯಾಧಿಪತಿಗಳಿಗೆ ಬಾಹುಬಲಿಯ ಸಾನ್ನಿಧ್ಯ ಕಲ್ಪಿಸಿಕೊಡುವ ತಾತ್ವಿಕ ಬಂಜೆತನವಿರುವ ಧಾರ್ಮಿಕ ಪ್ರಭುಗಳಿಗೆ ಮತ್ತು ರಾಜ್ಯಾಡಳಿತ ನಡೆಸುತ್ತಿರುವ ಕೋಟ್ಯಾಧಿಪತಿಗಳ ಭಂಟರಿಗೆ ಜನ ಧಿಕ್ಕಾರ ಹೇಳಬೇಕು. ಇಂದು ಅದನ್ನು ಹೇಳದಿದ್ದರೆ ನಾಳೆ ಇವರ ಇನ್ನೂ ಹೆಚ್ಚಿನ ಕುತ್ಸಿತ ಪಾತಕಗಳಿಗೆ ಎಣೆ ಇರುವುದಿಲ್ಲ.

# ಬಂಡಾಯ ಸಾಹಿತ್ಯದ ಹಾದಿ

> ಬಂಡಾಯ ಸಾಹಿತ್ಯ ಸಂಘಟನೆಯು ಸಾಹಿತ್ಯ ಮತ್ತು ಸಂಘಟನೆಯನ್ನು ಒಟ್ಟಿಗೇ ನಿರ್ವಹಿಸುವ ಪ್ರಜಾಸತ್ತಾತ್ಮಕ ಪಕ್ವತೆಯನ್ನು ತನ್ನ ತಾತ್ವಿಕ ನೆಲೆಯಲ್ಲಿ ಪ್ರತಿಫಲಿಸುತ್ತ ಬಂದಿದೆ. ಈಗ, ಹೊಸ ಸವಾಲುಗಳಿಗೆ, ವ್ಯವಸ್ಥೆಯ ಹುನ್ನಾರಗಳಿಗೆ ಉತ್ತರ ರೂಪವಾಗಿ ಸಮಚಿತ್ತದ ಸೃಜನಶೀಲ ಸಾಧ್ಯತೆಗಳನ್ನು ಹುಡುಕುತ್ತ ತನ್ನ ಜೀವಶಕ್ತಿಯನ್ನು ವೃದ್ಧಿಸಿಕೊಳ್ಳುವುದು ಅಗತ್ಯವಾಗಿದೆ. ನಾವು, ಇದನ್ನು ಕೇವಲ ಸಾಹಿತ್ಯ ಮತ್ತು ಸಂಘಟನೆಯ ಶಕ್ತಿ ವೃದ್ಧಿಯೆಂದು ತಿಳಿಯದೆ ಸಾಮಾಜಿಕ ಜವಾಬ್ದಾರಿ ಮತ್ತು ಕ್ರಿಯೆಯ ವಿಸ್ತರಣೆಯೆಂದು ಭಾವಿಸಬೇಕಾಗಿದೆ.

ಪ್ರೊ॥ ಬರಗೂರು ರಾಮಚಂದ್ರಪ್ಪ

ಬಂಡಾಯ ಸಾಹಿತ್ಯ ಸಂಘಟನೆಗೆ ಇಪ್ಪತ್ತೈದು ವರ್ಷಗಳಾಗಿವೆ. ...ವುದೇ ಒಂದು ಸಂಘಟನೆಯು ಕಾಲು ಶತಮಾನದವರೆಗೆ ಕ್ರಿಯಾಶೀಲ ...ರುವುದು ಸಾಮಾನ್ಯ ಸಂಗತಿಯಲ್ಲ. ಬಂಡಾಯ ಸಾಹಿತ್ಯ ಸಂಘಟನೆಯು ... ಶತಮಾನದಲ್ಲಿ ಸಮಾನ ಪ್ರಮಾಣದ ತೀವ್ರತೆಯನ್ನು ಪ್ರತಿ ಹಂತದಲ್ಲೂ ...ಸಿಕೊಳ್ಳಲು ಸಾಧ್ಯವಾಗಲಿಲ್ಲ; ನಿಜ. ಆದರೆ ಸಂಘಟನೆ ಇಲ್ಲವಾಗಲಿಲ್ಲ. ...ಲಾಗಿ ಶಕ್ತಿಶಾಲಿಯನ್ನಾಗಿಸುವ ಪ್ರಯತ್ನಗಳು ಪ್ರಾಮಾಣಿಕವಾಗಿ ...ಯುತ್ತಿವೆ. ಸಾಹಿತ್ಯ ಕ್ಷೇತ್ರದಲ್ಲಿ ಸಂಘಟನೆಯ ರೂಪವನ್ನು ಘೋಷಿಸಿ ...ಡು ಕ್ರಿಯಾಶೀಲವಾದದ್ದು ಎರಡು ಸಾರಿ ಮಾತ್ರ ಎಂದು ಹೇಳಬಹುದು. ...ತಿಶೀಲ ಸಾಹಿತ್ಯ ಚಳವಳಿ ಮತ್ತು ದಲಿತ-ಬಂಡಾಯ ಸಾಹಿತ್ಯ ಚಳವಳಿ ... ಮಾತ್ರವೇ ಸಂಘಟನಾತ್ಮಕ ಸ್ವರೂಪವನ್ನು ಪಡೆದವು. ನವೋದಯ, ... ಸಾಹಿತ್ಯ ಪರಂಪರೆಗಳು ನಮ್ಮ ಸಾಹಿತ್ಯದ ಬಹುಮುಖ್ಯ ಭಾಗವಾಗಿವೆ ...ದು ಪ್ರಮಾಣ ಪತ್ರ ಕೊಡಬೇಕಾದ ಅಗತ್ಯವಿಲ್ಲ. ಆದರೆ ಈ ಎರಡೂ ಸಾಹಿತ್ಯಧಾರೆಗಳು ತಮ್ಮನ್ನು ತಾವು ಒಂದು ಚಳವಳಿಯೆಂದು ಕರೆದುಕೊಳ್ಳಲಿಲ್ಲ; ಸಂಘಟನೆಯ ರೂಪವಂತೂ ಇರಲೇ ಇಲ್ಲ. ವಸ್ತುಸ್ಥಿತಿಯನ್ನು ಇಲ್ಲಿ ಸಾದರಪಡಿಸುತ್ತಿದ್ದೇನೆಯೇ ಹೊರತು ಸಂಘಟನೆಯ ರೂಪ ಇಲ್ಲದೆ ಇದ್ದುದೇ ನಕಾರಾತ್ಮಕವೆಂದು ಹೇಳುತ್ತಿಲ್ಲ. ಕಟುವಾಸ್ತವದ ಸಂಗತಿಯೆಂದರೆ ತಮ್ಮನ್ನು ತಾವು ಚಳವಳಿಯೆಂದು ಘೋಷಿಸಿಕೊಂಡು, ತಾತ್ವಿಕ ತಳಹದಿಯ ಸಂಘಟನೆಯನ್ನು ಕಟ್ಟಿದ ಸಾಹಿತ್ಯಧಾರೆಗಳು ಸಾಂಸ್ಕೃತಿಕ ಕ್ಷೇತ್ರದಲ್ಲಿ ನಕಾರಾತ್ಮಕ ಪ್ರತಿರೋಧವನ್ನು ಎದುರಿಸಬೇಕಾಗುತ್ತದೆ. ಸಮಾಜ ಮತ್ತು ಸಾಂಸ್ಕೃತಿಕ ಕ್ಷೇತ್ರಗಳ ಪ್ರತಿಗಾಮಿ ನೆಲೆಗಳಿಗೆ ಪ್ರತಿರೋಧಾತ್ಮಕ ಪ್ರತಿಸ್ಪಂದನದ ವಿನ್ಯಾಸಗಳನ್ನು ರೂಪಿಸಹೊರಟ ಸಂಘಟನೆಗಳೇ ಪ್ರತಿರೋಧಕ್ಕೆ ಒಳಗಾಗುವುದು ನಮ್ಮ ಸಂದರ್ಭದ ಒಂದು ವಿಪರ್ಯಾಸ. ಪ್ರಗತಿಶೀಲ ಸಾಹಿತ್ಯ ಚಳವಳಿ ಮತ್ತು ಬಂಡಾಯ ಸಾಹಿತ್ಯ ಸಂಘಟನೆಗಳು ಇಂತಹ ಪ್ರತಿಗಾಮಿ ಪ್ರತಿರೋಧಕ್ಕೆ ಒಳಗಾಗುತ್ತಲೇ ಚಲನಶೀಲ ಮೌಲ್ಯಗಳನ್ನು ಜೀವಂತವಾಗಿಟ್ಟವು, ವಿಶಿಷ್ಟ ಸಮಸ್ಯೆಗಳನ್ನು ಎದುರಿಸಿದವು. ಬಂಡಾಯ ಸಾಹಿತ್ಯ ಸಂಘಟನೆಯು ಚಳವಳಿ, ಸಂಘಟನೆ, ಸಾಹಿತ್ಯ – ಎಲ್ಲವನ್ನೂ ಒಗ್ಗೂಡಿಸಿಕೊಂಡು ಪ್ರಕಟಗೊಳ್ಳುವ ಸಮಸ್ಯೆಯನ್ನು ಆಹ್ವಾನಿಸಿಕೊಂಡಿತು. ಸಮಸ್ಯೆ ಎರಡು ರೀತಿಯದು : (ಅ) ಯಥಾಸ್ಥಿತಿವಾದಿ ಸಾಮಾಜಿಕ ವಲಯದ ವಿರೋಧ, (ಆ) ಸಂಘಟನಾತ್ಮಕ ಚಳವಳಿಯೆಂಬ ಪ್ರಜ್ಞಾಪೂರ್ವಕ ಕ್ರಿಯೆಗೆ ಎದುರಾಗುವ ಸೃಜನಶೀಲ ಸಮಸ್ಯೆ.

ಮೊದಲನೆಯದು ಸ್ವಾಭಾವಿಕ ವಿರೋಧ. ಸಾಹಿತ್ಯ ಚಳವಳಿಯೊಂದು ಸಮಾಜದ ವರ್ಣ ಮತ್ತು ವರ್ಗ ವ್ಯವಸ್ಥೆಗಳನ್ನು ವಿರೋಧಿಸುವ ಕ್ರಿಯೆ ಅನೇಕರಿಗೆ 'ಸಾಹಿತ್ಯೇತರ'ವಾಗಿ ಕಂಡಿತು. ಸಮಾಜದ ಯಥಾಸ್ಥಿತಿವಾದಿ ಶಕ್ತಿಗಳು 'ಸಾಹಿತ್ಯೇತರ'ವೆಂಬುದನ್ನೇ ಅಸ್ತ್ರ ಮಾಡಿಕೊಂಡು ಎದುರಾದವು. ವರ್ಣ ಮತ್ತು ವರ್ಗ ಹಿತಾಸಕ್ತಿಗೆ ಎದುರಾದ ಪ್ರತಿರೋಧದಿಂದ ಕಂಗೆಟ್ಟ ಈ ಶಕ್ತಿಗಳು ವಿವಿಧ ಹುನ್ನಾರಗಳ ಮೂಲಕ ಪ್ರಗತಿಪರ ಶಕ್ತಿಗಳನ್ನು ಕಂಗೆಡಿಸಲು ಪ್ರಯತ್ನಿಸುತ್ತವೆ. ಅದಕ್ಕಾಗಿ ತಕ್ಕ ಪರಿಭಾಷೆಯನ್ನು ಬಳಸಿಕೊಳ್ಳುತ್ತವೆ. ಬಂಡಾಯ ಸಾಹಿತ್ಯ ಚಳವಳಿಯನ್ನು 'ಸಾಹಿತ್ಯೇತರ'ವೆಂದು ಜರೆಯುವ ಮೂಲಕ ಸಾಂಸ್ಕೃತಿಕವಾಗಿ ನೈತಿಕ ಬಿಕ್ಕಟ್ಟನ್ನು ಸೃಷ್ಟಿಸುವುದು ಸುಲಭ. ಆದರೆ ಬಂಡಾಯ ಸಾಹಿತ್ಯ ಸಂಘಟನೆ ಮತ್ತು ಚಳವಳಿಗೆ ಇದು ನೈತಿಕ ಬಿಕ್ಕಟ್ಟಾಗಲಿಲ್ಲ, ಯಾಕೆಂದರೆ ಸಮಾಜದಲ್ಲಿರುವ ಎಲ್ಲರೀತಿಯ ಅಸಮಾನತೆಯನ್ನು ವಿರೋಧಿಸಿ ಪ್ರಗತಿಪರ ಚಿಂತನೆಗಳನ್ನು ಚಲನಶೀಲಗೊಳಿಸುವುದು ಬಂಡಾಯ ಸಾಹಿತ್ಯ ಸಂಘಟನೆಯ ಘೋಷಿತ ಉದ್ದೇಶವಾಗಿತ್ತು.

''ಶೋಷಿತ ಜನತೆಯ ಪರವಾದ ನಿಲುವುಗಳನ್ನು ಸಾಂಸ್ಕೃತಿಕ ಕ್ಷೇತ್ರದಲ್ಲಿ ಭದ್ರವಾಗಿ ನೆಲೆಗೊಳಿಸುವುದು ನಮ್ಮ ಮುಖ್ಯ ಗುರಿಗಳಲ್ಲೊಂದಾಗಬೇಕು. ನಮ್ಮ ಹೋರಾಟ ಪ್ರಧಾನವಾಗಿ ಸಾಂಸ್ಕೃತಿಕ ಕ್ಷೇತ್ರಕ್ಕೆ ಸಂಬಂಧಿಸಿದ್ದು; ದೇಶದ ರಾಜಕೀಯ ಮತ್ತು ಸಾಂಸ್ಕೃತಿಕ ಸಂದರ್ಭಗಳು ಪರಸ್ಪರ ಸಂಬಂಧವುಳ್ಳವು ಎಂಬ ನಿಲುವಿನಿಂದ ಹೊರಟಿದ್ದು; ಸಾಹಿತಿಗೆ ಸಾಮಾಜಿಕ-ರಾಜಕೀಯ ಪ್ರಜ್ಞೆ ಇರಬೇಕೆಂಬ ಆಶಯ ಇಲ್ಲಿ ಮುಖ್ಯವಾದದ್ದು'' – ಇದು ಬಂಡಾಯ ಸಾಹಿತ್ಯ ಸಂಘಟನೆಯ 'ಪ್ರಣಾಳಿಕೆ'ಯಲ್ಲಿರುವ ಮಾತುಗಳು. ಇಲ್ಲಿ ಉದ್ದೇಶ ಸ್ಪಷ್ಟವಾಗಿದೆ. ಆದ್ದರಿಂದ ಯಥಾಸ್ಥಿತಿವಾದಿ ಸಾಮಾಜಿಕ ವಲಯದ ವಿರೋಧವು ಒಂದು ಸಮಸ್ಯೆಯಾಗಲಿಲ್ಲ. ಸಂಘಟನೆ ಮತ್ತು ಚಳವಳಿಯ ಪ್ರಜ್ಞೆ ಎದುರಿಸುವ ಸೃಜನಶೀಲ ಸಮಸ್ಯೆ ಮುಖ್ಯವಾದದ್ದು. ಇದು ಸೃಷ್ಟಿಶೀಲತೆಯ ಆಂತರಿಕ ಸಮಸ್ಯೆ. ತಾನು ನಂಬಿದ ತಾತ್ವಿಕತೆಗೆ ಬದ್ಧರಾಗಿ ಬರೆಯುವ ಬಂಡಾಯ ಸಾಹಿತಿಗಳು ಸಹಜವಾಗಿಯೇ ಸಮಸ್ಯೆಯನ್ನು ಆಹ್ವಾನಿಸಿಕೊಳ್ಳುತ್ತಾರೆ. ಆದ್ದರಿಂದ ತಾವು ನಂಬಿದ ತತ್ವ ಮತ್ತು ಸೃಷ್ಟಿ ವಿನ್ಯಾಸಗಳಲ್ಲಿ ಸಾವಯವ ಸಾಧಿಸುವ ಕಲಾತ್ಮಕ ಬಿಕ್ಕಟ್ಟನ್ನು ಬಂಡಾಯ ಸಾಹಿತಿಗಳು ಎದುರಿಸಿದ ಬಗೆ ಅಭ್ಯಾಸಾರ್ಹವಾದ ಸಮಸ್ಯೆಯಾಗಿದೆ. ನಮ್ಮ ಸಾಹಿತ್ಯದ ಪ್ರತಿಷ್ಠಿತ ವಲಯವು ಇಂತಹ ಅಭ್ಯಾಸವನ್ನು ನಡೆಸಿ ವಿಮರ್ಶಿಸುವ ಬದಲು ತಾತ್ವಿಕ ಬದ್ಧತೆಯೇ ತಪ್ಪು ಎಂದು ದೊಡ್ಡ ಗಂಟಲಲ್ಲಿ ಕೂಗತೊಡಗಿತು. ವಿಪರ್ಯಾಸವೆಂದರೆ – ದಲಿತ ಮತ್ತು ಬಂಡಾಯ ಸಾಹಿತಿಗಳ ಸಾಹಿತ್ಯದಲ್ಲಿ ದೊಡ್ಡ ಗಂಟಲಿದೆಯೆಂದು ಆರೋಪಿಸಿದ ಇಂಥವರೇ ಬಹುದೊಡ್ಡ ಗಂಟಲಲ್ಲಿ ಬದ್ಧತೆಯನ್ನು ವಿರೋಧಿಸಿದ್ದು; ಕನ್ನಡ ಸಾಹಿತ್ಯದಲ್ಲಿ ತಾತ್ವಿಕ ಬದ್ಧತೆಗೆ ಒಂದು ಪರಂಪರೆಯಿದೆಯೆಂಬುದನ್ನೇ ಮರೆತದ್ದು. ಪಂಪ, ರನ್ನ, ವಚನಕಾರರು, ಕುಮಾರವ್ಯಾಸ, ದಾಸರು – ಹೀಗೆ ಕನ್ನಡ ಸಾಹಿತ್ಯದ ಪ್ರಮುಖರಲ್ಲಿ ತಾತ್ವಿಕ ಬದ್ಧತೆಯಿರಲಿಲ್ಲವೆ ? ವಚನಕಾರರು ಮತ್ತು ದಾಸರನ್ನು ಹೊರತುಪಡಿಸಿ, ಬೇರೆಯವರು ತಮ್ಮ 'ತತ್ವ'ವನ್ನು ತೀರಾ ಸ್ಪಷ್ಟವಾಗಿ ಘೋಷಿಸಿಕೊಂಡಿಲ್ಲದಿರಬಹುದು. ಆದರೆ ಅವರ ಸಾಹಿತ್ಯದಲ್ಲೂ ಒಂದು ತತ್ವವಿತ್ತು. ಪಂಪಮಹಾಕವಿ 'ಬೆಳಗುವೆನಿಲ್ಲಿ ಲೌಕಿಕಮಂ ಅಲ್ಲಿ ಜಿನಾಗಮಮಂ' ಎಂದದ್ದು ಒಂದು ತಾತ್ವಿಕ ನೆಲೆಯೇ. – ಹೀಗೆ ಬರೆದವರು ತತ್ವ ಪ್ರಚಾರ ಕೃತಿಗೆ ಕಾರಣರಾದರೊ ಅಥವಾ ತಮ್ಮ ಕೃತಿಗಳಲ್ಲಿ ತಾತ್ವಿಕ ದರ್ಶನವನ್ನು ಬೆಳಗಿಸಿದರೊ ಎನ್ನುವುದು ಮುಖ್ಯ ಪ್ರಶ್ನೆಯಾಗಬೇಕು. ತತ್ವವೊಂದಕ್ಕೆ ಬದ್ಧವಾಗುವುದೇ ತಪ್ಪಲ್ಲ. ಆದ್ದರಿಂದ ತತ್ವ ಬದ್ಧತೆಯ ಸಾಹಿತಿಗೆ ವಿಶಿಷ್ಟ ಸೃಜನಶೀಲ ಸವಾಲುಗಳಿರುತ್ತವೆಯೆಂಬುದನ್ನು ಅರ್ಥಮಾಡಿಕೊಂಡು ಅನುಸಂಧಾನಿಸುವುದು ವಿಮರ್ಶೆಯ ಜವಾಬ್ದಾರಿಯಾಗಬೇಕು. ಬದ್ಧತೆಯನ್ನು ಪ್ರಜ್ಞಾಪೂರ್ವಕವಾಗಿ ಒಪ್ಪಿಕೊಂಡ ಕೃತಿಕಾರ ಅಪ್ರಜ್ಞಾಪೂರ್ವಕ ಸೂಕ್ಷ್ಮಗಳೊಂದಿಗೂ ಅನುಸಂಧಾನಿಸಬೇಕು. ಆಗ ವಿಮರ್ಶೆ ಮತ್ತು ಸಾಹಿತ್ಯ ಸೃಷ್ಟಿ– ಎರಡೂ ಕ್ರಿಯೆಗಳಿಗೆ ಅರ್ಥವಂತಿಕೆ ಲಭ್ಯವಾಗುತ್ತದೆ.

ಬಂಡಾಯ ಸಾಹಿತ್ಯದ ಒಂದು ಸೃಜನಶೀಲ ಸವಾಲೆಂದರೆ – ತತ್ವವನ್ನು ತಾತ್ವಿಕವಾಗಿಸುವುದು ಅಥವಾ ಸಿದ್ಧಾಂತವನ್ನು ಸಂವೇದನೆಯಾಗಿಸುವುದು. ಸಂವೇದನೆಯಾಗದ ಸಿದ್ಧಾಂತವು ಶುಷ್ಕವೂ ಸ್ಥಗಿತವೂ ಆದ ತತ್ವವಾಗಿಬಿಡುತ್ತದೆ. ಈ ಎಚ್ಚರದಲ್ಲಿ ದಲಿತ-ಬಂಡಾಯ ಸಾಹಿತಿಗಳೂ ತಮ್ಮ ಸೃಷ್ಟಿಶೀಲ ಬಿಕ್ಕಟ್ಟನ್ನು ಎದುರಿಸಿದ್ದಾರೆ. ಪ್ರಜ್ಞಾಪೂರ್ವಕವಾಗಿಯೇ ಈ ಬಿಕ್ಕಟ್ಟನ್ನು ಎದುರಿಸಿದ್ದಾರೆಂದು ಅರ್ಥವಲ್ಲ.

ಅಪ್ರಜ್ಞಾಪೂರ್ವಕವಾಗಿಯೂ ಎದುರಿಸಿದ್ದಾರೆ. ದಲಿತ ಮತ್ತು ಬಂಡಾಯ ಸಾಹಿತ್ಯವನ್ನು ವಿಶ್ಲೇಷಿಸುವಾಗ ಈ ಬಿಕ್ಕಟ್ಟನ್ನು ಗಮನಿಸುವುದು ಅಗತ್ಯ. ಆದರೆ ಅನಗತ್ಯವಾದ ವಿರೋಧ ಪ್ರಧಾನ ಭೂಮಿಕೆಗೆ ಬಂದಷ್ಟು ಅಗತ್ಯವಾದ ತಾತ್ವಿಕ ಚರ್ಚೆ ಬರಲಿಲ್ಲವೆಂಬುದು ಸಾಹಿತ್ಯ ವಿಮರ್ಶೆಯ ಒಂದು ವಿಮರ್ಶೆ.

ಇಷ್ಟಾಗಿಯೂ ದಲಿತ-ಬಂಡಾಯ ಸಾಹಿತ್ಯವು ಕನ್ನಡ ಸಾಹಿತ್ಯದಲ್ಲಿ ಅಳಿಸಲಾಗದ ಛಾಪನ್ನು ಮೂಡಿಸಿದೆ. ಇದು ಮುಂದುವರಿಯುತ್ತದೆ. ೧೯೭೯ರಲ್ಲಿ ಬಂಡಾಯ ಸಾಹಿತ್ಯ ಸಂಘಟನೆ ಹುಟ್ಟಿದಾಗ ಮುಂದುವರಿಯಬಾರದೆಂದು ಭಾವಿಸಿದ ಮನೋರೂಪಗಳೇ ಈಗ ಇನ್ನೊಂದು ಮಾದರಿಯಲ್ಲಿ ಮುಂದುವರಿಕೆಯ ಬಗ್ಗೆ ಅನುಮಾನಿಸುತ್ತಿದ್ದಾರೆ. ಬಂಡಾಯ ಸಾಹಿತ್ಯ 'ಸಂಘಟನೆ'ಯ ತೀವ್ರತೆ ಮೊದಲಿನಷ್ಟು ಪ್ರಖರವಾಗಿಲ್ಲದಿರುವುದೂ ಇಂತಹ ಅನುಮಾನಕ್ಕೆ ಒಂದು ಸಹಜ ಕಾರಣವಾಗಿರಬಹುದು. ಸಹಜ ಕಾರಣವನ್ನು ಮೀರಿದ ಅನ್ಯಕಾರಣಗಳೂ ಇರಬಹುದು. ಆದರೆ ಇಷ್ಟಂತೂ ನಿಜ; ಬಂಡಾಯವು ಸಂಘಟನೆಯಾಗಿ ಸ್ವಲ್ಪ ಕ್ಷೀಣವಾಗಿದೆ; ಸಾಹಿತ್ಯವಾಗಿ ಸಮೃದ್ಧವಾಗಿದೆ.

ಬಂಡಾಯ ಸಾಹಿತ್ಯ ಸಂಘಟನೆಯು ಆಂದೋಲನವಾಗಿ ಉಂಟುಮಾಡಿದ ಬಹುದೊಡ್ಡ ಪರಿಣಾಮವೆಂದರೆ – ಹೊಸ ಬರಹಗಾರರಲ್ಲಿ ಮೂಡಿಸಿದ ಆತ್ಮವಿಶ್ವಾಸ. ವಿವಿಧ ಸಾಮಾಜಿಕ ವಲಯಗಳಿಂದ ಬಂದು ಮೊಟ್ಟಮೊದಲ ಬಾರಿಗೆ ಅಕ್ಷರದ ಮೂಲಕ ಲಿಖಿತಾಭಿವ್ಯಕ್ತಿಗೆ ತೊಡಗಿದವರು ಅಳುಕನ್ನು ಮೀರಿ ಆತ್ಮವಿಶ್ವಾಸಿಗಳಾದದ್ದು ಒಂದು ಚಾರಿತ್ರಿಕ ಘಟನೆಯಾಗಿದೆ. ಹೀಗೆ ಬರೆದವರೆಲ್ಲ ಉತ್ತಮವಾದದ್ದನ್ನು ಕೊಡದೇ ಇರಬಹುದು; ಅಕ್ಷರಗಳು ಹಸಿಹಸಿಯಾಗಿರಬಹುದು. ಆದರೆ ಹಸಿಹಸಿ ಅಕ್ಷರಗಳು ಅಭಿವ್ಯಕ್ತಿಯ ಹಸಿವನ್ನು ಹಿಂಗಿಸತೊಡಗಿದವು. ಆರಂಭದಲ್ಲಿ ಹಸಿಯಾಗಿದ್ದ ಅಕ್ಷರಗಳು ಹದವಾಗುತ್ತ ಬಂದವು. ಹದಗೊಂಡ ಅಕ್ಷರ ವಿನ್ಯಾಸಗಳ ಬದಲು ಹಸಿ ಅಕ್ಷರಗಳನ್ನು 'ರೂಕ್ಷ'ವೆಂದು ಜರೆಯುವುದರಲ್ಲಿ ಆನಂದ ಪಡುವುದು ಪ್ರತಿಷ್ಠಿತ ವಲಯದ ಪ್ರವೃತ್ತಿ. ಹೀಗಾಗಿ ಬಂಡಾಯ ಸಾಹಿತ್ಯ, ಈಗಲೂ ಗುಮಾನಿಗಣ್ಣುಗಳನ್ನು ಎದುರಿಸುತ್ತದೆ. ರಾಜಧಾನಿ ಮತ್ತು ಪರಿಚಿತ ವಲಯಗಳಾಚೆಗೆ ತಾಲೂಕು ಮತ್ತು ಹಳ್ಳಿಗಳಲ್ಲಿದ್ದು ಉತ್ತಮ ಕತೆ-ಕವಿತೆಗಳನ್ನು ಬರೆಯುತ್ತಿರುವ ಬಂಡಾಯ ಬರಹಗಾರರು ಸಾಕಷ್ಟಿದ್ದಾರೆ. ಅವರನ್ನು ಅಭ್ಯಾಸ ಮಾಡದೆ ಸಾರಾಸಗಟು 'ಘೋಷಣೆ'ಗಳನ್ನು ಪುನರುಚ್ಚರಿಸುವ ಪ್ರವೃತ್ತಿ ಮುಂದುವರಿಸುತ್ತಿರುವುದು ನೋವಿನ ಸಂಗತಿ. 'ಬಂಡಾಯ'ವು ಸಂಘಟನೆಯಾಗಿ ತುಂಬಾ ತೀವ್ರವಾಗಿದ್ದಾಗ 'ಅಬ್ಬರ ಮಾಡುತ್ತಾರೆ' ಎಂದು ಟೀಕಿಸುತ್ತಿದ್ದವರು, ಅಬ್ಬರವಿಲ್ಲದೆ ಅಭಿವ್ಯಕ್ತಿ ಮಾಡತೊಡಗಿದಾಗ ಬಂಡಾಯದ ಅಬ್ಬರ ಕಾಣುತ್ತಿಲ್ಲವಲ್ಲ ಎಂದು ವ್ಯಾಖ್ಯಾನಿಸುತ್ತಾರೆ. ಇದಕ್ಕೆ ಏನು ಹೇಳುವುದು ?

ಬಂಡಾಯ ಸಾಹಿತ್ಯ ಸಂಘಟನೆ/ಚಳವಳಿಯ ಸಾಧನೆಗಳನ್ನು ಹೀಗೆ ಪಟ್ಟಿ ಮಾಡಬಹುದು.

೧. ಇಡೀ ದೇಶದಲ್ಲಿ ಸಾಂಸ್ಕೃತಿಕ ವಲಯವೊಂದು ಎಡ ಮತ್ತು ಪ್ರಜಾಸತ್ತಾತ್ಮಕ ಮೌಲ್ಯಗಳ ನೆಲೆಯಲ್ಲಿ ಮೊಟ್ಟಮೊದಲು ಸಂಘಟಿತವಾದದ್ದು – ಬಂಡಾಯ ಸಾಹಿತ್ಯ ಸಂಘಟನೆಯ ಮೂಲಕವೆಂದು ಹೇಳಬಹುದು. ಇದಕ್ಕೆ ಮುಂಚೆ ಪ್ರಗತಿಶೀಲ ಸಾಹಿತ್ಯ ಚಳವಳಿಯು ದೇಶದ ಅನೇಕ ಭಾಗಗಳಿಗೆ ವ್ಯಾಪಿಸಿತ್ತಾದರೂ, ಅದು ಎಡ ರಾಜಕೀಯ ಪಕ್ಷಗಳ ಭಾಗವೆಂದು ಭಾವಿಸಲಾಗಿತ್ತು. ಎಲ್ಲ ಪ್ರಗತಿಪರರು, ಗಾಂಧಿ, ಅಂಬೇಡ್ಕರ್, ಲೋಹಿಯಾ ಇತ್ಯಾದಿ ತಾತ್ವಿಕ ನಂಬಿಕೆಯವರು, ಪ್ರಗತಿಶೀಲ ಸಾಹಿತ್ಯ ಚಳವಳಿಯಲ್ಲಿ ಪ್ರಮುಖವಾಗಿರಲಿಲ್ಲ ಅಥವಾ ಇರಲೇ ಇಲ್ಲ. ಆದರೆ ಬಂಡಾಯ ಸಾಹಿತ್ಯ ಚಳವಳಿಯಲ್ಲಿ ಎಡಪಂಥೀಯರು, ಗಾಂಧಿ ವಾದಿಗಳು, ಲೋಹಿಯಾ ವಾದಿಗಳು, ಅಂಬೇಡ್ಕರ್ ವಾದಿಗಳು ಮತ್ತು ಯಾವುದೇ ನಿರ್ದಿಷ್ಟವಾದಿಯಾಗಿರದೆ ಒಟ್ಟಾರೆ ಪ್ರಗತಿಪರಚಿಂತೆಯಲ್ಲಿ ಆಸಕ್ತರಾದವರು – ಹೀಗೆ ಸಮಾಜ ಬದಲಾವಣೆಯಲ್ಲಿ ಕ್ರಿಯೆಗೆ ಬದ್ಧವಾದವರೆಲ್ಲ ತೊಡಗಿಸಿಕೊಳ್ಳಲು ಅವಕಾಶವಿದೆ. ಅಷ್ಟೇ ಅಲ್ಲ, ದಲಿತರಿಂದ ಬ್ರಾಹ್ಮಣರವರೆಗೆ ಎಲ್ಲ ಜಾತಿಯ ಪ್ರಗತಿಪರರೂ ಬಂಡಾಯ ಸಾಹಿತ್ಯ ಸಂಘಟನೆಯಲ್ಲಿದ್ದಾರೆ. ಬಂಡಾಯ ಎಂದರೆ ಬದಲಾವಣೆ; ಬಂಡಾಯ ಒಂದು ಮನೋಧರ್ಮ. ಇದು ಸಂಘಟನೆಯ ತಾತ್ವಿಕ ತಿರುಳು.

೨. ಸಮಾಜ ಮತ್ತು ಸಂಸ್ಕೃತಿಯಲ್ಲಿ ವ್ಯಕ್ತಿ ಕೇಂದ್ರಿತ ನೆಲೆಗಳನ್ನು ಸಮೂಹ/ಸಮುದಾಯ ಕೇಂದ್ರಿತವಾಗಿ ಪರಿವರ್ತಿಸಲು ಪ್ರಯತ್ನಿಸಿದ್ದು, ಸಾಕಷ್ಟು ಸಫಲವಾದದ್ದು, ಮತ್ತೊಂದು ಸಾಧನೆ.

೩. ಬಂಡಾಯ ಸಾಹಿತ್ಯ ಚಳವಳಿಯ ಫಲವಾಗಿ ಆಗಲೇ ಅಸ್ತಿತ್ವದಲ್ಲಿದ್ದ ಸಾಮಾಜಿಕ ಜವಾಬ್ದಾರಿಯ ಆಶಯಗಳಿಗೆ ಮರುಜೀವ ಬಂದಿತು. ಸಾಹಿತಿಯ ಸಾಮಾಜಿಕ ಜವಾಬ್ದಾರಿ ಒಂದು ಅನಿವಾರ್ಯತೆಯೆಂಬಷ್ಟು ಪ್ರಬಲ ಸಿದ್ಧಾಂತವಾಯಿತು.

೪. ಸಾಹಿತ್ಯಕ್ಷೇತ್ರದಲ್ಲಿ ಹೊಸ ಪರಿಭಾಷೆ ಮೂಡತೊಡಗಿತು. ಸೃಜನಶೀಲ ಸಾಹಿತ್ಯದಲ್ಲಿ ಕೆಳವರ್ಗ ಮತ್ತು ಹಿಂದುಳಿದ ವರ್ಗಗಳ ಅನುಭವ ಅಭಿವ್ಯಕ್ತವಾಗುತ್ತ ಮೂಡಿದ ಹೊಸ ಭಾಷೆ ಮತ್ತು ಚಿಂತನಾ ವಲಯದಲ್ಲಿ ಹೊಸ ಪರಿಭಾಷೆ ಪ್ರಚಲಿತವಾಯಿತು. ಸಾಮಾಜಿಕ-ರಾಜಕೀಯ ಪ್ರಜ್ಞೆಯ ಪರಿಭಾಷೆ ಸಾಂಸ್ಕೃತಿಕವಾಗಿ ರೂಪಾಂತರವಾಗತೊಡಗಿ ಹೊಸ ಆಯಾಮ ನಿರ್ಮಾಣವಾಯಿತು.

೫. ಬಂಡಾಯ ಸಾಹಿತ್ಯ ಸಂಘಟನೆಯ ಹುಟ್ಟಿನೊಂದಿಗೆ ದಲಿತ ಸಂವೇದನೆ, ಸ್ತ್ರೀ ಸಂವೇದನೆ ಮತ್ತು ಮುಸ್ಲಿಂ ಸಂವೇದನೆಗಳು ಹೆಚ್ಚು ಪ್ರಚುರಗೊಂಡವು. ಈ ಸಂವೇದನೆಗಳು ಮೊದಲಿನಿಂದ ಇದ್ದರೂ ಸಾಂಸ್ಕೃತಿಕ ಕ್ಷೇತ್ರದಲ್ಲಿ ವ್ಯಾಪಕ ಹಾಗೂ ತಾತ್ವಿಕ ಚಿಂತನೆಗೆ ಒಳಗಾಗಲು ಬಂಡಾಯ ಸಾಹಿತ್ಯ ಸಂಘಟನೆ ಒತ್ತಾಸೆಯಾಯಿತು. ಬಂಡಾಯ ಸಾಹಿತ್ಯ ಸಂಘಟನೆ ಹುಟ್ಟುವುದಕ್ಕೆ ಮುಂಚೆಯೇ ದಲಿತ ಸಂಘರ್ಷ ಸಮಿತಿ ಹುಟ್ಟಿ ಪ್ರಬಲವಾಗಿತ್ತು; 'ಸಮುದಾಯ ರಂಗ' ಸಂಘಟನೆ ಕ್ರಿಯಾಶೀಲವಾಗಿತ್ತು. ಸ್ತ್ರೀಪರ ಚಿಂತನೆಗೆ ಚಾಲನೆ ಒದಗಿತ್ತು. ಈ ಎಲ್ಲ ಶಕ್ತಿಗಳ ಸಹಕಾರದಿಂದ ಬಂಡಾಯ ಸಾಹಿತ್ಯ ಸಂಘಟನೆ ಹುಟ್ಟಿ ಬೆಳೆಯುತ್ತ ದಲಿತ, ಸ್ತ್ರೀ ಮತ್ತು ಮುಸ್ಲಿಂ ಸಂವೇದನೆಗಳ ಮಹತ್ವವನ್ನು ಮನವರಿಕೆ ಮಾಡಿಕೊಟ್ಟಿತು.

೬. ವಿಮರ್ಶೆಯ ಸಿದ್ಧ ಮಾದರಿಗಳನ್ನು ಪ್ರಶ್ನಿಸುತ್ತ ಹೊಸ ಚರ್ಚೆಗೆ ಕಾರಣವಾದದ್ದು


**Statement about ownership and other particulars about newspaper**

**FORM IV**

| | | |
|---|---|---|
| 1. Place of publication | : | Bangalore |
| 2. Periodicity of its publication | : | Monthly |
| 3. Printer's Name | : | R. S. Rajaram |
| Nationality | : | Indian |
| Address | : | Navakarnataka Publications (P) Ltd. Embassy Centre Crescent Road, P. B. No. 5159 Bangalore - 560 001 |
| 4. Publisher's Name | : | R. S. Rajaram |
| Nationality | : | Indian |
| Address | : | Navakarnataka Publications (P) Ltd. Embassy Centre Crescent Road, P. B. No. 5159 Bangalore - 560 001 |
| 5. Editor's Name | : | G. Ramakrishna |
| Nationality | : | Indian |
| Address | : | Navakarnataka Publications (P) Ltd. Embassy Centre Crescent Road, P. B. No. 5159 Bangalore - 560 001 |
| 6. Name and address of individuals who own the newspaper and partners and shareholders holding more than one percent of the total capital | : | Navakarnataka Publications (P) Ltd., Embassy Centre Crescent Road P. B. No. 5159 Bangalore - 560 001 (Sole Proprietors) |

I, R. S. Rajaram, hereby declare that the particulars given above are true to the best of my knowledge and belief.

Date : 28-2-2006

Sd/-
R. S. Rajaram
Publisher

ಬಂಡಾಯ ಸಾಹಿತ್ಯ ಚಳವಳಿ. ಈ ಇಪ್ಪತ್ತೈದು ವರ್ಷಗಳಲ್ಲಿ ಬಂದಿರುವ ವಿಮರ್ಶೆ ಮತ್ತು ಚಿಂತನಾ ಬರಹಗಳನ್ನು ಗಮನಿಸಿದಾಗ ಈ ಅಂಶ ಸ್ಪಷ್ಟವಾಗುತ್ತದೆ.

೭. ಪರಂಪರೆಯ ಪ್ರಜ್ಞೆ ಮತ್ತು ಪ್ರಗತಿ ಪ್ರಜ್ಞೆಗಳು ಪರಸ್ಪರ ವಿರೋಧಿಯಾಗದೆ ಅನುಸಂಧಾನದಲ್ಲಿ ತೊಡಗಬೇಕೆಂಬ ಚಿಂತನೆ ಬೆಳೆದದ್ದು ಬಂಡಾಯ ಸಾಹಿತ್ಯ ಚಳವಳಿಯ ಆರೋಗ್ಯಕರ ದೃಷ್ಟಿಕೋನಕ್ಕೆ ಸಾಕ್ಷಿಯಾಗಿದೆ. ಬಂಡಾಯ ಎನ್ನುವ ಮನೋಧರ್ಮಕ್ಕೆ ತಾವು ಮಾತ್ರ ಹಕ್ಕುದಾರರೆಂದು ಬಂಡಾಯ ಸಾಹಿತಿಗಳು ಭಾವಿಸಲಿಲ್ಲ. ಶತಶತಮಾನಗಳಿಂದ ಶೋಷಣೆ ಇದ್ದಂತೆಯೇ ಬಂಡಾಯ ಮನೋಧರ್ಮವೂ ಬೆಳೆದುಬಂದಿದೆಯೆಂಬ ಭಾವನೆಯಿಂದ ಪರಂಪರೆಯನ್ನು ನೋಡಲಾಗುತ್ತಿದೆ. ಆಯಾ ಕಾಲಘಟ್ಟದಲ್ಲಿ ಚಲನಶೀಲತೆಗೆ ಕಾರಣವಾದವರನ್ನು ಗೌರವಿಸುತ್ತ ನಮ್ಮ ಕಾಲಕ್ಕೆ ಚಲನಶೀಲತೆಯನ್ನು ತಂದುಕೊಡುವ ಹೊಣೆ ನಮ್ಮದಾಗಿದೆಯೆಂಬ ಸಮಪ್ರಜ್ಞೆ ಮತ್ತು ಸಮಾನತೆಯ ಆಶಯಗಳಿಂದ ಕೆಲಸ ಮಾಡಲಾಗುತ್ತಿದೆ.

೮. ಬಂಡಾಯ ಸಾಹಿತ್ಯ ಸಂಘಟನೆಯಲ್ಲಿ ನೇರವಾಗಿ ಗುರುತಿಸಿಕೊಳ್ಳದೆ ಇರುವ ಅನೇಕ ಸಾಹಿತಿಗಳು ಮತ್ತು ಚಿಂತಕರ ಮೇಲೆ ಬಂಡಾಯ ಸಾಹಿತ್ಯದ ಪ್ರಭಾವವಾಗಿದೆ. ಪ್ರಗತಿಶೀಲ ಸಾಹಿತ್ಯ ಚಳವಳಿಯ ಸಂದರ್ಭದಲ್ಲೂ ಈ ರೀತಿಯ ಪ್ರಭಾವವುಂಟಾಗಿತ್ತು. ಬಂಡಾಯ ಸಾಹಿತ್ಯ ಚಳವಳಿಯ ಈ ಸಂದರ್ಭದಲ್ಲಿ ದಲಿತ ಮತ್ತು ಸ್ತ್ರೀಪರ ಕಾಳಜಿಗಳನ್ನು ನಿರ್ಲಕ್ಷ್ಯ ಮಾಡದಂತಹ ಸನ್ನಿವೇಶ ನಿರ್ಮಾಣವಾಗಿದೆ. ಇದಕ್ಕೆ ವಿವಿಧ ಸಂಘಟನೆಗಳ ಪ್ರಭಾವವೂ ಕಾರಣವಾಗಿದೆ. ಆದರೆ ಸಾಹಿತ್ಯ ಸೃಷ್ಟಿ, ವಿಚಾರ-ವಿಮರ್ಶೆಯ ವಲಯದಲ್ಲಿ ಸಾಮಾಜಿಕ ಕಾಳಜಿ ಮತ್ತು ಜವಾಬ್ದಾರಿಗಳು ಗಾಢವಾಗಿ ಕಾಡಿಸಲು ಬಂಡಾಯ ಸಾಹಿತ್ಯ ಚಳವಳಿ ಕಾರಣವಾಯಿತು. ಈ ಚಳವಳಿಯ ಹೊರಗಿದ್ದವರನ್ನೂ ಈ ಕಾಳಜಿ ಕಾಡಿಸದೆ ಬಿಡಲಿಲ್ಲವೆಂಬುದಕ್ಕೆ ಅವರ ಸಾಹಿತ್ಯದಲ್ಲೇ ಸಾಕ್ಷಿಗಳಿವೆ.

ಹೀಗೆ ಅನೇಕ ಸಾಧನಾತ್ಮಕ ಬೆಳವಣಿಗೆಗೆ ಕಾರಣವಾದ ಬಂಡಾಯ ಸಾಹಿತ್ಯ ಚಳವಳಿಯು ಜಾಗತೀಕರಣ ಮತ್ತು (ಧಾರ್ಮಿಕ ಮೂಲಭೂತವಾದಗಳ) ದೇಗುಲೀಕರಣಗಳ ಇಂದಿನ ವಿಶಿಷ್ಟ ಸಂದರ್ಭದಲ್ಲಿ ಸೂಕ್ತ ಸಾಂಸ್ಕೃತಿಕ ಶೋಧಕ್ಕೆ ಒಳಗಾಗುತ್ತ ರೂಪಾಂತರಗೊಳ್ಳಬೇಕಾಗಿದೆ. ಹಿಂದಿನ ತಾತ್ವಿಕ ತಿಳುವಳಿಕೆಯನ್ನು ಬಿಟ್ಟುಕೊಡದೆ ಹೊಸ ಸಂದರ್ಭದ ಬೆಳಕಿನಲ್ಲಿ ಬೆಳೆಯಬೇಕಾಗಿದೆ. ಸಂಸ್ಕೃತಿಯ ಸೂಕ್ತ ವ್ಯಾಖ್ಯಾನ, ಉಪಸಂಸ್ಕೃತಿಗಳ ಅನುಸಂಧಾನ, ದೇಸಿ ವಿನ್ಯಾಸಗಳ ಚಲನಶೀಲ ಅಂಶಗಳೊಂದಿಗೆ ಮಾತುಕತೆ, ಕೇಡಿಲ್ಲದ ಆಧುನಿಕತೆ, ಸಾಂಸ್ಥಿಕ ಧರ್ಮ ಮತ್ತು ಭಕ್ತಿಯ ನಡುವಿನ ಅಂತರ, ಉದಾರೀಕರಣದ ಹುನ್ನಾರ – ಹೀಗೆ ಹತ್ತಾರು ಅಂಶಗಳೊಂದಿಗೆ ಸೃಜನಶೀಲ ಕ್ರಿಯೆ ಮತ್ತು ಪ್ರತಿಕ್ರಿಯೆಗಳಲ್ಲಿ ತೊಡಗುವ ಮನಸ್ಸು ಮತ್ತು ಮನೋಧರ್ಮವನ್ನು ಗಾಢಗೊಳಿಸಿಕೊಳ್ಳುವ ಸವಾಲನ್ನು ಒಳಗೊಳ್ಳಬೇಕಾಗಿದೆ. ಈ ದಿಕ್ಕಿನಲ್ಲಿ ಹೆಜ್ಜೆಯಿಟ್ಟಿರುವ ಬಂಡಾಯ ಸಾಹಿತ್ಯ ಸಂಘಟನೆಗೆ ಹೊಸ ವರ್ಚಸ್ಸು-ವಿನ್ಯಾಸ, ರೂಪುಗೊಳ್ಳಬೇಕು. ನನ್ನ ಅಭಿಪ್ರಾಯದಲ್ಲಿ ಈಗಲೂ ಬಂಡಾಯ ಸಾಹಿತ್ಯಕ್ಕೆ ಪರ್ಯಾಯವಿಲ್ಲ. ಈಗ ಬೇಕಾದ್ದು ಬಂಡಾಯ ಸಾಹಿತ್ಯ ಚಳವಳಿಯ ಅಂತರಂಗದೊಳಗಿನ ರೂಪಾಂತರ; ಬಹಿರಂಗದ ಪರ್ಯಾಯವಲ್ಲ.

ಸುದ್ದಿಚಿತ್ರ




ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆ ೨೦-೦೨-೨೦೦೬ರಂದು ಬೆಂಗಳೂರಿನಲ್ಲಿ ಏರ್ಪಾಟು ಮಾಡಿದ್ದ ಕಾರ್ಯಕ್ರಮದಲ್ಲಿ ಡಾ॥ ಬ್ರಹ್ಮದೇವ ಶರ್ಮಾ ಅವರ 'ಭಾರತದಲ್ಲಿ ಕೃಷಿ ಸಾಲ' (ಅನು : ಸಿ. ಆರ್. ಕೃಷ್ಣರಾವ್, ನವಕರ್ನಾಟಕ ಪ್ರಕಾಶನ) ಕಿರುಹೊತ್ತಿಗೆಯನ್ನು ಶ್ರೀ ಕೋ. ಚೆನ್ನಬಸಪ್ಪ ಬಿಡುಗಡೆ ಮಾಡಿದರು. ತರುವಾಯ 'ಕೃಷಿ ಕ್ಷೇತ್ರದ ಬಿಕ್ಕಟ್ಟು' ಕುರಿತು ನಡೆದ ಸಂವಾದ ಕಾರ್ಯಕ್ರಮದಲ್ಲಿ ಕಿಸಾನ್ ಸಭಾ ಮತ್ತು ರೈತ ಸಂಘಟನೆಯ ಪ್ರತಿನಿಧಿಗಳು ಸೇರಿದಂತೆ ಆಸಕ್ತರು ಭಾಗವಹಿಸಿದ್ದರು.

ಬಂಡಾಯ ಸಾಹಿತ್ಯದ ರೂಪಾಂತರಕ್ಕೆ ಸಂಬಂಧಿಸಿದ ಮಾತನ್ನು ಹೀಗೆ ವಿಸ್ತರಿಸಬಹುದು : ಸಮಾಜ ಬದಲಾವಣೆಯ ಆಶಯ ಮತ್ತು ಹೋರಾಟದ ಹಾದಿಯ ಮೂಲಕ ಸಂಘಟನೆಯಾಗಿ ಬೆಳೆದ 'ಬಂಡಾಯ'ವು ಒಂದು ಮನೋಧರ್ಮವಾಗಿ ರೂಪುಗೊಳ್ಳುವ ಪ್ರಕ್ರಿಯೆಯು ಸಾಹಿತ್ಯದಲ್ಲಿ ಪ್ರತಿಫಲನಗೊಳ್ಳುತ್ತ ಬಂದಿದೆ. ಯಾವುದೇ ಸಾಹಿತ್ಯಧಾರೆಯು ಸವೆದ ಹಾದಿಯಾದಾಗ ಹೊಸ ಹಾದಿಯನ್ನು ಹುಡುಕಬೇಕು ಇಲ್ಲವೆ ಇರುವ ಹಾದಿಯನ್ನು ಹೊಸತಾಗಿಸಿಕೊಳ್ಳಬೇಕು. 'ಬಂಡಾಯ'ವು ಸಂಘಟನೆಯಾಗಿ ಮತ್ತೆ ಶಕ್ತಿಯುತವಾಗಲು ಎಲ್ಲ ಪ್ರಗತಿಪರ ಶಕ್ತಿಗಳ ಜೊತೆಗೆ ಅರ್ಥಪೂರ್ಣ ಸಂಬಂಧವನ್ನು ಇಟ್ಟುಕೊಳ್ಳಬೇಕಾಗುತ್ತದೆ. ವಿಶೇಷವಾಗಿ ದಲಿತ ಮತ್ತು ಬಂಡಾಯ ಸಂವೇದನೆಗಳು ಸಂಘಟನಾತ್ಮಕವಾಗಿ ಒಟ್ಟಿಗೆ ವಿಕಾಸಗೊಳ್ಳುವುದು ಅಗತ್ಯವಾಗಿದೆ. ಮೊದಲಿಂದಲೂ ದಲಿತ-ಬಂಡಾಯ ಸಾಹಿತ್ಯವು ಒಂದಾಗಿಯೇ ಬೆಳೆಯುತ್ತ ಬಂದಿದ್ದು, ಮತ್ತೆ ಮತ್ತೆ ಗಾಢ ಸಂಬಂಧವನ್ನು ಪಡೆಯುತ್ತ ಹೋಗುವುದು ಎಲ್ಲ ಕಾಲದ ಕಾಳಜಿಯಾಗಿದೆ. ಸಂಘಟನೆಯನ್ನು ಬಲಪಡಿಸಲು ಸೈದ್ಧಾಂತಿಕ ನೆಲೆಯ ಶಿಬಿರಗಳು, ಸಮಕಾಲೀನ ಸಂದರ್ಭದ ಸ್ಪಷ್ಟ ತಿಳುವಳಿಕೆಗಳು, ವಿಚಾರಸಂಕಿರಣ ಹಾಗೂ ಸಮಾವೇಶಗಳು ನಡೆಯುತ್ತಿರಬೇಕು.

ಸಾಹಿತ್ಯ ಸೃಷ್ಟಿಯ ಪ್ರಶ್ನೆ ಎದುರಾದಾಗ – ಹೊಸ ಸಾಧ್ಯತೆಗಳ ಹುಡುಕಾಟ ಸದಾ ಜೀವಂತವಾಗಿರಬೇಕು. ಜಾಗತೀಕರಣದ ಒತ್ತಡಕ್ಕೆ ಉತ್ತರವಾಗಿ ದೇಸಿ ಸಂಸ್ಕೃತಿಯ ವಿವರಗಳನ್ನು ರೂಪಕವಾಗಿಸುವ ಪ್ರಯತ್ನವನ್ನು ದಲಿತ-ಬಂಡಾಯ ಸಾಹಿತ್ಯವು ಒಂದು ಸವಾಲಾಗಿ ಸ್ವೀಕರಿಸಬೇಕಾಗಿದೆ. ಸಾಮಾಜಿಕ ಕಾಳಜಿಯನ್ನು ಬಿಟ್ಟುಕೊಡದೆ ನಡೆಸುವ ದೇಸಿ ಸಂಸ್ಕೃತಿಯ ಶೋಧವು ನಿಜಕ್ಕೂ ಹೊಸ ರೂಪಕಗಳನ್ನು ಸೃಷ್ಟಿಸಬಲ್ಲದು. ದೇಸಿ ಸಂಸ್ಕೃತಿಯು ಸ್ಥಳೀಯ ಮೌಖಿಕ ಚರಿತ್ರೆಯನ್ನೂ ಒಳಗೊಳ್ಳುವುದರಿಂದ ಸಾಹಿತ್ಯ ಸೃಷ್ಟಿಯ ಸಾಧ್ಯತೆಗಳನ್ನು ತಾನೇತಾನಾಗಿ ವಿಸ್ತರಿಸುತ್ತದೆ. ಆದರೆ ದೇಸಿ ಸಂಸ್ಕೃತಿಯ ಬಗ್ಗೆ ಅನಗತ್ಯ ಆತ್ಮರತಿಯ ಅಗತ್ಯವಿಲ್ಲ. ಆತ್ಮರತಿಯ ಅಪಾಯವನ್ನು ಅರಿಯುತ್ತಲೇ 'ದೇಸಿ ಸಂಸ್ಕೃತಿ ಮತ್ತು ಚರಿತ್ರೆ'ಯನ್ನು ಪುನರ್‌ಸೃಷ್ಟಿಯ ಪ್ರತೀಕವಾಗಿಸುವ ಪ್ರಯತ್ನ ನಮ್ಮದಾಗಬೇಕು. ಇಲ್ಲದಿದ್ದರೆ ದೇಸಿ ಸಂಸ್ಕೃತಿಯ ಪ್ರತಿಪಾದನೆಯು ಕೋಮುವಾದಿಗಳ ಸ್ವದೇಶಿ ಪ್ರತಿಪಾದನೆಯಾಗುವ ಅಪಾಯವಿದೆ. ದೇಸಿ ಸಂಸ್ಕೃತಿಯ ಸರ್ವಾಂಶಗಳೂ ಶ್ರೇಷ್ಠವೆಂದು ಭಾವಿಸಿದಾಗ ಈ ಅಪಾಯ ಹತ್ತಿರವಾಗುತ್ತದೆ. ನಮಗೆ ದೇಸಿ ಸಂಸ್ಕೃತಿಯು ಆತ್ಮವಿಶ್ವಾಸದ ಒಂದು ಇತಿಹಾಸವಾಗಬೇಕು; ಸರ್ವರೋಗ ಸಂಜೀವಿನಿಯಾಗಬಾರದು. ಮಾರ್ಕ್ಸ್ ಆಡ್ಲೆರ್ತ್ ಹೇಳಿದಂತೆ ನಮ್ಮ ಕಾಲದ ಸಾಹಿತ್ಯ ಸೃಷ್ಟಿಯಲ್ಲಿ ತನ್ಮಯತೆ ಮತ್ತು ಎಚ್ಚರ ಎರಡೂ ಏಕಕಾಲಕ್ಕೆ ಕ್ರಿಯಾಶೀಲವಾಗಿರಬೇಕು. ಈ ಮೂಲಕ ಸಾಹಿತ್ಯದಲ್ಲಿ ದೇಸಿ ಸಂಸ್ಕೃತಿಯ ರೂಪಕಗಳನ್ನು ಸೃಷ್ಟಿಸುತ್ತ, ಸಂಘಟನೆಯಲ್ಲಿ ಸ್ಥಳೀಯ ಚರಿತ್ರೆಯ ಅಗತ್ಯವನ್ನು ಆಂದೋಲನದ ರೂಪದಲ್ಲಿ ಅಳವಡಿಸಿಕೊಳ್ಳಬಹುದಾಗಿದೆ. ಸ್ಥಳೀಯ ಚರಿತ್ರೆಯೂ 'ದೇಸಿ'ಯೇ ಆಗುತ್ತದೆಯಾದ್ದರಿಂದ ಅರ್ಥಪೂರ್ಣ ಅರಿವಿನ ಆಂದೋಲನಕ್ಕೆ ಅಗತ್ಯ ವ್ಯಾಪಕತೆ ಲಭ್ಯವಾಗುತ್ತದೆ. ಈ ನಿಟ್ಟಿನಲ್ಲಿ 'ಉಪ ಸಂಸ್ಕೃತಿಗಳ ಅಧ್ಯಯನ' ತುಂಬಾ ಉಪಯುಕ್ತವಾಗುತ್ತದೆ; ಹೊಸ ಹೊಳಹುಗಳಿಗೆ ಒಂದು ಪ್ರಮುಖ ಪ್ರೇರಣೆಯಾಗುತ್ತದೆ. ಆದ್ದರಿಂದ 'ಉಪ ಸಂಸ್ಕೃತಿ'ಗಳನ್ನು ಹುಸಿ ಸಂಸ್ಕೃತಿಯ ಪ್ರಧಾನತೆಗೆ ಮುಖಾಮುಖಿಯಾಗಿಸಬೇಕು; ಮುಖ್ಯವಾಗಿಸಬೇಕು. ಹೀಗೆಂದಕೂಡಲೆ ಉಪ ಸಂಸ್ಕೃತಿಗಳಲ್ಲಿ ಎಲ್ಲವೂ ಗ್ರಾಹ್ಯವೆಂದು ತಿಳಿಯದೆ, ಚಲನಶೀಲ ಅಂಶಗಳನ್ನು ಪ್ರೇರಕವಾಗಿ, ರೂಪಕವಾಗಿ ಗ್ರಹಿಸಬೇಕು. ಇದರಿಂದ ಬಂಡಾಯ ಸಾಹಿತ್ಯ ಮತ್ತು ಸಂಸ್ಕೃತಿಗಳ ಸಾಧ್ಯತೆಗಳು ಸಕಾರಾತ್ಮಕವಾಗಿ ವಿಸ್ತಾರಗೊಳ್ಳುತ್ತವೆ. ಯಾಕೆಂದರೆ, ಉಪ ಸಂಸ್ಕೃತಿಗಳು 'ಒಟ್ಟಾಗಿ' ಪ್ರಧಾನ ಸಂಸ್ಕೃತಿಗಳೇ ಆಗುತ್ತವೆ.

ಸಾಹಿತ್ಯದ ವಿವಿಧರೂಪಗಳನ್ನು ಪ್ರಯೋಗಾತ್ಮಕವಾಗಿ ಬಳಸುವ ಕೆಲಸವನ್ನು ಬಂಡಾಯ ಸಾಹಿತ್ಯವು ಮಾಡಬಹುದಾಗಿದೆ. ಉದಾಹರಣೆಗೆ ಹೇಳುವುದಾದರೆ ಇತ್ತೀಚೆಗೆ ಬಂಡಾಯ ಕವಿ ಜಂಬಣ್ಣ ಅಮರಚಿಂತರು ಗಜಲು ರೂಪದಲ್ಲಿ ಕಾವ್ಯಾಭಿವ್ಯಕ್ತಿ ಮಾಡಿದ್ದಾರೆ. ಈ ಮೂಲಕ ಬಂಡಾಯ ಕಾವ್ಯವು ಹೊಸಹೊಸ ರೂಪಗಳಲ್ಲಿ ಅನಾವರಣಗೊಳ್ಳಬಹುದಾದ ಸಾಧ್ಯತೆಯನ್ನು ತೋರಿಸಿದ್ದಾರೆ. ಗಜಲಿನ ಸಾಂಪ್ರದಾಯಿಕ ನೆಲೆಗಳನ್ನು ಮೀರಿದ್ದಾರೆ. ಇದೇ ರೀತಿ ಜನಪದ ಕಾವ್ಯದ ವಿವಿಧ ರೂಪಗಳಿರಬಹುದು, ಬೇರೆ ಭಾಷೆಗಳಲ್ಲಿ ಬಳಕೆಯಾದ, ಕನ್ನಡಕ್ಕೆ ಪರಿಚಿತವಿಲ್ಲದ ವಿನ್ಯಾಸಗಳಿರಬಹುದು – ಹೀಗೆ ಹೊಸ ಅಭಿವ್ಯಕ್ತಿ ವಿನ್ಯಾಸಗಳನ್ನು ಹುಡುಕಬಹುದಾಗಿದೆ.

ಇಂದು 'ಅಭಿರುಚಿ ಆಂದೋಲನ'ದ ಅಗತ್ಯವೂ ಇದೆ. ಹೊಸ ಪೀಳಿಗೆಯು ಜಾಗತೀಕರಣದ ಪ್ರಭಾವದಲ್ಲಿ ಬೆಳೆಸಿಕೊಳ್ಳುತ್ತಿರುವ ಮನೋಧರ್ಮಕ್ಕೆ ಪರ್ಯಾಯವಾಗಿ ಶಾಲಾ-ಕಾಲೇಜುಗಳ ವಿದ್ಯಾರ್ಥಿವೃಂದ ಮತ್ತು ಯುವ ಮನಸ್ಸುಗಳನ್ನು ಗಮನದಲ್ಲಿಟ್ಟುಕೊಂಡು ಸಾಹಿತ್ಯ, ರಂಗಭೂಮಿ, ಸಿನಿಮಾ, ಸಂಗೀತ, ಚಿತ್ರಕಲೆ – ಮುಂತಾದ ಪ್ರಕಾರಗಳ ಸ್ಥಳೀಯ ಹಾಗೂ ಸಾಮಾಜಿಕ ಕಾಳಜಿಯ ಸಾಧ್ಯತೆಗಳನ್ನು ತೆರೆದಿಟ್ಟು ಸದಭಿರುಚಿಯನ್ನು ಮೂಡಿಸುವುದು

ಜರೂರಿನ ಕೆಲಸವೆಂದು ನನ್ನ ಭಾವನೆ. ಇದಕ್ಕೆ ಸ್ಪಷ್ಟ ಯೋಜನೆ ಮತ್ತು ಚಿಂತನೆಯ ಅಗತ್ಯ ವಿದೆ. ಈ ಕೆಲಸವು ಎರಡು ಹಂತಗಳನ್ನು ಒಟ್ಟಿಗೇ ಒಳಗೊಳ್ಳಬೇಕಾಗುತ್ತದೆ. ಮೊದಲನೆ ಯದು – ಸದಭಿರುಚಿ ನಿರ್ಮಾಣ. ಎರಡನೆಯದು – ಅದರ ಜೊತೆಯಲ್ಲೇ ಸಾಮಾಜಿಕ ಕಾಳಜಿ. ಹೀಗೆ ಎರಡೊಂದಾಗಿ ವಿಶಾಲವ್ಯಾಪ್ತಿಯ ಅಭಿರುಚಿ ನಿರ್ಮಾಣದ ಮೂಲಕ ಜಾಗತೀ ಕರಣ ಮತ್ತು ಹುಸಿ ಸಂಸ್ಕೃತೀಕರಣಗಳಿಗೆ ಪರ್ಯಾಯ ನೆಲೆಗಳನ್ನು ರೂಪಿಸಬಹುದಾಗಿದೆ.

ಒಂದು ಸತ್ಯವನ್ನು ನಾವು ಅರ್ಥಮಾಡಿಕೊಳ್ಳಬೇಕು. 'ವ್ಯವಸ್ಥೆ' ಇದ್ದಂತೆಯೇ ಇರುವವರೆಗೆ ಬಂಡಾಯ ಮನೋಧರ್ಮದ ಅಗತ್ಯ ಇದ್ದೇ ಇರುತ್ತದೆ. ವ್ಯವಸ್ಥೆಯೆಂದರೆ ಕೆಲವರು ತಿಳಿದಂತೆ ಕೇವಲ ಸರ್ಕಾರವಲ್ಲ. ಸರ್ಕಾರವೂ ವ್ಯವಸ್ಥೆಯ ಒಂದು ಭಾಗ. ವ್ಯವಸ್ಥೆಯ ವ್ಯಾಪ್ತಿಗೆ ಜನವಿರೋಧಿಯಾದ ಸಾಮಾಜಿಕ-ಆರ್ಥಿಕ-ರಾಜಕೀಯ ಸಂಗತಿ ಗಳೆಲ್ಲವೂ ಬರುತ್ತವೆ. ಅಂದರೆ, ವರ್ಣಾಶ್ರಮ ಪದ್ಧತಿ, ಜಾತಿಪದ್ಧತಿ, ವರ್ಗಭೇದ ನೀತಿ, ಲಿಂಗಭೇದ ನೀತಿ, ಕೋಮುವಾದ – ಇವೆಲ್ಲವೂ ಸೇರಿ 'ವ್ಯವಸ್ಥೆ'ಯಾಗುತ್ತದೆ. ಇಂಥ ವ್ಯವಸ್ಥೆಯನ್ನು ವಿರೋಧಿಸಲು ಪಾರ್ಲಿಮೆಂಟರಿ ಪ್ರಜಾಪ್ರಭುತ್ವದ ಮಾರ್ಗಗಳನ್ನು ಕೆಲವರು ಆರಿಸಿಕೊಂಡರೆ, ಅದರಾಚೆಗಿನ ಮಾರ್ಗಗಳನ್ನು ಆರಿಸಿಕೊಂಡವರೂ ಇದ್ದಾರೆ. ಇದು ಅವರವರ ತಾತ್ವಿಕ ನಂಬಿಕೆಯ ಪ್ರಶ್ನೆ.

ಬಂಡಾಯ ಸಾಹಿತ್ಯ ಸಂಘಟನೆಯು ಸಾಹಿತ್ಯ ಮತ್ತು ಸಂಘಟನೆಯನ್ನು ಒಟ್ಟಿಗೇ ನಿರ್ವಹಿಸುವ ಪ್ರಜಾಸತ್ತಾತ್ಮಕ ಪಕ್ವತೆಯನ್ನು ತನ್ನ ತಾತ್ವಿಕ ನೆಲೆಯಲ್ಲಿ ಪ್ರತಿಫಲಿಸುತ್ತ ಬಂದಿದೆ. ಈಗ, ಹೊಸ ಸವಾಲುಗಳಿಗೆ, ವ್ಯವಸ್ಥೆಯ ಹುನ್ನಾರಗಳಿಗೆ ಉತ್ತರ ರೂಪವಾಗಿ ಸಮಚಿತ್ತದ ಸೃಜನಶೀಲ ಸಾಧ್ಯತೆಗಳನ್ನು ಹುಡುಕುತ್ತ ತನ್ನ ಜೀವಶಕ್ತಿಯನ್ನು ವೃದ್ಧಿಸಿಕೊಳ್ಳುವುದು ಅಗತ್ಯವಾಗಿದೆ. ನಾವು, ಇದನ್ನು ಕೇವಲ ಸಾಹಿತ್ಯ ಮತ್ತು ಸಂಘಟನೆಯ ಶಕ್ತಿ ವೃದ್ಧಿಯೆಂದು ತಿಳಿಯದೆ ಸಾಮಾಜಿಕ ಜವಾಬ್ದಾರಿ ಮತ್ತು ಕ್ರಿಯೆಯ ವಿಸ್ತರಣೆಯೆಂದು ಭಾವಿಸಬೇಕಾಗಿದೆ.

ನಾನಿಲ್ಲಿ ಮಾಡಿರುವುದು ಸಾಂಕೇತಿಕ ಪ್ರಸ್ತಾಪ ಮಾತ್ರ. ಈ ದಿಕ್ಕಿನಲ್ಲಿ ಬಂಡಾಯ ಸಾಹಿತ್ಯ ಮತ್ತು ಸಂಘಟನೆಗಳು ಹೊಸ ಸವಾಲುಗಳಿಗೆ ಉತ್ತರವಾಗಿ ಹೊಸ ರೂಪ ಪಡೆಯಬೇಕು.

**ಪ್ರೊ|| ಬರಗೂರು ರಾಮಚಂದ್ರಪ್ಪ**
ನಂ. ೨೭೫, ೧೧ನೇ 'ಬಿ' ಕ್ರಾಸ್, ೧೪ನೇ ಮೇನ್, ಎ.ಇ.ಟಿ. ಪಾಲಿಟೆಕ್ನಿಕ್ ಹತ್ತಿರ
ಜೆ.ಪಿ.ನಗರ ೨ನೇ ಹಂತ, ಬೆಂಗಳೂರು - ೫೬೦ ೦೭೮.

## ಹೋರುತ್ತಿದೆ ಭೂಮಿ



ಅಸ್ತಿತ್ವಕೆ ಹೋರಾಡುತ್ತಿರುವಂತೆ ನಾವಿಲ್ಲಿ
ಹೋರುತ್ತಿದೆ ಸೌರವ್ಯೂಹದಲಿ ಚಲಿಸುತ್ತಿಹ ಭೂಮಿ
ಸುತ್ತುವ ಗ್ರಹಗಳ ಸೆಳೆತಕೆ ಸೋತರೆ ನುಚ್ಚುನೂರು
ಆಗ ಹೇಳಿ, ನಿಲ್ಲಲು ನಮಗೆ ಯಾವುದು ಊರು ?

ಈ ಇಳೆಯ ಒಡಲಲ್ಲಿ ಎಂಥ ಜೀವಂತ ಸೋಜಿಗಗಳು !
ಎಣಿಕೆಗೆಟುಕದ ಜೀವ ಜಾಲಗಳು, ಮರುಮರೀಚಿಕೆಗಳು
ಮಿಲನದೊಲವುಗಳು, ಆನಂದದದ್ಭುತಗಳು; ಕಣ್ಮುಚ್ಚಿದರೆ
ಕಾಣುವ, ಮೌನದಲಿ ನಿಜವಾಗುವ ವಿಸ್ಮಯಗಳು !

ಎಲೆ ತಾಯೆ ಕಂಡುಕೊಂಡಿತೆ ನಿನ್ನ ಮನುಜ ಕುಲ
ದೇವರು ಧರ್ಮಗಳಿಗೆ ಹೇಳು ಯಾವುದು ನೆಲ ?
ಆಕಾಶದಲಿ ತಿರುಗುತ್ತಿರುವ ಬುಗುರಿ ನೀನು
ತಿರುಗಿಸುವ ಕೈ ತನ್ನಿರವು ಕಾಣಗೊಡದಲ್ಲ!

ಬ್ರಹ್ಮ ವಿಷ್ಣು, ಶಿವ, ಅಹುರಮಜ್ದಾ, ಜಹೋವ,
ಮಹಾವೀರ, ಬುದ್ಧ, ರಾಮ, ಕೃಷ್ಣ, ಕ್ರಿಸ್ತ , ಅಲ್ಲಾ?
ಹೇಳುತ್ತ ಹೋದರೆ ಹೆಸರುಗಳಿಗೆ ಕೊನೆ ಇಲ್ಲ
ಒಳಗೆ ತಿಳಿಯದೆ ಹೊರಟ ಕಲ್ಪನೆಗೆ ಮಿತಿ ಇಲ್ಲ.

ಗುಡಿ ಚರ್ಚು ಮಸೀದಿಗಳೆಲ್ಲ ಭೂಮಿತಾಯಿಯ ಒಡಲ
ಬಗೆದು ಕಟ್ಟಿದಿಟ್ಟಿಗೆ ಗೂಡುಗಳು; ಒಳಗುರಿಯುತ್ತಿದೆ
ಜ್ಯೋತಿಯಲ್ಲ ಸುಡುವ ಸೂಡು, ಎದೆಯ ದೀಪವಳಿದಮೇಲೆ
ಬೆಳಗೀತೆ ನಾಡು ? ಉನ್ಮತ್ತದಿ ಕುಣಿಯುವ ಪ್ರೇತಗಳ ಸುಡುಗಾಡು

ಭುಗಿಲೆದ್ದಿದೆ ಮುಗಿಲುದ್ದಕೆ ಒಡಲಾಳದ ಸುಡು ಸಂಕಟ
ಸುಳಿಸುಳಿಸುಳಿಯಾಗಿ ಸುತ್ತೆಸೆಯುತ್ತಿದೆ ದ್ವೇಷದ ದಳ್ಳುರಿ
ಸಿಡಿಯಲಾರದೆ ಮಿಡಿಯಲಾರದೆ ನರಳಿ ಹೊರಳುತ್ತಿದೆ ಭೂಮಿ
ಸುತ್ತುವ ಗ್ರಹಗಳ ಸೆಳೆತಕೆ ಸೋತರೆ ನುಚ್ಚುನೂರು

ಬಡವರ ಬೆವರ ಬಸಿದು ಒಡಲ ತುಂಬಿದ್ದೇವೆ ಸುಡುವ
ಅಣುಬಾಂಬುಗಳ; ಉಣುವ ತುಟಿಗಳ ಹೊಲೆದಿದ್ದೇವೆ;
ಪ್ರೀತಿಯ ಬಾಹುಗಳ ಬಂಧಿಸಿದ್ದೇವೆ; ಮೆರೆದಿದೆ ಮೌಢ್ಯದ
ಮೆರವಣಿಗೆ ; ಕಡೆಯ ಉಸಿರಿಗೆ ಮಿಣುಕುತ್ತಿದೆ ಬತ್ತಿದೆದೆಯ ಹಣತೆ.

ಸುತ್ತುತ್ತಿದೆ ಸೆಣಸುತ್ತಿದೆ ಕ್ಷಣಕ್ಷಣವೂ ಹೋರುತ್ತಿದೆ
ಜೀವ ಸಂಕುಲಗಳ ಉಳಿವಿಗೆ ನಮ್ಮೀ ಭೂಮಿ
ಯಾವ ಕ್ಷಣದಲಿ ಏನೋ ಗೆಳೆಯ !
ಎದೆಯು ನಗುತಲಿರಲಿ ನಿರಂತರ ಪ್ರೀತಿ ತುಂಬಿ ಬರಲಿ.

ಜ. ಹೊ. ನಾರಾಯಣಸ್ವಾಮಿ, ನಂ. ೨೦೬೪/ಎ, "ಮಾನವ", ಉತ್ತರ ಬಡಾವಣೆ, ಹಾಸನ - ೫೭೩ ೨೦೧

**ಬಂ**ಗಾಳಿ ಸಾಹಿತಿ ಶಿವರಾಮ್ ಚಕ್ರವರ್ತಿಯವರ (೧೯೦೩-೮೦) ವಿವಾದಾತ್ಮಕ ಲೇಖನ ಸಂಗ್ರಹ **ಆಜ್ ಓ ಆಗಾಮಿಕಾಲ್** (ಇಂದು ಮತ್ತು ನಾಳೆ) ಪ್ರಕಟವಾದದ್ದು ೭೭ ವರ್ಷಗಳ ಹಿಂದೆ, ಎಂದರೆ ೧೯೨೯ರಲ್ಲಿ. ಅಂದಿನ ದಿನಗಳಲ್ಲಿ ಸಮಾಜವಾದದ ಪರ ಹಾಗೂ ವಿರುದ್ಧದ ಸೈದ್ಧಾಂತಿಕ ಸಮರದಲ್ಲಿ ತೊಡಗಿಕೊಂಡಿದ್ದ ಎರಡು ಬಣಗಳನ್ನು ಮಾಸ್ಕೊ ಮತ್ತು ಪಾಂಡಿಚೆರಿ ಎಂಬುದಾಗಿ ಸಾಂಕೇತಿಸಿ ರಚಿಸಿರುವ ಈ ಲೇಖನ ಸಂಗ್ರಹ ನಂತರದ ದಿನಗಳಲ್ಲಿ **ಮಾಸ್ಕೊ ಬಾನಾಮ್ (ವರ್ಸಸ್) ಪಾಂಡಿಚೆರಿ** ಎಂಬ ಹೆಸರಿನಲ್ಲಿ ಪ್ರಕಟಣೆಗೊಂಡು ಮನ್ನಣೆ ಗಳಿಸಿತಲ್ಲದೆ ತೀವ್ರ ಪ್ರತಿಕ್ರಿಯೆಗಳನ್ನೂ ಹುಟ್ಟುಹಾಕಿತು. ಅನೇಕ ಮರುಮುದ್ರಣಗಳನ್ನು ಕಂಡಿರುವ ಈ ಕೃತಿ ಈಗಲೂ ತನ್ನ ಜನಪ್ರಿಯತೆಯನ್ನು ಕಳೆದುಕೊಂಡಿಲ್ಲ.

ಬಂಗಾಳಿ ಸಾಹಿತ್ಯದಲ್ಲಿ ಶಿವರಾಮ್ ಚಕ್ರವರ್ತಿಯವರನ್ನು ಪ್ರಮುಖವಾಗಿ, ಎಳೆಯರಿಗಾಗಿ ಬರೆಯುತ್ತಿದ್ದ ಒಬ್ಬ ಹಾಸ್ಯ ಲೇಖಕನೆಂದೇ ಪರಿಗಣಿಸುತ್ತಾರೆ. ಆತನ ಹೆಸರಾಗಲಿ ಕೃತಿಗಳಾಗಲಿ ಇತರೆಡೆ ಹೆಚ್ಚು ಪ್ರಚಲಿತವಾಗಲಿಲ್ಲ. ಶಬ್ದಪ್ರಯೋಗಗಳಲ್ಲಿನ ಚಮತ್ಕಾರದ ಪದರಚನೆಗಳೇ ಪ್ರಧಾನವಾಗಿದ್ದ ಆತನ ಬರವಣಿಗೆಯ ಶೈಲಿಗೆ ಕಿರುವಯಸ್ಕರು ಮಾರುಹೋಗುತ್ತಿದ್ದರು. ಆದರೆ, ಒಮ್ಮೊಮ್ಮೆ ಅತಿ ಎನಿಸುವ ದ್ವಂದ್ವಾರ್ಥವುಳ್ಳ ಪದಗಳ ಬಳಕೆ ಅಕೆಡೆಮಿಕ್ ಎನ್ನಬಹುದಾದ ಸುಸಂಸ್ಕೃತ, ಸುಶಿಕ್ಷಿತ ಓದುಗರಿಗೆ ರುಚಿಸುತ್ತಿರಲಿಲ್ಲ. ತಾರುಣ್ಯದ ಒಲವುಗಳನ್ನು

ಮೂಲ : **ಪ್ರೊ॥ ರಾಮಕೃಷ್ಣ ಭಟ್ಟಾಚಾರ್ಯ**
ಕನ್ನಡಕ್ಕೆ : **ಎಸ್. ಸುರೇಂದ್ರ**

ಅವರೊಂದಿಗೆ ಕಲ್ಕತ್ತೆಗೆ ಬಂದು ನೆಲೆಸಿದ ವಿವರಗಳು ಆತನ ಆತ್ಮಚರಿತ್ರೆಯಲ್ಲಿವೆ. ಆ ನಂತರ ಬರವಣಿಗೆಯನ್ನು ವೃತ್ತಿಯಾಗಿಸಿಕೊಳ್ಳುವ ಶಿವರಾಮ್ ವಿವಿಧ ಕಾರ್ಯಕ್ಷೇತ್ರಗಳಲ್ಲಿ ತೊಡಗಿಕೊಂಡು ಸಂಪ್ರದಾಯಶರಣರಾಗಿ ಬಿಡುತ್ತಾರೆ ಎಂಬ ಕಾರಣಕ್ಕಾಗಿಯೇ ಯುವಕನಾಗಿ ಆತ ಗಳಿಸಿದ ಸಾಧನೆಗಳನ್ನು ತಳ್ಳಿಹಾಕಲಾಗದು. ಬಂಧನದಲ್ಲಿದ್ದ ಅನೇಕ ರಾಷ್ಟ್ರೀಯವಾದಿಗಳನ್ನು, ತೀವ್ರಗಾಮಿ ಚಿಂತನೆಗಳನ್ನು ಹೊಂದಿದ್ದ ಯುವಕರನ್ನು ಸಮಾಜವಾದಿಗಳನ್ನಾಗಿ ಪರಿವರ್ತಿಸುವಲ್ಲಿ **ಆಜ್ ಓ ಆಗಾಮಿಕಾಲ್** ವಹಿಸಿದ ಪಾತ್ರಕ್ಕೆ ಸಾಕಷ್ಟು ಮನ್ನಣೆ ಸಿಗದೇಹೋದದ್ದು ವಿಷಾದನೀಯ. ನಳಿನಿಕಾಂತ ಗುಪ್ತ, ದಿಲೀಪ್‌ಕುಮಾರ್ ರಾಯ್, ಮಹೇಂದ್ರ ರಾಯ್, ಸಚಿನ್ ಸೇನ್‌ರಂತಹ ಪ್ರತಿಭಾವಂತರು ಪ್ರಾರಂಭಿಸಿದ ಕಮ್ಯುನಿಸ್ಟ್ ವಿರೋಧಿ ಕಾರ್ಯಾಚರಣೆಗೆ ಪ್ರತಿಯಾಗಿ ಶಿವರಾಮ್ ಹೋರಾಡಿದ ಪರಿ ಅಚ್ಚರಿ ಉಂಟುಮಾಡುತ್ತದೆ. ಹಾಗೆ ನೋಡಿದರೆ ಆತ ಎಂದಿಗೂ ಕಮ್ಯುನಿಸ್ಟ್ ಆಗಿರಲಿಲ್ಲ; ಮಾರ್ಕ್ಸ್ ಲೆನಿನ್‌ರ ಶ್ರೇಷ್ಠ ಗ್ರಂಥಗಳ ಅಧ್ಯಯನವನ್ನೂ ಆಳವಾಗಿ ಮಾಡಿರಲಿಲ್ಲ. ಲೇಖನವೊಂದರಲ್ಲಿ ತಾನೊಬ್ಬ ವ್ಯಕ್ತಿವಾದಿಯಷ್ಟೆ ಮತ್ತು ಯಾವನೇ ಒಬ್ಬ ವ್ಯಕ್ತಿವಾದಿ ತನ್ನ ಎಲ್ಲ

ಭಾರತದಲ್ಲಿದ್ದ ಕಮ್ಯುನಿಸ್ಟರ ಸಂಖ್ಯೆ ತೀರ ಕಡಿಮೆ. ಅವರಲ್ಲಿ ಬಹುತೇಕ ಜನರ ವಿರುದ್ಧ ರಾಷ್ಟ್ರವಿರೋಧಿ ಕೃತ್ಯಗಳಲ್ಲಿ ತೊಡಗಿದ್ದರೆಂಬ ಆಪಾದನೆಯ ಮೇಲೆ ಮೊಕದ್ದಮೆಗಳನ್ನು ಹೂಡಿ ಬಂಧಿಸಲಾಗಿತ್ತು. ಅಂದಿನ ದಿನಗಳಲ್ಲಿ 'ಭಾರತೀಯ ಆಧ್ಯಾತ್ಮಿಕತೆ, ಅಲೌಕಿಕ ತತ್ವ ಜಿಜ್ಞಾಸೆ' ಮುಂತಾದುವುಗಳ ಸಮರ್ಥಕರೆನಿಸಿಕೊಂಡಿದ್ದವರು ಒಡ್ಡಿದ ಸವಾಲುಗಳನ್ನು ಜೈಲಿನ ಹೊರಗಿದ್ದವರು ಎದುರಿಸಲು ಶಕ್ತರಾಗಿರಲಿಲ್ಲ. ಮುಜ಼ಾಫ಼ರ್ ಅಹಮದ್ ಅವರ ಸರಳ ಹಾಗೂ ದಕ್ಷ ಗದ್ಯ ಶೈಲಿಯನ್ನು ಶಿವರಾಮ್ ಬಹುವಾಗಿ ಮೆಚ್ಚಿಕೊಂಡಿದ್ದರು. ಗಾಂಧಿವಿರೋಧಿ ಉಗ್ರವಾದಿಗಳು ಪ್ರಕಟಿಸುತ್ತಿದ್ದ ನಿಯತಕಾಲಿಕಗಳು ಆಗಿನ ಶುದ್ಧ ಸಾಹಿತ್ಯಕ ಭಾಷೆಯ ಸಾಂಪ್ರದಾಯಿಕ ಸ್ವರೂಪಗಳಿಗಿಂತ ವಿಭಿನ್ನ ಶೈಲಿಯಲ್ಲಿ ಓದುಗರೊಡನೆ ಸಂವೇದಿಸುತ್ತಿದ್ದವು. ಭಾಷೆಯ ಸರಳತೆಯಿಂದಾಗಿ ಅಂತಹ ನಿಯತಕಾಲಿಕಗಳು, ಪತ್ರಿಕೆಗಳು ಜನಸಾಮಾನ್ಯರನ್ನು ತಲುಪಲು ಸಾಧ್ಯವಾಯಿತೆನ್ನಬಹುದು. ಶಿವರಾಮ್ ಅವರ **ಜುಗಾಂತರ್**, ಕಾಜ಼ಿ ನಜ್ರುಲ್ ಇಸ್ಲಾಮರ **ಧೂಮಕೇತು** ಮತ್ತು ಮುಜ಼ಾಫ಼ರ್ ಅಹಮದ್‌ರ **ಲಾಂಗಾಲ್** ಹಾಗೂ **ಗಾನಾಬಾನಿ** ಪತ್ರಿಕೆಗಳು ಪ್ರಮಥ ಚೌಧರಿ ಮತ್ತು ರವೀಂದ್ರನಾಥ್ ಟಾಗೂರರು ಪ್ರತಿಪಾದಿಸುತ್ತಿದ್ದ ಶೈಲಿಯನ್ನೇ ಅನುಸರಿಸಿದುವು. ಅದು ಪಾಂಡಿಚೆರಿವಾಲಾಗಳು ಹಳೆಯ ಕಾಲದ ಶುಷ್ಕ ಪಾಂಡಿತ್ಯ ಶೈಲಿಗೆ ಮೊರೆಹೋಗಿದ್ದ ಕಾಲ. ಶಿವರಾಮ್ ಅಳವಡಿಸಿಕೊಂಡ ವ್ಯಾವಹಾರಿಕ ವಿಧಾನಗಳು ಈ ಶೈಲಿಗೆ ತದ್ವಿರುದ್ಧ

# ಮಾಸ್ಕೋ ಬಾನಾಮ್ ಪಾಂಡಿಚೆರಿ

## ಒಂದು ವಿಶಿಷ್ಟ ಕೃತಿ

**ಜಗತ್ತಿನ ಮೂರನೇ ಒಂದು ಭಾಗದಷ್ಟಿದ್ದ ರಾಷ್ಟ್ರಗಳಲ್ಲಿ ಸಮಾಜವಾದ ಹಿನ್ನಡೆಯಿಟ್ಟ ಪರ್ವಕಾಲದಲ್ಲಿ ಬೆಳೆದುಬಂದಿರುವ ಹೊಸ ಪೀಳಿಗೆಯ ಜನರಲ್ಲೂ ಮಾಸ್ಕೊ ಬಾನಾಮ್ (ವರ್ಸಸ್) ಪಾಂಡಿಚೆರಿ ಆರೋಗ್ಯಕರ ಚಿಂತನೆಗಳನ್ನು ಮೂಡಿಸಬಲ್ಲ ಕೃತಿಯಾಗಿದೆ. ಇಂದಿಗೂ ಶಿವರಾಮ್ ಚಕ್ರವರ್ತಿಯವರ ಬರವಣಿಗೆ, ಅವರ ದ್ವಂದ್ವಾರ್ಥಗಳುಳ್ಳ ಪದರಚನೆಯ ಶೈಲಿ ಮತ್ತು ಹಾಸ್ಯಪ್ರಜ್ಞೆಯನ್ನು ಓದುಗರು ಸವಿಯುತ್ತಾರೆ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ.**

ಮೀರಿ ಬೆಳೆದಿರುವ ನನ್ನಂಥವರಿಗೆ ಬಂಗಾಳಿ ಭಾಷೆಯ ಶಬ್ದಾರ್ಥಗಳ ಮಾಂತ್ರಿಕ ಜಗತ್ತನ್ನು ಪರಿಚಯಿಸಿ ಪದಗಳ ಬಗೆಬಗೆಯ ಅರ್ಥಗಳ ಶೋಧದ ಮೂಲಕ ಗಳಿಸಬಹುದಾದ ವಾಕ್‌ಶಕ್ತಿಯ ಅದ್ಭುತ ಸಾಧ್ಯತೆಗಳನ್ನು ಶಿವರಾಮ್ ತಿಳಿಯಪಡಿಸಿದ್ದನ್ನು ಎಂದಿಗೂ ಮರೆಯಲಾರೆ.

೧೯೨೦ರ ಸುಮಾರಿಗೆ, ಯುವ ಪತ್ರಕರ್ತನಾಗಿದ್ದಾಗ ಶಿವರಾಮ್ **ಜುಗಾಂತರ್** ಪತ್ರಿಕೆಯಲ್ಲಿ ಬಂಡಾಯಕೋರ ಲೇಖನಗಳು ಕವನಗಳನ್ನು ಬರೆದು ಬಂಧನಕ್ಕೊಳಗಾಗಿದ್ದುದು ನನಗೆ ಇಂದಿಗೂ ನೆನಪಿದೆ. ಮೊದಲ ತಲೆಮಾರಿನ ಬಂಗಾಳಿ ಯುವಕರ ಕ್ರಾಂತಿಕಾರಿ ತಂಡವೊಂದು ಪ್ರಾರಂಭಿಸಿದ ಜುಗಾಂತರ್ ಹೆಚ್ಚು ಕಾಲ ಉಳಿಯಲಿಲ್ಲ. ೧೯೦೮ರಲ್ಲಿ ಅದನ್ನು ನಿಷೇಧಿಸಲಾಗಿತ್ತು. ಆ ಪತ್ರಿಕೆಯನ್ನು ಮತ್ತೆ ಚಲಾವಣೆಗೆ ತಂದ ಕೀರ್ತಿ ಶಿವರಾಮ್ ಅವರಿಗೆ ಸಲ್ಲಬೇಕು. ತನ್ನ ವಿದ್ಯಾರ್ಥಿ ದೆಸೆಯಲ್ಲೇ ಸಿ. ಆರ್. ದಾಸ್‌ರ ಸಂಪರ್ಕ ದೊರೆತು

ಸಾಮರ್ಥ್ಯಗಳನ್ನೂ ನೆರವೇರಿಸಿಕೊಳ್ಳಲು ಸಾಧ್ಯವಾಗುವುದು ಸಮಾಜವಾದಿ ವ್ಯವಸ್ಥೆಯಲ್ಲಿ ಮಾತ್ರ ಎಂದು ಆಗಾಗ್ಗೆ ಹೇಳುತ್ತಿದ್ದುದುಂಟು. ವಾದವಿವಾದಗಳಲ್ಲಿ ನಿಪುಣರೆನಿಸಿದ್ದ ಶಿವರಾಮ್‌ರ ಸಾಧನೆ ಅನುಕರಣೀಯ ಎಂದೇನೂ ಹೇಳಲಾಗದು. ಆದರೆ ಆತನ ಅಪರೂಪದ ಬರವಣಿಗೆಯ ಶೈಲಿ ಮೆಚ್ಚುವಂಥಾದ್ದು. ಸೋವಿಯತ್ ಒಕ್ಕೂಟವು ಒಂದು ಹೊಸದಾದ ಪ್ರಗತಿಪರ ಸಾಮಾಜಿಕ ವ್ಯವಸ್ಥೆಯ ಸಮರ್ಥನಕಾರ ಎಂದು ಶಿವರಾಮ್ ಆ ರಾಷ್ಟ್ರದ ಪರ ನಿಂತದ್ದು ಹೊಸ ತಲೆಮಾರಿನ ನೂರಾರು ಯುವಕರು ನಂತರದ ದಿನಗಳಲ್ಲಿ ಕಮ್ಯುನಿಸ್ಟರಾಗದೇ ಹೋದರೂ ಸಮಾಜವಾದದ ಕಟ್ಟಾ ಅಭಿಮಾನಿಗಳಾಗುವಂತೆ ಪ್ರೇರೇಪಿಸಿದ್ದಂತೂ ನಿರ್ವಿವಾದ.

ಶಿವರಾಮ್ ಚಕ್ರವರ್ತಿಯವರ ಒಟ್ಟಾರೆಯ ಸಾಧನೆಗಳ ಮೌಲ್ಯಮಾಪನ ಮಾಡುವಾಗ ಆತನಿದ್ದ ೧೯೨೦ರ ಕಾಲಾವಧಿಯನ್ನು ಗಮನದಲ್ಲಿಡುವುದು ಅವಶ್ಯ. ಆಗ

ವಾಗಿದ್ದವು. ತಮ್ಮ ಕಡೆಯ ದಿನಗಳವರೆಗೂ ಶಿವರಾಮ್ ಅಂತಹ ಅತಿರಥ ಮಹಾರಥರ ವಿರುದ್ಧದ ದಿನನಿತ್ಯದ ಸಂಘರ್ಷದಲ್ಲಿ ಒಬ್ಬಂಟಿಗನಾಗಿದ್ದುಕೊಂಡೇ ಹೋರಾಡಿದರು. ಸೋವಿಯತ್ ಒಕ್ಕೂಟದ ಪರ ಗಟ್ಟಿಯಾಗಿ ನಿಂತು ಅಂತಹ ಕಮ್ಯುನಿಸ್ಟ್ ವಿರೋಧಿ ಬುದ್ಧಿಜೀವಿಗಳನ್ನು ತಮ್ಮ ಪ್ರಚಾರ ಮತ್ತು ಪ್ರತಿವಾದಗಳ ಮೂಲಕ ಬಗ್ಗು ಬಡೆಯುವುದರಲ್ಲಿ ಯಶಸ್ವಿಯೂ ಆದರು. ಆತನ ಎಲ್ಲ ಲೇಖನಗಳೂ **ನವಶಕ್ತಿ** ಮುಂತಾದ ಪ್ರಭಾವಿ ಪತ್ರಿಕೆಗಳಲ್ಲಿ ಪ್ರಕಟವಾಗಿವೆ.

**ಆಜ್ ಓ ಆಕಾಮಿಕಾಲ್** ಲೇಖನ ಸಂಗ್ರಹ ನಿರೀಕ್ಷೆಗಿಂತಲೂ ಹೆಚ್ಚಿನ ಜನಪ್ರಿಯತೆ ಗಳಿಸಿತು. ಅದರ ಎರಡನೆಯ ಆವೃತ್ತಿ ಪ್ರಕಟವಾದದ್ದು ೧೯೪೩ರಲ್ಲಿ. ಈ ಮಧ್ಯೆ ಬಂಗಾಳದಲ್ಲಿ ಕಮ್ಯುನಿಸ್ಟ್ ಚಳುವಳಿಯು ತನ್ನ ಪ್ರಭಾವವನ್ನು ಹೆಚ್ಚಿಸಿಕೊಂಡಿತ್ತು. ಆಗಲೇ ಪ್ರಸ್ತಾಪಿಸಿದಂತೆ ಶಿವರಾಮ್ ಅವರನ್ನು ಎಳೆಯರಿಗಾಗಿ ಬರೆಯುವ ಒಬ್ಬ ಲೇಖಕನಷ್ಟೆ ಎಂದು ಗುರುತಿಸುತ್ತಿದ್ದ ಕಾರಣಕ್ಕಾಗಿಯೇ

**ಆಜ್ ಓ ಅಗಾಮಿಕಾಲ್‌**ನ ಎರಡನೆಯ ಆವೃತ್ತಿ ಅಷ್ಟು ಜನಪ್ರಿಯವಾಗಲಿಲ್ಲ. ೧೯೮೦ರಲ್ಲಿ ಪ್ರಕಟಣೆಗೊಂಡ ಅದರ ಮರುಮುದ್ರಣಕ್ಕೆ ಮತ್ತೆ ಅಂತಹುದೇ ಪ್ರತಿಕ್ರಿಯೆ. ಬಂಗಾಳದ ಪ್ರಸಿದ್ಧ ಕವಿ ಸುಭಾಷ್ ಮುಖ್ಯೋಪಾಧ್ಯಾಯ ತಮ್ಮ ವಿಮರ್ಶೆಯಲ್ಲಿ, ಶಿವರಾಮ್ ಅವರನ್ನು ಒಬ್ಬ ಹಾಸ್ಯ ಲೇಖಕನಷ್ಟೆ ಎಂದು ಗುರುತಿಸಿರುವ ಹಿನ್ನೆಲೆಯಲ್ಲಿ ಮತ್ತು ಆ ನಂತರ ಎಷ್ಟೋ ವರ್ಷಗಳು ಗತಿಸಿಹೋಗಿರುವ ಇಂದಿನ ಸಂದರ್ಭದಲ್ಲಿ ಸೋವಿಯತ್ ಕ್ರಾಂತಿಯ ನಂತರದ ಅವಧಿಯಲ್ಲಿ ಬರೆಯಲಾಗಿರುವ ಈ ಲೇಖನಗಳನ್ನು ಗಂಭೀರವಾಗಿ ಪರಿಗಣಿಸಲು ಹೇಗೆ ಸಾಧ್ಯ ? ಎಂಬ ಸಂಶಯ ವ್ಯಕ್ತಪಡಿಸುತ್ತಾರೆ. ಆದರೆ ೧೯೯೮ರಲ್ಲಿ ಹೊರತಂದ **ಆಜ್ ಓ ಅಗಾಮಿಕಾಲ್‌**ನ ಮರುಮುದ್ರಣವನ್ನು ಓದುಗರು ಆದರದಿಂದ ಬರಮಾಡಿಕೊಂಡಿದ್ದಕ್ಕೆ ಇದೇ ವಿಮರ್ಶಕ ಸಂತೋಷಪಡುತ್ತಾರೆ. ಮುಜ಼ಾಫ್ಫರ್ ಅಹಮದ್‌ರ ಗದ್ಯ ಶೈಲಿಯಂತೆಯೇ ಸುಭಾಷ್ ಮುಖ್ಯೋಪಾಧ್ಯಾಯ ಅವರ ಗದ್ಯ ಶೈಲಿಯೂ ಶಿವರಾಮ್ ಅವರಿಗೆ ಅಚ್ಚುಮೆಚ್ಚು. ಕಮ್ಯುನಿಸ್ಟ್ ಸಿದ್ಧಾಂತದ ಪ್ರಭಾವದಿಂದಲೇ ಇವರಿಬ್ಬರೂ ಸರಳ ಹಾಗೂ ಜನಸಾಮಾನ್ಯರಿಗೆ ಆಪ್ತವೆನಿಸುವ ಬರವಣಿಗೆಯ ಶೈಲಿಯನ್ನು ರೂಢಿಸಿಕೊಳ್ಳಲು ಸಾಧ್ಯವಾದದ್ದು ಎಂದು ಶಿವರಾಮ್ ನಂಬಿದ್ದರು.

**ಮಾಸ್ಕೊ ಬಾನಾಮ್ ಪಾಂಡಿಚೆರಿ** ಇಂದಿಗೂ ಒಂದು ಅಧ್ಯಯನಯೋಗ್ಯ ಕೃತಿ. ಅರವಿಂದ ಆಶ್ರಮದವರು ಪ್ರಕಟಿಸುತ್ತಿದ್ದ ಪ್ರಚಾರ ಸಾಹಿತ್ಯವನ್ನು ಕಟುವಾದ ವ್ಯಂಗ್ಯ ಮತ್ತು ಮೊನಚು ಮಾತುಗಳಿಂದ ತೀವ್ರ ಟೀಕೆಗೆ ಗುರಿಮಾಡುವ ಶಿವರಾಮ್ ಅವರಿಗೆ ಪಾಂಡಿಚೆರಿ ಬಣವು ಮುಖ್ಯ ಗುರಿಯಾದರೂ ಪ್ರಮೇಯ ಬಂದಾಗಲೆಲ್ಲಾ ಇತರ ಧಾರ್ಮಿಕ ಮಠಗಳನ್ನೂ ಆಶ್ರಮಗಳನ್ನೂ ತರಾಟೆಗೆ ತೆಗೆದುಕೊಳ್ಳಲು ಮರೆಯುತ್ತಿರಲಿಲ್ಲ. ಇಪ್ಪತ್ತನೆಯ ಶತಮಾನದ ಮೊದಲ ದಶಕಗಳಲ್ಲಿ ಅವರ ತೀವ್ರಗಾಮಿ ರಾಜಕೀಯ ಹಿನ್ನೆಲೆ ಮತ್ತು ಯೋಗ ಸಂಬಂಧಿತ ವರ್ಚಸ್ಸಿನಿಂದಾಗಿ ಅರವಿಂದ ಘೋಷರನ್ನು ಜನರು ಅತ್ಯಂತ ಗೌರವದಿಂದ ಕಾಣುತ್ತಿದ್ದರು. ಅಂದಿನ ಕಾಲಘಟ್ಟದಲ್ಲಿ ಪಂಡಿತರಾದಿಯಾಗಿ ಅನೇಕ ಪ್ರತಿಭಾವಂತ ಬುದ್ಧಿಜೀವಿಗಳೂ ಮಾಸ್ಕೊ ಮತ್ತು ಪಾಂಡಿಚೆರಿ ಎರಡೂ ಬಣಗಳ ಮಧ್ಯೆ ಅತ್ತಿಂದಿತ್ತ ತೂಗಾಡುತ್ತ ಒಂದು ಬಗೆಯ ಡೋಲಾಯಮಾನ ಸ್ಥಿತಿಯಲ್ಲಿದ್ದರು. ಇಲ್ಲಿ ನರೇಂದ್ರನಾಥ್ ರಾಯ್ ಅವರನ್ನು ಕುರಿತಂತೆ ಒಂದು ಮಾತು. ೧೯೩೫-೪೦ರ ಸುಮಾರಿನಲ್ಲಿ ಮೀರತ್ ಪಿತೂರಿ ಮೊಕದ್ದಮೆಯಲ್ಲಿ ಆಪಾದಿತರಾಗಿದ್ದ ರಾಧಾರಮಣ ಮಿತ್ರ ಅವರೊಡಗೂಡಿ ಮಾರ್ಕ್ಸ್‌ವಾದಿ ಸಿದ್ಧಾಂತವನ್ನು ಅಧ್ಯಯನ ಮಾಡಿದ ನಂತರವೇ ಶಿವರಾಮ್ ಮಾಸ್ಕೊ ಬಣದತ್ತ ಒಲವು ತೋರಿ ಕಡೆಯ ದಿನಗಳವರೆಗೂ ತಮ್ಮ ನಿಷ್ಠೆಯನ್ನು ಉಳಿಸಿಕೊಂಡರು. ಅದೇ ಸಂದರ್ಭದಲ್ಲಿ ಇದಕ್ಕೆ ತದ್ವಿರುದ್ಧವಾಗಿ ಜರುಗಿದ ಘಟನೆಗಳಿಗೇನೂ ಕಡಿಮೆಯಿರಲಿಲ್ಲ. ಬಂಗಾಳದ ಕಾರ್ಮಿಕ ಚಳುವಳಿಯ ಮೊದಲ ಸಂಘಟಕರಲ್ಲೊಬ್ಬರಾದ ಪ್ರಮೋದ್ ಕುಮಾರ್ ಸೇನ್ ಕಾಲಕ್ರಮೇಣ ಅರವಿಂದ ಆಶ್ರಮದೆಡೆಗೆ ವಾಲಿಕೊಂಡದ್ದು ಈ ನಿಟ್ಟಿನಲ್ಲಿ ಒಂದು ಉದಾಹರಣೆ.

ಅಂದಿನ ದಿನಗಳಲ್ಲಿ ಅಪಾರ ಮನಃಸ್ಥೈರ್ಯವಿದ್ದವರಿಗೆ ಮಾತ್ರ ಪ್ರಖ್ಯಾತರೆನಿಸಿದ್ದ ಪಾಂಡಿಚೆರಿ ಸಿದ್ಧಾಂತಿಗಳ ವಿರುದ್ಧ ಸೆಣಸಲು ಸಾಧ್ಯವಿತ್ತು ಎನ್ನಬಹುದು. ನಳಿನಿಕಾಂತ ಗುಪ್ತ ಮತ್ತು ಅವರ ಸಂಗಡಿಗರು ಸೋವಿಯತ್ ಒಕ್ಕೂಟದ ಪರ ನಿಲುವು ತಾಳಿದುದರ ಹಿನ್ನೆಲೆ ಕುರಿತು ಇಂದಿಗೂ ಸ್ಪಷ್ಟತೆಯಿಲ್ಲ. ಅದೇ ಸುಮಾರಿಗೆ ಶ್ರೀ ಅರವಿಂದರೇ, ''ಪ್ರಾಯಶಃ ನನ್ನ ಯೋಗ ಶಕ್ತಿಯ ನೆರವಿನಿಂದಾಗಿ ರಷ್ಯಾದ ಕ್ರಾಂತಿಯ ಯಶಸ್ಸಿಗಾಗಿ ಶ್ರಮಿಸಿದೆ'' ಎಂದು ಹೇಳಿಕೊಂಡಿದ್ದಿದೆ. ಆದರೆ ಅವರು ಬೋಲ್ಶೆವಿಕ್‌ರ ಕಡು ವಿರೋಧಿಗಳಾಗಿದ್ದುದೂ ವಾಸ್ತವ ಸಂಗತಿ.

ಪಾಂಡಿಚೆರಿ ಬಣದ ಚಿಂತಕರನ್ನು ಶಿವರಾಮ್ ಎಷ್ಟು ತೀವ್ರವಾಗಿ ಖಂಡಿಸುತ್ತಿದ್ದರೋ ಅಷ್ಟೇ ತೀವ್ರವಾಗಿ ಸುಭಾಷ್ ಚಂದ್ರ ಬೋಸರೂ ಖಂಡಿಸಿದ್ದರು. ಅಖಿಲ ಭಾರತ ಯುವಜನ ಕಾಂಗ್ರೆಸ್ (೧೯೨೮)ನ ಮೂರನೆಯ ಅಧಿವೇಶನವನ್ನುದ್ದೇಶಿಸಿ ಮಾತನಾಡುತ್ತಾ 'ಪಾಂಡಿಚೆರಿ ಮತ್ತು ಸಬರಮತಿ' ಎರಡೂ ಬಣದವರು, ''ದಾರ್ಶನಿಕತೆಗೆ ದೂರವೆನಿಸಿದ, ಆದರೆ ನಿಜಾರ್ಥದಲ್ಲಿ ನಿಷ್ಕ್ರಿಯತೆಯನ್ನು ಪ್ರತಿಪಾದಿಸುತ್ತಿದ್ದ'' ಬೋಧನೆಯ ಬಗ್ಗೆ ಸುಭಾಷರು ತಮ್ಮ ಪ್ರತಿರೋಧವನ್ನು ವ್ಯಕ್ತಪಡಿಸಿದ್ದಿದೆ. ಸುಭಾಷರ ಈ ಮಾತುಗಳಿಂದಾಗಿ ಗಾಂಧೀಜಿ ಮತ್ತು ಅರವಿಂದ ಘೋಷರ ಅನುಯಾಯಿಗಳು ಅಸಮಾಧಾನಪಡುವಂತಾಯಿತು. ಇದಕ್ಕೆ ತದ್ವಿರುದ್ಧವಾಗಿ ಪ್ರತಿಕ್ರಿಯಿಸಿದ ಶಿವರಾಮ್ ಸನಾತನ ಧರ್ಮದ ಮೂಲ ತತ್ವಗಳನ್ನೇ ಗೇಲಿಮಾಡುತ್ತಾರೆ.

ಸಮಾಜವಾದದ ಬಗ್ಗೆ ತಮಗೆ ಹೆಚ್ಚು ತಿಳಿದಿರಲಿಲ್ಲವೆಂದು ಶಿವರಾಮ್ ಒಂದು ಸಂದರ್ಭದಲ್ಲಿ ಒಪ್ಪಿಕೊಂಡಿದ್ದರು. ಶಿವರಾಮ್ **ಆಜ್ ಓ ಅಗಾಮಿಕಾಲ್** ಬರೆದಾಗ ಮಾರ್ಕ್ಸ್‌ವಾದಿ ಸಾಹಿತ್ಯವು ಅಷ್ಟಾಗಿ ಲಭ್ಯವಿರಲಿಲ್ಲ ಎಂದ ಮಾತ್ರಕ್ಕೆ ಅವರಿಗೆ ಆ ಸಿದ್ಧಾಂತದ ಬಗ್ಗೆ ಸ್ವಲ್ಪವೂ ಅರಿವೇ ಇರಲಿಲ್ಲ ಎಂದೇನೂ ಹೇಳಲಾಗದು. ವೈಚಾರಿಕತೆ ಮತ್ತು ಭೌತವಾದಗಳಲ್ಲಿ ಸಾಕಷ್ಟು ಪರಿಶ್ರಮವಿದ್ದ ಶಿವರಾಮ್ ಅವರಿಗೆ 'ಶರೀರವಿಲ್ಲದೆ ಆತ್ಮವು ಇರಲು ಸಾಧ್ಯವಿದೆ' ಎಂಬ ತತ್ವದಲ್ಲಿ ಎಳ್ಳಷ್ಟೂ ನಂಬಿಕೆಯಿರಲಿಲ್ಲ. ಬಹುಶಃ ಮಾರ್ಕ್ಸ್ ಮತ್ತು ಏಂಗಲ್ಸ್‌ರು ಪ್ರತಿಪಾದಿಸಿರುವ ಮೂಲಭೂತ ತತ್ವಗಳಿಂದ ಅವರು ಪ್ರಭಾವಿತರಾಗಿದ್ದುದು ಇದಕ್ಕೆ ಕಾರಣವಿರಬೇಕು.

ಇಷ್ಟಾದರೂ, ಕಾಲಗತಿಯಲ್ಲಿ ಮೂಲತಃ ತಾನು ಒಂದು ಸಾಧನ ಮಾತ್ರ ಎಂದು ಹೇಳಿಕೊಳ್ಳುವ ಧಾರ್ಷ್ಟ್ಯ ಅವರಿಗಿತ್ತು ಎಂಬುದು ಶಿವರಾಮ್‌ರ ಐತಿಹಾಸಿಕ ಪಜ್ಞೆಗೆ ಸಾಕ್ಷಿಯಾಗಿದೆ. ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವಗಳಂತಹ ಉದಾತ್ತ ಮೌಲ್ಯಗಳು ಜಗತ್ತಿನೆಲ್ಲೆಡೆ ಜನಸಾಮಾನ್ಯರಲ್ಲಿ ಚೈತನ್ಯಶೀಲತೆಯನ್ನುಂಟುಮಾಡುತ್ತಿದ್ದ ಹೊಸ ವಾತಾವರಣಕ್ಕೆ ತೆರೆದ ಮನಸ್ಸಿನಿಂದ ಸ್ಪಂದಿಸಿದ ಈ ಬುದ್ಧಿಜೀವಿ ''ಎಲ್ಲ ಜಲಗಾರರ, ಎಲ್ಲ ಕಡುಬಡವರ, ಎಲ್ಲ ದೀನದಲಿತರ ಕವಿ ನಾನು'' ಎಂದು ಹಾಡುವ ಬಂಗಾಳದ ಹೆಸರಾಂತ ಕವಿ ಕಾದಂಬರಿಕಾರ ಪ್ರೇಮೇಂದ್ರ ಮಿತ್ರ ಅವರ ಮಾನವೀಯತೆಯಿಂದ ಗಾಢವಾಗಿ ಪ್ರಭಾವಿತರಾಗಿದ್ದವರು ಅವರು. ಅವರ ಒಡನಾಡಿಗಳೂ ರಷ್ಯಾದ ಕ್ರಾಂತಿಯ ಬೇರುಗಳನ್ನು ೧೭೮೯ರ ಫ್ರೆಂಚ್ ಕ್ರಾಂತಿಯಲ್ಲಿ ಗುರುತಿಸುತ್ತಾರೆ.

ಸಾಮಾಜಿಕ ಕಾಳಜಿಯುಳ್ಳ ಒಬ್ಬ ವ್ಯಕ್ತಿಯಾಗಿ ಶಿವರಾಮ್ ಸಮಾಜವಾದವನ್ನು ಸಮರ್ಥಿಸುತ್ತಿದ್ದರೇ ವಿನಾ ನೈತಿಕ ಬದ್ಧತೆಯುಳ್ಳ ಒಬ್ಬ ಕಮ್ಯುನಿಸ್ಟನಾಗಿ ಅಲ್ಲ. ಒಂದು ಉನ್ನತ ಧ್ಯೇಯಕ್ಕಾಗಿ ಹೋರಾಡುತ್ತಿದ್ದೇನೆಂಬ ಆತ್ಮವಿಶ್ವಾಸವಿದ್ದುದರಿಂದಲೇ ಅವರು ಅನೇಕ ಘಟಾನುಘಟಿಗಳನ್ನು ಎದುರಿಸಲು ಸಾಧ್ಯವಾಯಿತೆನ್ನಬಹುದು.

ಜಗತ್ತಿನ ಮೂರನೇ ಒಂದು ಭಾಗದಷ್ಟಿದ್ದ ರಾಷ್ಟ್ರಗಳಲ್ಲಿ ಸಮಾಜವಾದ ಹಿನ್ನಡೆಯಿಟ್ಟ ಪರ್ವಕಾಲದಲ್ಲಿ ಬೆಳೆದು ಬಂದಿರುವ ಹೊಸ ಪೀಳಿಗೆಯ ಜನರಲ್ಲೂ **ಮಾಸ್ಕೊ ಬಾನಾಮ್ (ವರ್ಸಸ್) ಪಾಂಡಿಚೆರಿ** ಆರೋಗ್ಯಕರ ಚಿಂತನೆಗಳನ್ನು ಮೂಡಿಸಬಲ್ಲ ಕೃತಿಯಾಗಿದೆ. ಇಂದಿಗೂ ಶಿವರಾಮ್ ಚಕ್ರವರ್ತಿಯವರ ಬರವಣಿಗೆ, ಅವರ ದ್ವಂದ್ವಾರ್ಥಗಳುಳ್ಳ ಪದರಚನೆಯ ಶೈಲಿ ಮತ್ತು ಹಾಸ್ಯ ಪ್ರಜ್ಞೆಯನ್ನು ಓದುಗರು ಸವಿಯುತ್ತಾರೆ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ.

**ಪ್ರೊ॥ ರಾಮಕೃಷ್ಣ ಭಟ್ಟಾಚಾರ್ಯ**
ಮೋಹನಲಾಲ್ ರಸ್ತೆ, ಕೋಲ್ಕತ್ತ

ಸುದ್ದಿಚಿತ್ರ



ಮೈಸೂರಿನಲ್ಲಿ ಪ್ರಾರಂಭವಾದ ನವಕರ್ನಾಟಕ ಪುಸ್ತಕ ಪ್ರದರ್ಶನವನ್ನು ಪ್ರಜಾನುಡಿ ಪತ್ರಿಕೆಯ ಸಂಪಾದಕರಾದ ಶ್ರೀ ಕೃಷ್ಣವಟ್ಟಂ ಉದ್ಘಾಟಿಸಿದರು. ಅದೇ ಸಂದರ್ಭದಲ್ಲಿ ನವಕರ್ನಾಟಕದ ಐದು ಹೊಸ ಪ್ರಕಟಣೆಗಳನ್ನು ಅಂಕಣಕಾರ ಹಾಗೂ ಪ್ರವಾಚಕರಾದ ಡಾ॥ ನಿರಂಜನ ವಾನಳ್ಳಿಯವರು ಅನಾವರಣಗೊಳಿಸಿದರು. ಹಲವು ಸಾಹಿತ್ಯಾಸಕ್ತರು ಭಾಗವಹಿಸಿದ್ದರು.

# ಕಿವಿಗೊಡು

**ವೈ. ಎನ್. ಗುಂಡೂರಾವ್**

**ಸ್ಕೂ**ಲಿನಲ್ಲಾಗಲೀ, ಕಾಲೇಜಿನಲ್ಲಾಗಲೀ ಅಧ್ಯಾಪಕರು ಕಂಠಶೋಷಣೆ ಮಾಡಿಕೊಂಡು 'ನಾವು ಹೇಳುವುದನ್ನು ಕಿವಿಗೊಟ್ಟು ಕೇಳಿರಯ್ಯ, ಸುಮ್ಮನೆ ಏಕೆ ಕಿವುಡರಂತೆ ಕುಳಿತಿರುವಿರಯ್ಯಾ' ಎಂದು ವಿದ್ಯಾರ್ಥಿಗಳನ್ನು ಆಗಾಗ್ಗೆ ಎಚ್ಚರಿಸುತ್ತಲೇ ಇರುತ್ತಾರೆ. ಆದರೆ 'ಹುಚ್ಚುಖೋಡಿ ಮನಸು ಹದಿನಾರರ ವಯಸ್ಸು' ಎಂಬಂತಾಗಿ ಮನಸ್ಸು ಎಲ್ಲೆಲ್ಲೋ ಹಾರಾಡುತ್ತಿರುತ್ತದೆ. ಕಿವಿಗೊಡುವುದು ಕಷ್ಟವಾಗುತ್ತದೆ.

ಒಮ್ಮೆ ಕುವೆಂಪು ಅವರು ನಾಗವರ್ಮನ ಕರ್ನಾಟಕ ಕಾದಂಬರಿ ಸಂಗ್ರಹದ ಪಾಠ ಮಾಡುತ್ತಿದ್ದರಂತೆ. ಅದರಲ್ಲಿ ಬರುವ ಮಹಾಶ್ವೇತೆಗೆ ಸಂಬಂಧಿಸಿದ ಒಂದು ಪದ್ಯವನ್ನು ಸುಮಾರು ಮೂವತ್ತು ನಿಮಿಷ ವಿಶದವಾಗಿ ವಿವರಿಸಿದಾಗ ಪ್ರತಿಯೊಬ್ಬ ಹುಡುಗನೂ ಮಹಾಶ್ವೇತೆಯ ಕಾಲಕ್ಕೆ ಹೋಗಿ ಯೋಚಿಸುತ್ತಾ ಕುಳಿತುಬಿಟ್ಟರಂತೆ. ಆಗ ಒಬ್ಬ ವಿದ್ಯಾರ್ಥಿ ಎದ್ದುನಿಂತು ''ಸರ್, ಈ ಸಂದರ್ಭ ನನಗೆ ಅರ್ಥವಾಗಲಿಲ್ಲ ಇನ್ನೊಂದು ಸಾರೆ ಹೇಳುತ್ತೀರಾ'' ಎಂದನಂತೆ. ಅರ್ಧಘಂಟೆ ಓತಪ್ರೋತವಾಗಿ ಹೇಳಿದ ಪಾಠವೂ ತಲೆಗೆ ಹೋಗಲಿಲ್ಲವೆಂದರೆ, ನೀನು ಕಿವಿಗೊಟ್ಟು ಕೇಳಿದ್ದು ಅಷ್ಟರಲ್ಲೇ ಇದೆ, ಎಲ್ಲರಿಗೂ ಅರ್ಥವಾಗಿರಬೇಕಾದರೆ ನಿನಗೊಬ್ಬನಿಗೆ ಅರ್ಥವಾಗಲಿಲ್ಲವೇ ? ತರಗತಿಯಲ್ಲಿ ಕುಳಿತಿದ್ದರೂ ಆಟ, ಓಟ, ಸಿನಿಮಾ ಮತ್ತು ಕಾದಂಬರಿಗಳನ್ನು ನೆನಪಿಸಿಕೊಂಡು ಕುಳಿತರೆ ಅರ್ಥವಾಗುವುದಾದರೂ ಹೇಗಯ್ಯಾ ? ದಂಡಕಾರಣ್ಯಕ್ಕೆ ಎಷ್ಟು ಲಾಂದ್ರ ಹಿಡಿದರೆ ತಾನೆ ಬೆಳಕಾದೀತು ? ಕೂತ್ಕೊ, ಇನ್ನಾವಾಗಲಾದರೂ ಹೇಳುತ್ತೇನೆ'' ಎಂದರಂತೆ. ಇದನ್ನು ಎನ್. ಪ್ರಹ್ಲಾದರಾಯರು ತಮ್ಮ 'ಮುತ್ತಿನಹಾರ' ಪ್ರಬಂಧ ಸಂಕಲನದಲ್ಲಿ ವಿದ್ಯಾರ್ಥಿಗಳ ಮನಸ್ಸು ಹೇಗೆ ಹಾರಾಟ ನಡೆಸುತ್ತಿರುತ್ತದೆ ಎಂಬುದರ ಬಗ್ಗೆ ವರ್ಣಿಸಿದ್ದಾರೆ.

ಇನ್ನೊಂದು ಪ್ರಸಂಗ, ಪ್ರಾಧ್ಯಾಪಕರು ತರಗತಿಗೆ ಬರಲಿಲ್ಲವೆಂದು ಗದ್ದಲ ಎಬ್ಬಿಸುತ್ತಿದ್ದ ಹುಡುಗರನ್ನು ತಹಬಂದಿಗೆ ತರಲು ಪ್ರಿನ್ಸಿಪಾಲರಾಗಿದ್ದ ಪಡುಕೋಣೆ ರಮಾನಂದರಾಯರೇ ಇದೇನಿದು ಗಲಾಟೆ ಎಂದು ನೋಡಲು ಸ್ವತಃ ಅವರೇ ಎದ್ದುಬಂದರಂತೆ. ಇದನ್ನು ನೋಡಿದ ಕೂಡಲೇ ಗೌರವ ಸೂಚಿಸಲು ಹುಡುಗರು ಎದ್ದುನಿಂತರಂತೆ. ''ಪ್ರಾಧ್ಯಾಪಕರು ಬಾರದಿದ್ದರೆ ಏಕೆ ಗಲಾಟೆ ಮಾಡುತ್ತಿದ್ದೀರಾ ? ನೀವೇ ಸುಮ್ಮನೆ ಕುಳಿತುಕೊಂಡು ಅಭ್ಯಾಸ ಮಾಡಿಕೊಂಡರಾಗದೇ ?'' ಎಂದಾಗ, ತುಂಟ ವಿದ್ಯಾರ್ಥಿಯೊಬ್ಬ ಎದ್ದುನಿಂತು ''ಪಾಠ ಮಾಡಿದರೇ ಕಿವಿಗೆ ಹೋಗೊಲ್ಲ, ಇನ್ನು ನಾವೇ ಕುಳಿತು ಅಭ್ಯಾಸಮಾಡೋದೇನು ಬಂತು ಮಣ್ಣು'' ಎಂದನಂತೆ.

''ಹೌದಾ ! ಹಾಗಾದರೆ ಕೊಡಿಲ್ಲಿ, ನಿನ್ನ ಡೆಸ್ಕಿನ ಮೇಲಿರುವ ಪುಸ್ತಕ'' ಎಂದರಂತೆ. ತೆಗೆದುಕೊಂಡು ನೋಡಿದರೆ ಷೇಕ್ಸ್‌ಪಿಯರ್ ನಾಟಕ. ಅದನ್ನೇ ತೆಗೆದುಕೊಂಡು ವೇದಿಕೆ ಹತ್ತಿ ಓದುತ್ತ ಓದುತ್ತ ಅರ್ಥ ವಿವರಿಸಿದರು. ನಿಂತಲ್ಲೇ ಪಾತ್ರಗಳನ್ನು ಅಭಿನಯಿಸಿ ತೋರಿಸಿದರು. ಅತ್ತಿತ್ತ ಓಡಾಡುತ್ತ ಶೈಲಾಕ್‌ನ ಕಹಿತನ, ಆ್ಯಂಟೋನಿಯ ಅಸಹಾಯಕತೆ, ಪೋರ್ಷಿಯಾಳ ಚುರುಕು ಬುದ್ಧಿ ಎಲ್ಲವೂ ಹೊರಹೊಮ್ಮಿಬಂದಾಗ ಮಂತ್ರಮುಗ್ಧರಂತೆ ಕೇಳುತ್ತ ಕುಳಿತಿದ್ದ ವಿದ್ಯಾರ್ಥಿಗಳಿಗೆ ಬೆಲ್ ಬಾರಿಸಿದ್ದೂ ಕೇಳಿಸಲಿಲ್ಲವಂತೆ. ಇಷ್ಟಕ್ಕೂ ರಮಾನಂದರಾಯರ ಬೋಧನೆಯ ವಿಷಯ ರಸಾಯನಶಾಸ್ತ್ರವಾದರೂ ಷೇಕ್ಸ್‌ಪಿಯರನ ನಾಟಕ ಪಾಠಮಾಡಿ ವಿದ್ಯಾರ್ಥಿಗಳ ಮನಸ್ಸನ್ನು ಸೆಳೆದುಬಿಟ್ಟಿದ್ದರು. ಪಾಠ ಮುಗಿಸಿ ಹೋಗುವಾಗ ''ಈ ರೀತಿ ಕಿವಿಗೊಟ್ಟು ಕೇಳಿದರೆ ಏಕೆ ಅರ್ಥವಾಗುವುದಿಲ್ಲ, ಚೆನ್ನಾಗಿ ಅಭ್ಯಾಸಮಾಡಿಕೊಳ್ಳಿ'' ಎಂದು ಹೇಳಿ ಹೊರಟಾಗ, ''ಎಲ್ಲರೂ ನಿಮ್ಮಂತೆಯೇ ಪಾಠ ಮಾಡಬೇಕಲ್ಲ ಸಾರ್ !'' ಎಂದನಂತೆ ವಿದ್ಯಾರ್ಥಿಯೊಬ್ಬ.



ಹೀಗೆ ಕಿವಿಗೊಟ್ಟು ಕೇಳುವಂತೆ ಪಾಠ ಮಾಡುವುದಿದೆಯಲ್ಲ, ಇದು ಅಧ್ಯಾಪನೆಯ ನಿರಂತರ ಶ್ರದ್ಧೆ, ಧ್ಯಾನ, ತಪಸ್ಸುಗಳ ಫಲಶ್ರುತಿ. ಬೋಧನೆಯ ವಿಷಯವೇ ಆಗಿರಲಿ, ಮತ್ತೊಂದಾಗಿರಲಿ, ಯಾರಾದರೂ ಹೇಳುವಾಗ ಕಿವಿಗೊಟ್ಟು ಕೇಳುವುದನ್ನು ಅಭ್ಯಾಸದಿಂದ ಸಾಧಿಸಬೇಕು. ಅದಕ್ಕೇ ಕವಿ ಪಂಜೆ ಮಂಗೇಶರಾಯರು ಹೇಳಿರುವುದು :

*ಕೊಡಬೇಕಯ್ಯ ಕಿವಿಯನು ಸರ್ವರ ನುಡಿಗೆ*
*ನುಡಿಯಬಾರದು ನೀವಡಿಗಡಿಗೆ !*

ಇನ್ನೊಬ್ಬರು ಮಾತನಾಡುತ್ತಿದ್ದಾಗ ಸರಿಯಾಗಿ ಕಿವಿಗೊಡದೆ, ಮಧ್ಯೆ ಮಧ್ಯೆ ಬಾಯಿ ಹಾಕುವುದರಿಂದ ಅವರು ಹೇಳುವುದು ಕೇಳುಗನಿಗೂ ತಿಳಿಯುವುದಿಲ್ಲ, ಕೇಳುಗ ಹೇಳುವುದು ಹೇಳುವವನಿಗೂ ಅರ್ಥವಾಗದಂತಾಗಿ ಅಪಾರ್ಥಕ್ಕೆ ಎಡೆಮಾಡಿಕೊಡುವ ಸಂದರ್ಭಗಳೇ ಹೆಚ್ಚು.

ಕಾಲು, ಕೈ, ಕಣ್ಣು, ಮೂಗು, ಕಿವಿ ಇವನ್ನೆಲ್ಲಾ ಎರಡೆರಡಾಗಿ ಇಟ್ಟ ಆ ಪರಮಾತ್ಮ ಕೊಟ್ಟಿರುವುದು ಒಂದೇ ನಾಲಗೆ ! ಒಂದೇ ಬಾಯಿ !! 'ಮಾತು ಆಡಿದರೆ ಹೋಯಿತು, ...' ಎಂಬ ಗಾದೆ ಮಾತಿನಂತೆ ಯಾವ ಮಾತು ಆಡಬೇಕಾದರೂ ಯೋಚಿಸಿ ಮಾತನಾಡಬೇಕು. ಮುತ್ತು ಹೆಕ್ಕಬಹುದೇ ವಿನಾ ಆಡಿದ ಮಾತು ಒಮ್ಮೆ ಹೊರಬಿದ್ದ ಕೂಡಲೆ ಮಾತು ಹೆಕ್ಕಲಾಗದಿದ್ದುದರಿಂದ ವಿವೇಚನಾ ಯುಕ್ತವಾಗಿ ಮಾತನಾಡಲಿ ಎಂದು ಒಂದೇ ಬಾಯಿ ಕೊಟ್ಟಿರುವುದು.

*ಕರ್ಣಗಳೆರಡು ಬಾಯಿ ತಾನೊಂದು*
*ಏನಿದರರ್ಥ*
*ಇಮ್ಮಡಿ ಕೇಳ್ವೆ ಒಮ್ಮಡಿ ಆಡ್ವೆ*
*ಎಂಬುದೆ ಇದರರ್ಥ !*

ಎಂದಾಗ ಕಿವಿಗಳೆರಡನ್ನೂ ತೆರೆದಿಟ್ಟುಕೊಂಡು ಕಿವಿಗೊಟ್ಟು ಕೇಳು ಎಂದಂತಾಯಿತು.

ಹೀಗೆ ಎರಡು ಕಿವಿಗಳನ್ನೂ ತೆರೆದಿಟ್ಟುಕೊಂಡು ಕೇಳುವವರು ಸಿಗುತ್ತಾರೆಂದರೆ ಕವಿಗೆ ಖುಷಿಯೋ ಖುಷಿ. ಬೇಂದ್ರೆಯವರು ಹೇಳಿದಂತೆ ''ನಾನು ಕವಿ ಅವನು ಕಿವಿ !'' ಕವಿ ಬರೆದುದನ್ನು ಸಹೃದಯತೆಯಿಂದ ಕೇಳಿಸಿ ಕೊಳ್ಳುವ ಕಿವಿಗಳೇ ಇರದಿದ್ದರೆ ಕವಿಗಳು ಬರೆದೇನು ಪ್ರಯೋಜನ ? ಆದರೆ ಎಷ್ಟೋ ಬಾರಿ ಕವಿಗೋಷ್ಠಿಯಲ್ಲಿ ಕವಿ ಕವನ ವಾಚಿಸುತ್ತಲೇ ಇರುತ್ತಾನೆ. ಆದರೆ ಕೇಳುಗನಿಗೆ ಆಪ್ಯಾಯಮಾನವಾಗದಿದ್ದರೆ ಕಿವಿಗೊಡುವುದು ಹೇಗೆ ? 'ಕೋಣನ ಮುಂದೆ ಕಿನ್ನರಿ ಬಾರಿಸಿದಂತೆ' ಎಂಬಂತಾಗಿ ಬಿಡುತ್ತದೆ. ಆದರೆ ಇದರಲ್ಲೂ ಒಂದು ರೀತಿಯ ಅನುಕೂಲವೇ ಉಂಟು. ಜೀವನದ ತೇರನ್ನು ಎಳೆದೂ

ಎಳೆದೂ ಹೈರಾಣಾಗಿರುವ ಹುಲುಮಾನವನಿಗೆ ಕುಳಿತ ಹಾಗೆ ನಿದ್ರೆ ಬರಿಸುವ ಸಮ್ಮೋಹಕ ಶಕ್ತಿ ಕವನಕ್ಕೆ ಇದೆಯಾದರೆ ಇಂತಹ ಮಹಾನ್ ಶಕ್ತಿಯ ಕವನ ರಚಯಿತ ಕವಿಗೆ ಸಾಷ್ಟಾಂಗ ಮಾಡಬೇಕಾದ್ದೆ!

ಸಾಮಾನ್ಯವಾಗಿ ಮನುಷ್ಯನಾದವನು ತೆಗಳಿಕೆಗೆ ಕಿವಿ ತೆರೆದು, ಹೊಗಳಿಕೆಗೆ ಕಿವಿ ಮುಚ್ಚಿಬಿಡಬೇಕು. ಈ ಹೊಗಳಿಕೆ ಎನ್ನುವುದು ಹೊನ್ನಶೂಲವೇ! ಹಾಗಿದ್ದರೂ ಹೊಗಳಿಕೆ ಎಂದರೆ ಕಿವಿತೆರೆದು ಕೂಡುವ ಮಂದಿಯೇ ಬಹಳ. ಆದರೆ ಕೆಲವು ಕವಿಗಳಿಗೆ ಹೊಗಳಿಕೆ, ತೆಗಳಿಕೆ ಎರಡೂ ಒಂದೇ. ಕವಯಿತ್ರಿ ಬೆಳಗೆರೆ ಜಾನಕಮ್ಮನವರು ಹೇಳಿರುವಂತೆ :

*ಹೊಗಳುವುದು ಬೇಡೆನಗೆ ತೆಗಳುವುದು ಬೇಡೆನಗೆ*
*ನನ್ನೊಳಗೆ ಬಂದರದೇ ಸಾಕು !*

ಹೀಗೊಬ್ಬ ವೈದ್ಯರ ಬಳಿ ಬಂದು ಒಬ್ಬ ಸರದಿಯಲ್ಲಿ ಕಾದುಕುಳಿತ. ಇವನ ಸರದಿ ಬಂದಾಗ ವೈದ್ಯರು ಒಳಗೆ ಕರೆದು ''ಹೇಳಿ, ಏನು ಸಮಸ್ಯೆ ?'' ಎಂದರು. ಈತ ''ನನ್ಮಾತನ್ನು ಯಾರೂ ಕಿವಿಗೆ ಹಾಕೊತಾ ಇಲ್ಲ ಡಾಕ್ಟ್ರೆ...'' ಎಂದಾಗ ನಖಶಿಖಾಂತ ಆತನನ್ನೇ ದಿಟ್ಟಿಸಿದ ವೈದ್ಯರು 'ನೆಕ್ಸ್ಟ್' ಎಂದರಂತೆ.

ಒಳ್ಳೆಯ ವಿಚಾರಗಳು ಯಾವ ಮೂಲೆಯಿಂದ ಬಂದರೂ ಸರಿಯೇ, 'ಕಿವಿಯನ್ನು ತೆರೆದಿಡುವುದರ ಜೊತೆಗೆ ಹೃದಯವನ್ನೂ ತೆರೆದಿಟ್ಟು ತುಂಬುತೋಳಿನಿಂದ ಆಹ್ವಾನಿಸಬೇಕು.' ಆದರೆ ಸ್ವತಂತ್ರವಾಗಿ ಆಲೋಚಿಸ ಲಾರದ ಮನುಷ್ಯ ಸ್ವಂತ ನಿರ್ಧಾರಗಳನ್ನು ತೆಗೆದುಕೊಳ್ಳ ಲಾರದವನಾಗಿ ಪ್ರತಿಯೊಬ್ಬರ ಹೇಳಿಕೆಗಳಿಗೂ ಕಿವಿ ಕೊಟ್ಟು, ಯಾವ ಸಂದರ್ಭಕ್ಕೆ ಹೇಗೆ ವರ್ತಿಸುತ್ತಾನೆ ಎಂಬುದನ್ನು ಊಹಿಸುವುದು ಕಷ್ಟವೇ! ಕೇಳುಗನೊಬ್ಬ ಇದ್ದಾನೆಂದರೆ ಕಿವಿಕಚ್ಚುವ ಮಂದಿ ಕಡಿಮೆ ಇರುತ್ತಾರೆಯೇ? ಬಂದದ್ದಕ್ಕೆಲ್ಲ ಕಿವಿತೆರೆದು ಕುಳಿತರೆ ಹಿತ್ತಾಳೆ ಕಿವಿಯಾಗಿಬಿಡುವ ಸಂಭವವೇ ಹೆಚ್ಚು.

ಆದರೆ ಕೆಲವು ಬಾರಿ ಜಾಣಕಿವುಡು ಪ್ರದರ್ಶಿಸುವ ವರಿಗೇನೂ ಕಡಿಮೆಯಿಲ್ಲ. ಸಾಲ ಕೊಟ್ಟಿದ್ದೀರಿ ಎನ್ನಿ. ಒಂದೆರಡು ಬಾರಿ ಸಾರ್ವಜನಿಕವಾಗಿ ಇತರರೆದುರು ಕೇಳಿಬಿಟ್ಟರೆ ಪಾಪ, ಮಾನ ಹೋದೀತೆಂದು ಅಂಜಿದ ನೀವು ಒಬ್ಬನೇ ಇದ್ದಾಗ, ಆತನ ಬಳಿಯೇ ಸಾಲ ಕೇಳುವಂತೆ ಮೆಲುದನಿಯಲ್ಲಿ ಕೇಳಿದಿರೆನ್ನಿ. ಆತ ಕಿವಿಗೇ ಹಾಕಿಕೊಳ್ಳುವುದಿಲ್ಲ. ನೀವು ನಿಮ್ಮ ಮರ್ಯಾದೆಯನ್ನು ಬದಿಗೊತ್ತಿ ರಾಜಾರೋಷವಾಗಿ ಮಂತ್ರಘೋಷಣೆ ಮಾಡಿದರೇನೇ ಆತ ನಿಮ್ಮ ಮಾತಿಗೆ ಬಗ್ಗುವುದು. ಇನ್ನೂ ಕೆಲವರಿದ್ದಾರೆ, ಬಹುಜಾಣ ಬಾಸ್‌ಗಳು. ನಿಮ್ಮಿಂದ ಕೆಲಸವಾಗಬೇಕಾದರೆ ಟಾರ್ಗೆಟ್ ಮುಟ್ಟಿ ಮೇಲಿನವರಿಂದ ತಾನು ಶಹಭಾಷ್‌ಗಿರಿ ಸರ್ಟಿಫಿಕೇಟ್ ಪಡೆಯಬೇಕಾದರೆ ಇನ್ನಿಲ್ಲದ ಕಸರತ್ತು ಮಾಡಿ, ನಿಮ್ಮನ್ನು ಚಂದ್ರಲೋಕಕ್ಕೆ ಕೊಂಡೊಯ್ದು, ರಂಭೆ ಊರ್ವಶಿಯರನ್ನು ತೋರಿಸಿ ತಮ್ಮ ಕೆಲಸವಾದ ನಂತರ ಅಷ್ಟಕ್ಕಷ್ಟೆ! ಇಷ್ಟೆಲ್ಲಾ ನೀವು ಸಹಾಯಮಾಡಿ, ಸಹಕಾರಕೊಟ್ಟಾಗ, ''ಬಾಸ್‌ಗೆ ನನ್ನ ಕಂಡ್ರೆ ಭಾಳಾ...'' ಎಂದು ತಿಳಿದುಕೊಂಡು ''ಏನ್ಸಾರ್ ನನ್ನ ಪ್ರಮೋಷನ್ ವಿಷಯ ಏನಾಯ್ತು ಸಾರ್ ?'' ಎಂದು ಕೇಳಿದಿರೆನ್ನಿ ''ಅದೂ... ನೋಡಿ... ಇವ್ರೇ... ಈ ಸಲ... ಫೈನಾನ್ಸಿಯಲ್ ಬಜೆಟ್‌ನಲ್ಲಿ ಪ್ರಮೋಷನ್ಸ್‌ಗೆ




ಅಲೋಕೇಷನ್ ಆಗೋದು ಕಷ್ಟಾಂತ ಮೊನ್ನೆ ಎಂ.ಡಿ. ಮೀಟಿಂಗ್‌ನಲ್ಲಿ ಹಿಂಟ್ ಕೊಡ್ತಾಯಿದ್ರು. ಆದ್ರೆ ನಾನ್ ಬಿಡ್ತೀನಾ... ಪ್ರೆಷರ್ ಹಾಕಿ ಬಂದಿದ್ದೇನಪ್ಪಾ...'' ಇದೇ ಉತ್ತರ ನಿಮಗೂ ಕೇಳಿ ಕೇಳಿ ಬೇಸರವಾಗಿ ನೀವೇ ಕೇಳೋದನ್ನ ನಿಲ್ಲಿಸಬೇಕಷ್ಟೆ. ಬಾಸ್‌ನ ಕಿವಿ ಇಂಥಾದ್ದಕ್ಕೆಲ್ಲ ಒಗ್ಗಿಹೋಗಿರುತ್ತೆ ಅಲ್ವೇ!

ನನ್ನೊಬ್ಬ ಸಹೋದ್ಯೋಗಿ ಬಹಳ ಪ್ರಾಮಾಣಿಕ ಕೆಲಸಗಾರ. ಯಾವ ಗುನ್ನೆಯೂ ಅವನ ಗೌಪ್ಯ ಮಾಹಿತಿ ಯಲ್ಲಿ ನಮೂದಾಗಿರಲಿಲ್ಲ. ನಿವೃತ್ತಿಯ ಸಮಯವೂ ಬಂತು. ಮಗನ ಓದು, ಮಗಳ ಮದುವೆ ಯಾವುದೂ ನೆರವೇರದೆ ಜವಾಬ್ದಾರಿಗಳಲ್ಲಿ ಸಿಲುಕಿಕೊಂಡಿದ್ದರಿಂದ, ನಿವೃತ್ತನಾಗುವುದಕ್ಕೆ ಮುಂಚೆಯೇ ಬಾಸ್ ಬಳಿ ಹೋಗಿ ಸೇವಾವಧಿ ವಿಸ್ತರಿಸಲು ವಿನಂತಿಸಿದ. ''ಅರೆ, ಏನ್ ಹೀಗೆ ಹೇಳ್ತೀರಾ ? ನಾನಾಗಲೇ ಎಂ.ಡಿ. ಬಳಿ ಮಾತಾಡಿದ್ದೇನೆ. ನಿಮಗೋಸ್ಕರ ಫೈಟ್ ಮಾಡ್ಬೇಕಾಗಿ ಬಂತು. ಆಗುತ್ತೆ ಬಿಡಿ, ಯೋಚಿಸಬೇಡಿ'' ಎಂದು ಹೇಳಿದ ತಕ್ಷಣ ಈತ ಸೇವಾವಧಿ ವಿಸ್ತರಣೆ ಸಿಗುತ್ತದೆಂದು ಎಲ್ಲರೊಡನೆಯೂ ಹೇಳಿಕೊಂಡು ಸಿಹಿ ಹಂಚಿದ. ವಿದಾಯ ಸಮಾರಂಭ ಏರ್ಪಡಿಸುವುದೋ ಬೇಡವೋ ಎಂಬ ಜಿಜ್ಞಾಸೆಗೆ ಬಿದ್ದು ತಿಂಗಳ ಕಡೇ ದಿನದವರೆಗೂ ತಳ್ಳಿಕೊಂಡುಹೋಯಿತು. ಕಡೆಗೆ ವಿಸ್ತರಣೆಯೂ ಸಿಗದೆ, ಅದ್ದೂರಿಯಾಗಿ ನಡೆಯಬೇಕಿದ್ದ ಸಮಾರಂಭ ತೀರಾ ಸರಳವಾಗಿ ನಡೆದು ಇದರಿಂದಲೂ ವಂಚಿತನಾಗಿ ತೆರಳಬೇಕಾಯ್ತು.

ಅವನು ನಿವೃತ್ತಿಯಾಗಿ ಹೊರಟುಹೋದ ನಂತರ ಪಿ.ಎ. ಕೇಳಿದ, ''ಏನ್ಸಾರ್, ಬಹಳ ಕಿವಿಕಚ್ತಾಯಿದ್ದ. ಅವನ ವಿಸ್ತರಣೆ ಸಿಗಲೇ ಇಲ್ಲ ಪಾಪ'' ಎಂದಾಗ, ''ರೀ ಹೀಗೆ ಕಿವಿಕಚ್ಚೋವ್ರಿಗೆಲ್ಲಾ ವಿಸ್ತರಣೆ ಕೊಡ್ತಾಹೋದ್ರೆ ಕಂಪನಿ ಮುಚ್ಬೇಕಷ್ಟೆ'' ಎಂದರಂತೆ ಬಾಸ್. ಹೇಗಿದೆ ಬಾಸ್‌ನ ಧೋರಣೆ ? ಕೈಕೆಳಗಿನ ಕೆಲಸಗಾರರ ಮಾತಿಗೆ ಕಿವಿ ತೆರೆದಿಟ್ಟರೇ ವಿನಾ ಹೃದಯ ತೆರೆದಿಡಲೇ ಇಲ್ಲ.

ತಿರುಕ್ಕೋಟಿಯಾರ್ ಎಂಬ ಗ್ರಾಮದಲ್ಲಿ ಯಮುನಾ ಚಾರ್ಯರ ಶಿಷ್ಯರಾಗಿದ್ದ ಗೋಷ್ಠಿಪೂರ್ಣರೆಂಬ ಶಾಸ್ತ್ರಜ್ಞರ ಬಳಿ ಬಂದ ರಾಮಾನುಜಾಚಾರ್ಯರನ್ನು ಇಂದು ಬಾ, ನಾಳೆ ಬಾ ಎಂದು ಪರೀಕ್ಷಿಸುತ್ತಿದ್ದಾಗ ವರದರಾಜ ಸ್ವಾಮಿಯೇ, ''ಪರೀಕ್ಷಿಸಿದ್ದು ಸಾಕು, ಉಪದೇಶಕೊಡು'' ಎಂದು ಕನಸಿನಲ್ಲಿ ಬಂದು ಹೇಳಿದಾಗ, ಕಡೆಗೆ ಶಿಷ್ಯರಾದ ರಾಮಾನುಜಾಚಾರ್ಯರಿಂದ ಗೋಪ್ಯರಕ್ಷಣೆಯ ಭಾಷೆ ತೆಗೆದುಕೊಂಡು ಅಷ್ಟಾಕ್ಷರ ಮಂತ್ರವನ್ನು ಉಪದೇಶಿಸಿದರು. ರಾಮಾನುಜಾಚಾರ್ಯರು ಹಿರಿಹಿರಿ ಹಿಗ್ಗಿದರು. ಶ್ರೀರಂಗ ತಲುಪಿದರು. ಕೆಲ ಸಮಯದ ನಂತರ ಪುನಃ ತಿರುಕ್ಕೋಟಿಯಾರಿಂದ ಬ್ರಹ್ಮರಥೋತ್ಸವಕ್ಕೆ ಆಹ್ವಾನ ಬಂದಾಗ ಇವರ ಯೋಚನೆ ಗರಿಗೆದರಿತು. ಅಜ್ಞಾನದಿಂದ ತೊಳಲಾಡುವವರಿಗೆ, ಪಾಪಿಗಳಿಗೆ, ಕಷ್ಟದಲ್ಲಿರುವವರಿಗೆ ಉಪಯೋಗವಾಗುವುದಾದರೆ ಅಷ್ಟಾಕ್ಷರ ಮಂತ್ರದ ಗೋಪ್ಯತೆಯಾದರೂ ಏಕೆ ಎಂದು ಶ್ರೀ ಪೆರಂಬುದೂರಿನ ದೇಗುಲದ ಗೋಪುರವನ್ನು ಹತ್ತಿ ನಿಂತುಬಿಟ್ಟರು. ''ಸಮಾಜದಿಂದ ಬಹಿಷ್ಕೃತರಾದವರೇ, ದೀನದಲಿತರೇ, ಪಾಪ ಮಾಡಿದವರೇ... ಬನ್ನಿ. ಕಿವಿಗೊಟ್ಟು ಕೇಳಿ, ನೀವಿಂದು ಪುಣ್ಯರಾಗುವ ದಿನ; 'ಓಂ ನಮೋ ನಾರಾಯಣಾಯ' ಎಂಬ ಅಷ್ಟಾಕ್ಷರಿ ಮಂತ್ರವನ್ನು ಜಪಿಸಿರಿ. ಈ ಮಂತ್ರದಿಂದ ಸಕಲವೂ ಸಿದ್ಧಿಸುವುದು'' ಎಂದಾಗ ದಶ ದಿಕ್ಕುಗಳಿಂದ ಜನರು ರಾಮಾನುಜಾ ಚಾರ್ಯರಿಗೆ ಜಯಕಾರ ಹಾಕಿದರು. ಆದರೆ ಇದನ್ನು ತಿಳಿದ ಗೋಷ್ಠಿಪೂರ್ಣರು ರಾಮಾನುಜಾಚಾರ್ಯರನ್ನು ''ವಚನ ಭ್ರಷ್ಟ, ಗುರುದ್ರೋಹಿ, ನಿನಗೆ ನರಕ ಪ್ರಾಪ್ತಿಯಾಗಲಿ'' ಎಂದು ಬೈದರು. ಆಗ ರಾಮಾನುಜಾಚಾರ್ಯರು ''ಇಷ್ಟೊಂದು ಜನರಿಗೆ ಮೋಕ್ಷ ದೊರಕುವುದಾದರೆ ನನ್ನೊಬ್ಬನಿಗೆ ನರಕ ಪ್ರಾಪ್ತಿಯಾದರೂ ಚಿಂತೆಯಿಲ್ಲ'' ಎಂದಾಗ ಗುರುಗಳು ಶಿಷ್ಯನ ವಿಶಾಲ ಮನೋಭಾವಕ್ಕೆ ಬೆರಗಾಗಿ ಬಾಚಿ ತಬ್ಬಿ ಕೊಂಡರು. ಹೀಗೆ ರಾಮಾನುಜಾಚಾರ್ಯರು ಬೋಧಿಸಿದ ಅಷ್ಟಾಕ್ಷರ ಮಂತ್ರವನ್ನು ಕಿವಿಗೊಟ್ಟು ಕೇಳಿ ಅದೆಷ್ಟು ಜನ ಪುಣ್ಯ ಸಂಪಾದಿಸಿಕೊಳ್ಳಲಿಲ್ಲ!

ಪಾಂಡವರಿಗೆ ಸೋತ ದುರ್ಯೋಧನನು ವೈಶಂಪಾಯನ ಸರೋವರದಲ್ಲಿ ಜಲಸ್ತಂಭನ ವಿದ್ಯೆಯಿಂದ ಅಡಗಿ ಕೊಂಡಿರುವ ವಿಷಯವನ್ನು ವ್ಯಾಧನಿಂದ ತಿಳಿದುಕೊಂಡ ಪಾಂಡವರು ಕೃಷ್ಣನೊಡನೆ ಸರೋವರ ತಲುಪಿದರು. ಆಗ ಯುಧಿಷ್ಠಿರನನ್ನೊಳಗೊಂಡು ಯಾರು ಕರೆದರೂ ಹೊರಗೆ ಬಾರದ ದುರ್ಯೋಧನ ಭೀಮನು ಜರೆದಾಗ 'ಕಿವಿಗೊಟ್ಟು' ಕೇಳಿದ, ಕೆರಳಿದ. ನೀರನ್ನು ಸೀಳಿಕೊಂಡು ಹೊರಬಂದು ಗದೆಯನ್ನು ಹಿಡಿದು, ಯುದ್ಧಮಾಡಲೊಪ್ಪಿದ. ಭೀಮನ ನಿಂದಾವಾಕ್ಯಗಳಿಗೆ ದುರ್ಯೋಧನನು ಹೀಗೆ ಕಿವಿಗೊಟ್ಟಿದ್ದ ರಿಂದಲೇ ಹೋರಾಡಲು ಹೊರಬರಬೇಕಾಯಿತು, ಮುಂದಿನ ಅನರ್ಥಗಳನ್ನು ಅನುಭವಿಸಬೇಕಾಯ್ತು!

ಹೆಂಡತಿಯ ನಿಂದನೆಯ ಚುಚ್ಚುಮಾತುಗಳನ್ನು ಗಂಡನಾದವನು ಎಷ್ಟುಕಾಲ ಸೈರಿಸಲಾದೀತು! ಕಿವಿ ಗೊಟ್ಟರೆ ಪೀಕಲಾಟ, ಕಿವಿಗೊಡದಿದ್ದರೆ ಮಾನಹಾನಿ! ಕಡೆಗೆ 'ಎನ್ನ ಕಿವುಡನ ಮಾಡಯ್ಯ ತಂದೆ' ಎಂದು ಆ ದೇವರಿಗೆ ಮೊರೆಹೋದ ಗಂಡ! ಅದೇ ಭಕ್ತರ ಮೊರೆಗೆ ಕಿವಿಗೊಡಬೇಕಾದ ಆ ದೇವರು ಕಿವಿಮುಚ್ಚಿ ಕುಳಿತರೆ...?

**ವೈ. ಎನ್. ಗುಂಡೂರಾವ್**
'ಸೌರಭ', ೧೨೩೧, ೧೩ನೇ ಅಡ್ಡರಸ್ತೆ ೨ನೇ ಹಂತ, ಗಿರಿನಗರ
ಬೆಂಗಳೂರು - ೫೬೦ ೦೮೫

# ಲೋಕಾಯತ ದರ್ಶನ

**ಎಸ್. ಎಸ್. ಹಿರೇಮಠ**

ಪ್ರಾಚೀನ ಭಾರತದಲ್ಲಿ ತುಂಬ ಪ್ರಖ್ಯಾತವಾಗಿದ್ದ ತತ್ವಶಾಸ್ತ್ರಗಳಲ್ಲಿ ಲೋಕಾಯತಕ್ಕೆ ವಿಶಿಷ್ಟವಾದ ಸ್ಥಾನವಿತ್ತು.
ಈ ತತ್ವದ ಗ್ರಂಥಗಳಿದ್ದವು ಎಂದು ತಿಳಿದು ಬರುವುದಾದರೂ ಒಂದೂ ಸಿಕ್ಕಿಲ್ಲ.
(ವಿವರಗಳಿಗೆ ದೇವೀಪ್ರಸಾದ ಚಟ್ಟೋಪಾಧ್ಯಾಯರ 'ಲೋಕಾಯತ' ನೋಡಿ.)

ವಿಜಯನಗರ ಸಾಮ್ರಾಜ್ಯದಲ್ಲಿ ೧೪ನೇ ಶತಮಾನದಲ್ಲಿದ್ದ ಮಂತ್ರಿ ಸಾಯಣನ ಮಗ ಮಾಧವ 'ಸರ್ವದರ್ಶನ ಸಂಗ್ರಹ' ಎಂಬ ಗ್ರಂಥ ರಚಿಸಿದ. (ಮಾಧವ ಸಾಯಣನ ಸೋದರ ಎಂಬ ಅಭಿಪ್ರಾಯವೂ ಇದೆ.) ಇದು ೧೬ ತತ್ವಜ್ಞಾನಗಳ ಸಾರ ಸಂಗ್ರಹ. ವಿಶೇಷವೆಂದರೆ ಮೊದಲನೆಯ ಅಧ್ಯಾಯವೇ 'ಚಾರ್ವಾಕ ದರ್ಶನ'. ಕೊನೆಯ ೧೬ನೇ ಅಧ್ಯಾಯ ಮಾಧವನ ಸ್ವಂತ ಮತವಾದ 'ಶಾಂಕರ (ಅದ್ವೈತ) ದರ್ಶನ'. ಚಾರ್ವಾಕ, ಬೌದ್ಧ, ಅರ್ಹಂತ (ಜೈನ), ರಾಮಾನುಜ, ಪೂರ್ಣಪ್ರಜ್ಞ(ಮಾಧ್ವ), ನಕುಲೀಶ ಪಾಶುಪತ, ಶೈವ, ಪ್ರತ್ಯಭಿಜ್ಞಾ, ರಸೇಶ್ವರ, ಔಲೂಕ್ಯ (ಕಣಾದನ ವೈಶೇಷಿಕ), ಅಕ್ಷಪಾದ (ಗೌತಮನ ನ್ಯಾಯ), ಜೈಮಿನಿ (ಪೂರ್ವ ಮೀಮಾಂಸೆ), ಪಾಣಿನಿ, ಸಾಂಖ್ಯ, ಪಾತಂಜಲ (ಯೋಗ) ಈ ೧೫ ದರ್ಶನಗಳ ತತ್ವಗಳನ್ನು ವಿವರಿಸಿ ಕೊನೆಗೆ 'ಶಾಂಕರ ದರ್ಶನ'ವೇ ಸರ್ವ ಸಮರ್ಪಕವೆಂದು ಸಾಧಿಸುವುದು ಮಾಧವನ ಉದ್ದೇಶ.

ಅವನ ಕಾಲದ ಅಥವಾ ಅವನಿಗಿಂತ ಹಿಂದಿನ ಕರ್ನಾಟಕದಲ್ಲಿ ಇನ್ನೂ ಬೇರೆ ದರ್ಶನಗಳಿದ್ದವು. ಬರೀ ಹದಿನಾರೇ ಅಲ್ಲ. ಕಾಳಾಮುಖ, ವೀರಶೈವ, ಪಾಶುಪತ, ಶಾಕ್ತ, ನಾಥ ಮೊದಲಾದವು. ಇವುಗಳ ಕುರಿತು ಮಾಧವ ಏನನ್ನೂ ಏಕೆ ಹೇಳಲಿಲ್ಲ? ಲೋಕಾಯತ ಅಥವಾ ಚಾರ್ವಾಕ ದರ್ಶನದ ತತ್ವಗಳನ್ನು ಸಂಗ್ರಹಿಸುವಲ್ಲಿ ಅವನು ಪ್ರಾಮಾಣಿಕನಾಗಿದ್ದನೇ ? ಎಂಬ ಪ್ರಶ್ನೆ ಎತ್ತಲಾಗಿದೆ. ವೇದಾಂತಿಯ ದೃಷ್ಟಿಕೋನದಿಂದ ನೋಡಿರುವುದರಿಂದ ಪೂರ್ವಗ್ರಹಪೀಡಿತನಾಗಿದ್ದಾನೆ ಎಂಬ ವಾದವೂ ಇದೆ. ಈ ಮಾತನ್ನು ಎಲ್ಲ ೧೫ ದರ್ಶನಗಳಿಗೂ ಅನ್ವಯಿಸುವ ಸಾಧ್ಯತೆ ಇದೆಯಲ್ಲವೇ ? ಏಕೆಂದರೆ ಇವಾವುವೂ ಅವನ ಸ್ವಂತ ದರ್ಶನಗಳಾಗಿರಲಿಲ್ಲ. ಮಾಧವ ಮೇಲ್ವರ್ಣ (ಬ್ರಾಹ್ಮಣ) ಮತ್ತು ಮೇಲ್ವರ್ಗ (ಮಂತ್ರಿ)ದವನಾಗಿ ಜನಸಾಮಾನ್ಯರ (ಶೋಷಿತರ) ಸಿದ್ಧಾಂತವನ್ನು ಹೇಗೆ ಗ್ರಹಿಸಿದ್ದ? ಅಗ್ರಹಾರಗಳ ಬ್ರಾಹ್ಮಣರಲ್ಲಿ 'ಲೋಕಾಯತ'ವೂ ಅಧ್ಯಯನದ ಒಂದು ವಿಷಯವಾಗಿದ್ದುದು ನಮ್ಮ ನಾಡಿನ ಹಲವು ಶಾಸನಗಳಿಂದ ತಿಳಿದುಬರುವ ಸಂಗತಿ. ಅಂದರೆ 'ಲೋಕಾಯತ' ಶಿಷ್ಟರು ನಿರ್ಲಕ್ಷಿಸಲಾರದಷ್ಟು ಪ್ರಾಮುಖ್ಯತೆಯನ್ನು ಪಡೆದಿತ್ತು ಎಂದಾಯಿತು. ಅಂತೆಯೇ ಮಾಧವ ಸರ್ವದರ್ಶನ ಸಂಗ್ರಹ ಮಾಡುವಾಗ ಪ್ರಥಮ ಸ್ಥಾನವನ್ನು 'ಲೋಕಾಯತ'ಕ್ಕೆ ಕೊಟ್ಟಿರಬೇಕು. ಕರ್ನಾಟಕ ಬಹಳಷ್ಟು ದರ್ಶನಗಳ ಆಡುಂಬೊಲವಾಗಿದ್ದುದನ್ನು ನೋಡಿದರೆ, ಲೋಕಾಯತದಂಥ ಪಕ್ಕಾ ನಾಸ್ತಿಕವಾದವೂ ಇಲ್ಲಿ ಜೀವಂತವಿದ್ದರೆ ಆಶ್ಚರ್ಯವಿಲ್ಲ.

ಅವೈದಿಕ ಮತ್ತು ನಾಸ್ತಿಕವೆನಿಸಿದ್ದ ಜೈನ ಬೌದ್ಧ ತತ್ವಗಳಲ್ಲದೇ ಹಲವು ಶೈವ ಪ್ರಭೇದಗಳು ಇಲ್ಲಿ ಅಸ್ತಿತ್ವದಲ್ಲಿದ್ದವು. ವೈದಿಕರಲ್ಲಿ ಪ್ರಖ್ಯಾತವಾದ ಶಾಂಕರ, ರಾಮಾನುಜ, ಮಾಧ್ವ ಮತಗಳಿಗೂ ಪ್ರಭುತ್ವಗಳಿಂದ ತುಂಬ ಮನ್ನಣೆ ದೊರಕಿತ್ತು.

ಮಾಧವನ ಪ್ರಥಮ ಅಧ್ಯಾಯದ ಮಹತ್ವವೇನೆಂದರೆ, ದೇವೀಪ್ರಸಾದ ಚಟ್ಟೋಪಾಧ್ಯಾಯರು ಹೇಳುವಂತೆ, ('ಲೋಕಾಯತ' ಪುಟ : ೪) ಆಧುನಿಕ ವಿದ್ವಾಂಸರೆಲ್ಲರೂ ಮಾಧವನು ಕೊಟ್ಟಿರುವ ವಿಷಯಗಳನ್ನೇ ಆಧಾರವಾಗಿಟ್ಟುಕೊಂಡು 'ಲೋಕಾಯತ ತತ್ವಜ್ಞಾನ'ದ ಸ್ವರೂಪವನ್ನು ನಿರೂಪಿಸುತ್ತ ಬಂದಿರುವುದು.

ಸರಿ, ಮಾಧವ ಚಾರ್ವಾಕ ಸಿದ್ಧಾಂತವೆಂದು ಹೇಳಿರುವುದಾದರೂ ಏನನ್ನು? ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯ ೧೯೭೬ರಲ್ಲಿ ಪ್ರಕಟ ಮಾಡಿರುವ ವಿದ್ವಾನ್ ಇಮ್ಮಡಿ ಶಿವಬಸವ ಸ್ವಾಮಿಗಳು ಅನುವಾದಿಸಿರುವ 'ಸರ್ವ ದರ್ಶನ ಸಂಗ್ರಹ'ದಲ್ಲಿ ಸಂಸ್ಕೃತ ಮೂಲ ಮತ್ತು ಕನ್ನಡ ಅನುವಾದ, ಅಡಿಟಿಪ್ಪಣಿ ಎಲ್ಲ ಸೇರಿ 'ಚಾರ್ವಾಕ ದರ್ಶನ' ಬರೀ ೨೦ ಪುಟಗಳಲ್ಲಿದೆ. ಇದರಲ್ಲಿ ಬಹುಭಾಗ 'ಪ್ರಮಾಣ'ಗಳ ಚರ್ಚೆ. ಇಲ್ಲಿರುವ ಉಪಶೀರ್ಷಿಕೆಗಳನ್ನೇ ನೋಡಿ –

(೧) ಭೋಗವೇ ಜೀವನದ ಮುಖ್ಯ ಗುರಿ (೨) ದೇಹನಾಶವೇ ಮೋಕ್ಷ (೩) ಸಂಗ್ರಹವಾಗಿ ಮತ ಸ್ವರೂಪ (೪) ಅನುಮಾನವು ಪ್ರಮಾಣವಲ್ಲ (೫) ಪ್ರತ್ಯಕ್ಷದ ಮೂಲಕ ವ್ಯಾಪ್ತಿಜ್ಞಾನ ಸಾಧ್ಯವಿಲ್ಲ ೬) ಅನುಮಾನ ಹಾಗೂ ಶಬ್ದಪ್ರಮಾಣದಿಂದಲೂ ವ್ಯಾಪ್ತಿಜ್ಞಾನ ಸಾಧ್ಯವಿಲ್ಲ(೭) ಉಪಮಾನದಿಂದಲೂ ವ್ಯಾಪ್ತಿಜ್ಞಾನ ಸಾಧ್ಯವಿಲ್ಲ. (೮) ಉಪಾಧಿ ಸ್ವರೂಪ (೯) ವ್ಯಾಪ್ತಿ ಹಾಗೂ ಉಪಾಧಿ – ಇವೆರಡಕ್ಕೂ ಅನ್ಯೋನ್ಯಾಶ್ರಯ ದೋಷವಿದೆ.

ಸಾಮಾನ್ಯ ಜನರ ಭೌತವಾದಿ ತತ್ವಜ್ಞಾನವಾಗಿದ್ದ 'ಲೋಕಾಯತ'ದಲ್ಲೂ ಇತರ ದರ್ಶನಗಳಲ್ಲಿರುವಂತೆ, ತುಂಬ ಜಟಿಲವಾದ ಚರ್ಚೆ ಇರುವುದು ಆಶ್ಚರ್ಯಕರ. ಇದು ಲೋಕಾಯತ ಸಾಮಾನ್ಯರ ತತ್ವಜ್ಞಾನವಾಗಿರಲಿಲ್ಲ ಎಂಬುದಕ್ಕೆ ಸಾಕ್ಷಿ. ಅಥವಾ ಇತರ ದರ್ಶನಗಳಂತೆ ಲೋಕಾಯತವನ್ನು ಜಟಿಲಗೊಳಿಸಲಾಯಿತೇ ಎಂಬ ಅನುಮಾನ ಹುಟ್ಟುತ್ತದೆ. ಭಾರತೀಯ ತತ್ವಜ್ಞಾನ ಪರಂಪರೆಯ ಶಿಸ್ತುಬದ್ಧ ಪ್ರವೇಶವಿಲ್ಲದವರಿಗೆ ಇಲ್ಲಿಯ ಬಹುಪಾಲು ಚರ್ಚೆ ಅರ್ಥವಾಗುವುದಿಲ್ಲ. ಇಮ್ಮಡಿ ಶಿವಬಸವ ಸ್ವಾಮಿಗಳು ಸುದೀರ್ಘವಾದ ಅಡಿಟಿಪ್ಪಣಿಗಳಲ್ಲಿ ಪಾರಿಭಾಷಿಕ ಪದಗಳನ್ನು ವಿವರಿಸುತ್ತಾರಾದರೂ (ದಾರ್ಶನಿಕರಿಗೆ ಇದು ತುಂಬ ಮಹತ್ವದ್ದೇನೋ ನಿಜ) ಸಾಮಾನ್ಯ ಓದುಗರಿಗೆ ಕಬ್ಬಿಣದ ಕಡಲೆ. ಈ ಭಾಗ ಸದ್ಯಕ್ಕೆ ನಮಗೆ ಅನವಶ್ಯಕವೆಂದು ಕೈಬಿಟ್ಟು ಮಾಧವ ಗ್ರಹಿಸಿರುವ ಲೋಕಾಯತ ಸಿದ್ಧಾಂತದ ಸಾರವೇನೆಂಬುದನ್ನು ನೋಡುವಾ.

ಪರಮೇಶ್ವರ ಮುಕ್ತಿಯನ್ನು ಕೊಡುವವ ಎಂದು ನೀವು ಹೇಗೆ ಹೇಳುತ್ತೀರಿ ? (ಎಂಬ ಪ್ರಶ್ನೆಗೆ) ಬೃಹಸ್ಪತಿ ಮತದ ಅನುಯಾಯಿಯಾದ ನಾಸ್ತಿಕ ಶಿರೋಮಣಿ ಚಾರ್ವಾಕ ಇಂಥ ವಿಚಾರವನ್ನು ಬುಡಸಹಿತ ಕಿತ್ತೊಗೆದಿದ್ದಾನೆ. ಈ ಚಾರ್ವಾಕ ಮತವನ್ನು ಖಂಡಿಸುವುದೂ ಅತಿ ಕಷ್ಟ. ಸಾಮಾನ್ಯವಾಗಿ ಪ್ರಪಂಚದ ಜನರೆಲ್ಲರೂ ಬದುಕಿರುವವರೆಗೂ ಸುಖವಾಗಿ ಬಾಳಬೇಕು, ಮರಣಕ್ಕೊಳಗಾಗದ ಮನುಷ್ಯರಾರೂ ಇಲ್ಲ, ಶರೀರವು ಒಂದು ಬಾರಿ ಬೂದಿಯಾದ ಮೇಲೆ ಮತ್ತೆ ಹಿಂದಿರುಗಿ ಬರುವುದಿಲ್ಲ; ಎಂಬ ಲೋಕೋಕ್ತಿಯನ್ನೇ ಅನುಸರಿಸುತ್ತ, ನೀತಿಶಾಸ್ತ್ರ ಮತ್ತು ಕಾಮಶಾಸ್ತ್ರಕ್ಕನುಗುಣವಾಗಿ ಕೇವಲ ಅರ್ಥ ಮತ್ತು ಕಾಮ ಇವೆರಡೇ ಪುರುಷಾರ್ಥಗಳೆಂದು ಭಾವಿಸಿ ಪರಲೋಕದ ಅಸ್ತಿತ್ವವನ್ನು ನಿರಾಕರಿಸುತ್ತ ಚಾರ್ವಾಕ ಮತವನ್ನು ಆಚರಿಸುವವರಾಗಿಯೇ ಕಂಡುಬರುತ್ತಾರೆ. ಆದುದರಿಂದಲೇ ಚಾರ್ವಾಕ ಮತಕ್ಕೆ 'ಲೋಕಾಯತ' ಎಂಬ ಅನ್ವರ್ಥವಾದ ಮತ್ತೊಂದು ಹೆಸರಿದೆ.

ಚಾರ್ವಾಕ ಮತದಲ್ಲಿ ಪೃಥ್ವಿ, ಜಲ, ಬೆಂಕಿ ಮತ್ತು ವಾಯು ಈ ನಾಲ್ಕೇ ತತ್ವಗಳು. ಕಿಣ್ವ (ಹುಳಿ ಹಿಡಿಯುವ ಪದಾರ್ಥ) ಮುಂತಾದ ದ್ರವ್ಯಗಳಿಂದ ಮಾದಕ ಶಕ್ತಿ ಉತ್ಪನ್ನವಾಗುವಂತೆ, ಶರೀರರೂಪವಾಗಿ ಬದಲಾವಣೆ ಹೊಂದಿದ ಈ ನಾಲ್ಕು ಭೂತಗಳಿಂದ ಚೈತನ್ಯವು ಉಂಟಾಗುತ್ತದೆ. ಆದುದರಿಂದಲೇ 'ವಿಜ್ಞಾನವು ಈ ಭೂತಗಳಿಂದ ಉತ್ಪತ್ತಿಯಾಗುವುದಷ್ಟೇ ಅಲ್ಲದೆ ಅವುಗಳೊಡನೆ ಲಯವಾಗುತ್ತದೆ', ಮರಣಾನಂತರ ಚೈತನ್ಯದ ಅಸ್ತಿತ್ವ ಇರುವುದಿಲ್ಲ ಎಂದಿದೆ. ಆದುದರಿಂದ ಚೈತನ್ಯ ವಿಶಿಷ್ಟ ದೇಹವೇ ಆತ್ಮ. ದೇಹಕ್ಕಿಂತ ಬೇರೆಯಾದ ಆತ್ಮನ ಅಸ್ತಿತ್ವದಲ್ಲಿ ಯಾವ ಪ್ರಮಾಣವೂ ಇಲ್ಲ. ಪ್ರತ್ಯಕ್ಷ ಒಂದೇ ಪ್ರಮಾಣ ಎಂದೊಪ್ಪಿರುವುದರಿಂದ ಅನುಮಾನ ಮುಂತಾದವುಗಳು ಪ್ರಮಾಣಗಳಲ್ಲ.

**ಭೋಗವೇ ಜೀವನದ ಮುಖ್ಯ ಗುರಿ**

ಅಂಗನೆಯರ ಆಲಿಂಗನ ಮುಂತಾದವುಗಳಿಂದ ಉಂಟಾಗುವ ಸುಖವೇ ಪುರುಷಾರ್ಥ. ಈ ಸುಖವು ದುಃಖಮಿಶ್ರಿತವಾಗಿರುವುದರಿಂದ ಪುರುಷಾರ್ಥವೇ ಅಲ್ಲ ಎಂದು ಯಾರೂ ಭಾವಿಸಬಾರದು. ಅವರ್ಜನೀಯವಾದ ದುಃಖವನ್ನು ಆದಷ್ಟು ದೂರಮಾಡಿ ಸುಖವನ್ನು ಮಾತ್ರ ಅನುಭವಿಸಬೇಕು. ಉದಾಹರಣೆಗೆ – ಮೀನನ್ನು ಬಯಸುವವನು ತನಗೆ ಬೇಡವಾದ

"ಪ್ರಜಾಪ್ರಭುತ್ವ ಕೇವಲ ಸರ್ಕಾರದ ಒಂದು ವ್ಯವಸ್ಥೆಯಲ್ಲ, ಅದು ಮೂಲತಃ ಸಹಜೀವನ ಶೈಲಿ ಮತ್ತು ಪರಸ್ಪರ ಸಂಪರ್ಕದಿಂದೊಡಗೂಡಿದ ಅನುಭವ, ಮೇಲಾಗಿ ನಮ್ಮ ಸೋದರ ಬಂಧುಗಳಿಗೆ ನಾವು ತೋರಿಸುವ ಗೌರವ ಮತ್ತು ಪೂಜ್ಯ ಭಾವನೆಯ ಪ್ರತೀಕ.

– ಭಾರತರತ್ನ ಡಾ|| ಬಿ. ಆರ್. ಅಂಬೇಡ್ಕರ್

## ಸಾರ್ವಭೌಮ ಭಾರತ ಗಣರಾಜ್ಯದಲ್ಲಿ

# ಸುವರ್ಣ ಕರ್ನಾಟಕ

# 57ನೇ ಗಣರಾಜ್ಯೋತ್ಸವದ ಶುಭಾಶಯಗಳು

ಇಂದು ಭಾರತ ಜಗತ್ತಿನಲ್ಲೇ ಬೃಹತ್ ಸಾರ್ವಭೌಮ, ಪ್ರಜಾತಂತ್ರ ಜಾತ್ಯತೀತ ಸ್ವತಂತ್ರ ಗಣರಾಜ್ಯವೆಂಬ ಹೆಮ್ಮೆ ನಮ್ಮೆಲ್ಲರದು. ವಿಶ್ವದಲ್ಲೇ ಅತ್ಯುತ್ತಮ ಸಂವಿಧಾನವನ್ನು ರಚಿಸಿಕೊಟ್ಟ ರಾಷ್ಟ್ರ ನಿರ್ಮಾತೃಗಳ ಪರಿಶ್ರಮವೇ ಈ ಹೆಗ್ಗಳಿಕೆಗೆ ಕಾರಣ.

ದೇಶದಲ್ಲಿ ಪ್ರಜಾಪ್ರಭುತ್ವ ಪ್ರಬಲವಾಗಿರುವಂತೆ ಎಚ್ಚರಿಕೆ ವಹಿಸಿದ ಅವರು ಅಭಿವೃದ್ಧಿ ಪಥದಲ್ಲಿ ಜಾತಿ, ಮತ, ವರ್ಣ, ಲಿಂಗಗಳ ಹೆಸರಿನಲ್ಲಿ ತಾರತಮ್ಯಕ್ಕೆ ಎಡೆ ಮಾಡಿಕೊಡಲಿಲ್ಲ.

ರಾಷ್ಟ್ರದ ಸಮಗ್ರತೆ ಮತ್ತು ಸರ್ವತೋಮುಖ ಅಭಿವೃದ್ಧಿ ಕುರಿತು ಅವರ ದೂರದೃಷ್ಟಿ ಧೋರಣೆಗಳಿಂದಾಗಿ ನಾವೆಲ್ಲರೂ ಭಾವೈಕ್ಯತೆಯಿಂದ ಪ್ರಗತಿಯ ಉತ್ತುಂಗದತ್ತ ಸಾಗುತ್ತಿರುವೆವು. ಈ ಮಹಾನ್ ತ್ಯಾಗಿಗಳು ನಮಗೆ ಆದರ್ಶಪ್ರಾಯರು ಹಾಗೂ ಪ್ರಾತಃಸ್ಮರಣೀಯರು.

ಸಂವಿಧಾನ ನಿರ್ಮಾತೃಗಳ ಆಶಯಗಳಿಗೆ ಸ್ಪಂದಿಸುತ್ತಾ ಕರ್ನಾಟಕ ಇಂದು ಮಹಿಳಾ ಸ್ವಾವಲಂಬನೆ, ಸಾಕ್ಷರತೆ, ಅಧಿಕಾರ ವಿಕೇಂದ್ರೀಕರಣ ಮುಂತಾದ ಮಾದರಿ ಯೋಜನೆಗಳ ಹಾಗೂ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನಗಳಂತಹ ಆಧುನಿಕ ಕ್ಷೇತ್ರಗಳ ಮುಖಾಂತರ ದೇಶದ ಅಭಿವೃದ್ಧಿಗೆ ಅಮೂಲ್ಯ ಕೊಡುಗೆ ನೀಡುತ್ತಿದೆ.

**ಹಕ್ಕುಗಳನ್ನು ಚಲಾಯಿಸಿ. ಕರ್ತವ್ಯಗಳನ್ನು ಪರಿಪಾಲಿಸಿ.**

೫೦ ಕರ್ನಾಟಕ KARNATAKA

ಕರ್ನಾಟಕ ವಾರ್ತೆ

ಚರ್ಮ ಮತ್ತು ಮುಳ್ಳುಗಳನ್ನು ಬಿಟ್ಟು ಉಳಿದ ಭಾಗವನ್ನು ಮಾತ್ರ ಉಪಯೋಗಿಸುವಂತೆ; ಅಕ್ಕಿಯನ್ನು ಬಯಸುವವನು ಬತ್ತದಲ್ಲಿನ ಹೊಟ್ಟು ಮುಂತಾದ ಅಸಾರವಾದುದನ್ನು ತ್ಯಜಿಸಿ ಸಾರವಾದುದನ್ನು ಸ್ವೀಕರಿಸುವಂತೆ ಸುಖವನ್ನೇ ಅನುಭವಿಸುತ್ತ ದುಃಖವನ್ನು ಬಿಡಬೇಕು. ಆದುದರಿಂದ ಸುಖ ದುಃಖಮಿಶ್ರಿತವಾದುದು ಎಂಬ ಭಯದಿಂದ ನಮಗೆ ಅನುಕೂಲವಾಗಿರುವ ಇಡೀ ಪ್ರಾಪಂಚಿಕ ಸುಖವನ್ನೇ ತ್ಯಜಿಸುವುದು ಯುಕ್ತವಲ್ಲ...




**ಯಜ್ಞಮುಂತಾದ ಕ್ರಿಯೆಗಳು ಅರ್ಥಹೀನ**

ಪರಲೋಕದ ಸುಖವಿಲ್ಲದ ಪಕ್ಷದಲ್ಲಿ ಹೆಚ್ಚುಹಣ ಮತ್ತು ಶರೀರಶ್ರಮದಿಂದ ನೆರವೇರಿಸಬಹುದಾದ ಅಗ್ನಿಹೋತ್ರ ಮೊದಲಾದ ಕರ್ಮಗಳಲ್ಲಿ ವಿದ್ವಾಂಸರು ಏಕೆ ತೊಡಗುತ್ತಿದ್ದರು? ಎಂದು ಆಕ್ಷೇಪಿಸುವುದಾದರೆ ಅದು ವಿಚಾರಾರ್ಹವಲ್ಲ, ಏಕೆಂದರೆ ವೇದವು ಅನೃತ (ಸುಳ್ಳು), ವ್ಯಾಘಾತ (ಪರಸ್ಪರ ವಿರುದ್ಧ ವಾಕ್ಯಗಳು), ಪುನರುಕ್ತ ಎಂಬ ದೋಷಗಳಿಂದ ಕಲುಷಿತವಾಗಿದೆ. ಅಷ್ಟೇ ಅಲ್ಲದೆ ವೈದಿಕರು ಎಂದು ಹೇಳಿಕೊಳ್ಳುವ ಧೂರ್ತ ಬಕಗಳು ವೇದವನ್ನು ಪರಸ್ಪರ ನಿರಾಕರಿಸಿದ್ದಾರೆ. ಉದಾಹರಣೆಗೆ – ಕರ್ಮಕಾಂಡವನ್ನು ಪ್ರಮಾಣವನ್ನಾಗಿ ಅಂಗೀಕರಿಸುವ ಮೀಮಾಂಸಕರು ಜ್ಞಾನಕಾಂಡವನ್ನು; ಜ್ಞಾನಕಾಂಡವನ್ನು ಪ್ರಮಾಣವೆಂದೊಪ್ಪಿರುವ ವೇದಾಂತಿಗಳು ಕರ್ಮಕಾಂಡವನ್ನು ಖಂಡಿಸಿದ್ದಾರೆ. ವೇದವು ಕೇವಲ ಧೂರ್ತರ ಪ್ರಲಾಪ. ಅಗ್ನಿಹೋತ್ರ ಮುಂತಾದ ಕ್ರಿಯೆಗಳು ಹೊಟ್ಟೆ ಹೊರೆಯುವ ಸಾಧನಗಳು. ಆದುದರಿಂದ ಲೋಕೋಕ್ತಿ ಈ ರೀತಿ ಇದೆ –

ಅಗ್ನಿಹೋತ್ರ, ಮೂರು ವೇದಗಳು, ಸನ್ಯಾಸ ಗ್ರಹಣ, ಭಸ್ಮಧಾರಣೆ, ಮುಸುಕು ಹಾಕಿಕೊಳ್ಳುವುದು ಈ ಕ್ರಿಯೆಗಳೆಲ್ಲವೂ ಬುದ್ಧಿ ಮತ್ತು ಪೌರುಷ ಇಲ್ಲದೇ ಇರುವವರ ಬದುಕುವ ಸಾಧನಗಳು ಎಂಬುದಾಗಿ ಬೃಹಸ್ಪತಿ ಹೇಳಿದ್ದಾನೆ.

**ದೇಹನಾಶವೇ ಮೋಕ್ಷ**

ಆದುದರಿಂದ ಮುಳ್ಳು ಮುಂತಾದ ಭೌತಿಕ ಕಾರಣಗಳಿಂದ ಉಂಟಾಗತಕ್ಕ ದುಃಖವೇ ನರಕ. ಲೋಕದಿಂದ ಅಂಗೀಕೃತನಾದ ರಾಜನೇ ಪರಮೇಶ್ವರ. ದೇಹ ವಿನಾಶವೇ ಮೋಕ್ಷ. ಜ್ಞಾನದಿಂದ ಮುಕ್ತಿಯಾಗುವುದಿಲ್ಲ...

...ಬೆಂಕಿ ಸುಡುವುದು, ನೀರು ತಣ್ಣಗಿರುವುದು, ವಾಯು ಸಮಶೀತೋಷ್ಣವಾಗಿರುವುದು ತಮ್ಮ ತಮ್ಮ ಸ್ವಭಾವದಿಂದ. ಸ್ವರ್ಗ, ಮೋಕ್ಷ ಯಾವುದೂ ಇಲ್ಲ. ವರ್ಣಾಶ್ರಮಗಳಿಗೆ ವಿಹಿತವಾದ ಕರ್ಮಗಳು ಯಾವ ಫಲವನ್ನೂ ಕೊಡುವುದಿಲ್ಲ. ಜ್ಯೋತಿಷ್ಟೋಮದಲ್ಲಿ ಕೊಲ್ಲಲ್ಪಟ್ಟ ಪಶುವು ಸ್ವರ್ಗಕ್ಕೆ ಹೋಗುವುದಾದರೆ ಆ ಯಜ್ಞದ ಯಜಮಾನನು ತನ್ನ ತಂದೆಯನ್ನೇಕೆ ಕೊಲ್ಲಬಾರದು? ಮರಣ ಹೊಂದಿದ ಜೀವಿಗಳಿಗೆ ಶ್ರಾದ್ಧದಿಂದ ತೃಪ್ತಿ ದೊರೆಯುವುದಾದರೆ ಆರಿಹೋದ ದೀಪದ ಕುಡಿಯನ್ನು ಎಣ್ಣೆ ಉರಿಸಬಹುದು. ಪ್ರಯಾಣ ಮಾಡುವವರಿಗೆ ಬುತ್ತಿ ಕಟ್ಟಿಕೊಡಬೇಕಾದ ಅವಶ್ಯಕತೆ ಇಲ್ಲ; ಏಕೆಂದರೆ ಮನೆಯಲ್ಲಿ ಮಾಡುವ ಶ್ರಾದ್ಧದಿಂದಲೇ ದಾರಿಯಲ್ಲಿರುವವರಿಗೆ ತೃಪ್ತಿಯುಂಟಾಗುವುದನ್ನು ಯಾರು ತಡೆಯಬಲ್ಲರು? ಸ್ವರ್ಗದಲ್ಲಿರುವವರು ಇಲ್ಲಿ ಕೊಡುವ ನಮ್ಮ ದಾನದಿಂದ ತೃಪ್ತಿ ಹೊಂದುವುದಾದರೆ ಉಪ್ಪರಿಗೆ ಮೇಲೆ ಕುಳಿತಿರುವವರಿಗೆ ಕೆಳಗಡೆ ಊಟವನ್ನೇಕೆ ನೀಡುವುದಿಲ್ಲ? ಬದುಕಿರುವವರೆಗೂ ಸುಖವಾಗಿರಬೇಕು, ಸಾಲ ಮಾಡಿಯಾದರೂ ತುಪ್ಪ ಕುಡಿಯಬೇಕು, ಬೂದಿಯಾದ ಶರೀರ ಮತ್ತೆ ಹುಟ್ಟುತ್ತದೆಯೇ? ಈ ದೇಹವನ್ನು ತೊರೆದ ಆತ್ಮವು ಪರಲೋಕಕ್ಕೆ ನಿರ್ಗಮಿಸುವುದಾದರೆ, ಬಂಧುಗಳ ಮೇಲಣ ಪ್ರೇಮದಿಂದ ವ್ಯಾಕುಲಗೊಂಡಾದರೂ ಮತ್ತೆ ಏಕೆ ಹಿಂದಿರುಗಿಬರಬಾರದು? ಮೃತರಾದವರಿಗೆ ನೆರವೇರಿಸತಕ್ಕ ಎಲ್ಲ ಉತ್ತರಕ್ರಿಯೆಗಳು ಬ್ರಾಹ್ಮಣರು ಮಾಡಿಕೊಂಡಿರುವ ಜೀವನೋಪಾಯವಷ್ಟೇ. ಭಂಡರು, ಧೂರ್ತರು ಮತ್ತು ನಿಶಾಚರರು ಈ ಮೂವರು ವೇದಗಳನ್ನು ರಚಿಸಿದ್ದಾರೆ. ಜರ್ಭರೀ, ತುರ್ಫರೀ ಮುಂತಾದವೆಲ್ಲವೂ ಕೇವಲ ಪಂಡಿತರ ಮಾತು. ಅಶ್ವಮೇಧ ಯಾಗದಲ್ಲಿ ಕುದುರೆಯ ಶಿಶ್ನವನ್ನು ಪತ್ನಿ ಹಿಡಿದುಕೊಳ್ಳಬೇಕು ಎಂದು ವಿಧಿಸಲಾಗಿದೆ. ಇದನ್ನೆಲ್ಲ ಭಂಡರು ಹೇಳಿದ್ದಾರಷ್ಟೇ. ಯಜ್ಞದಲ್ಲಿ ಮಾಂಸ ತಿನ್ನಬೇಕೆನ್ನುವುದು ಸಹ ನಿಶಾಚರರಿಂದಲೇ ಉಕ್ತವಾಗಿದೆ. ಆದ್ದರಿಂದ ಜೀವಿಗಳ ಉದ್ಧಾರಕ್ಕೋಸ್ಕರ ಹೇಳಿದುದರಿಂದ ಎಲ್ಲರೂ ಚಾರ್ವಾಕ ಮತವನ್ನೇ ಅನುಸರಿಸಬೇಕು. ಇದೇ ಉತ್ತಮ ಮಾರ್ಗ.

ಮಾಧವ ಸಂಗ್ರಹಿಸಿರುವ ಈ 'ಲೋಕಾಯತ ದರ್ಶನ' ಸಂಪೂರ್ಣವೇನಿಲ್ಲ. ಈ ಹಿಂದೆ ನಾನು 'ಹೊಸತು'ವಿನಲ್ಲಿ ಲೋಕಾಯತ ಸತ್ಯದ ಸ್ವರೂಪವನ್ನು ಹೇಗೆ ಗ್ರಹಿಸಿದೆ ಎಂದು ವಿವರಿಸಿದ್ದೆ. ಆ ವಿಚಾರಗಳು ಮಾಧವನಲ್ಲಿಲ್ಲ.

ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳಲ್ಲಿ ಲೋಕಾಯತಿಕರು ಬರೀ ಅರ್ಥ, ಕಾಮಕ್ಕೆ ಮಾತ್ರ ಮಹತ್ವ ನೀಡುತ್ತಾರೆನ್ನುತ್ತಾನೆ ಮಾಧವ. ಪಕ್ಕಾ ನಾಸ್ತಿಕವಾದದಲ್ಲಿ ಧರ್ಮ, ಮೋಕ್ಷಗಳ ಪ್ರಶ್ನೆ ಬರುವುದಿಲ್ಲವಾದ್ದರಿಂದ ಇದು ಸತ್ಯವೇ. ಆದರೆ ಚಾರ್ವಾಕರು ಅನೀತಿವಂತರೋ, ಭ್ರಷ್ಟಾಚಾರಿಗಳೋ ಆಗಿರಲಿಲ್ಲ. ಪ್ರತಿಯಾಗಿ ಧರ್ಮ, ಮೋಕ್ಷಗಳನ್ನು ಪ್ರತಿಪಾದಿಸುವ ಪುರೋಹಿತಶಾಹಿಯ ಅನೀತಿ, ಅನಾಚಾರಗಳನ್ನು ಚಾರ್ವಾಕರು ಬಯಲಿಗೆಳೆಯುತ್ತಿದ್ದರೆಂಬುದನ್ನೇ ಮಾಧವನಲ್ಲಿರುವ ಕೊನೆಯ ಸಂಗತಿಗಳು (ಯಜ್ಞಗಳಿಗೆ ಸಂಬಂಧಿಸಿ) ಖಚಿತಪಡಿಸುತ್ತವೆ. ವೇದಗಳ ಕುರಿತ ಲೋಕಾಯತದ ಅಭಿಪ್ರಾಯ ಸಂಪೂರ್ಣ ಸತ್ಯವೆಂದು ಹೇಳಲಿಕ್ಕಾಗದು, ಆ ಮಾತು ಬೇರೆ.

ದೇಹ-ಆತ್ಮಗಳ ಸ್ವರೂಪ ಮತ್ತು ಸಂಬಂಧದ ಪ್ರಶ್ನೆ ಭಾರತೀಯ ತತ್ವಜ್ಞಾನದ ಒಂದು ಮಹತ್ವದ ಚರ್ಚೆ. ಆತ್ಮವೆಂಬುದೇ ಇಲ್ಲ ಎಂದು ಆಧುನಿಕ ವಿಜ್ಞಾನಿಗಳ ಅಭಿಮತ. ಅದನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ವಿಧದಲ್ಲಿ ಅರ್ಥೈಸಲಾಗುತ್ತದೆ. ಹಾಗಾಗಿ ಅದು ಇದ್ದರೂ ಕೂಡ ದೇಹವನ್ನು ಬಿಟ್ಟು ಪ್ರತ್ಯೇಕವಾಗಿಲ್ಲ ಎಂದು ಲೋಕಾಯತಿಕರು ವಾದಿಸಬೇಕಾಯಿತು. ದೇಹದ ನಾಶದ ಜತೆ ಅದೂ ಕೂಡ ನಾಶವಾಗುತ್ತದೆನ್ನಬೇಕಾಯಿತು.

ಮುಂದೆ ಸುಖ ದುಃಖಗಳ ದ್ವಂದ್ವಮಾನಾತ್ಮಕ ಅಥವಾ ವೈರುಧ್ಯಾತ್ಮಕ ಸ್ವರೂಪದ ವಿವರಗಳನ್ನು ಗಮನಿಸಬೇಕು. ಇದೂ ಕೂಡ ಸಮರ್ಪಕವಾದುದೇ. ಇದರಲ್ಲಿ ಲಂಪಟತ್ವದ ಪ್ರತಿಪಾದನೆ ಏನಿಲ್ಲ. ವೇದಗಳನ್ನು ಅಪೌರುಷೇಯವೆಂದು ಒಪ್ಪದ ಚಾರ್ವಾಕ ಅವು ಪುರುಷನಿರ್ಮಿತವಾದ್ದರಿಂದ ದೋಷಯುಕ್ತವಾಗಿವೆ ಎಂದು ಹೇಳಿರುವುದು ಸರಿಯೇ. ಆರ್ಯ ವೈದಿಕರ ಈ ರಚನೆಗಳಲ್ಲಿರುವ ಆಭಾಸ, ಅನೈತಿಕತೆ (ಈಗಿನವರ ದೃಷ್ಟಿಯಲ್ಲಿ)ಗಳನ್ನು ಆತ ಕಟುವಾಗಿ ಟೀಕಿಸುವುದನ್ನು ಮುಖ್ಯವೆಂದೇ ಭಾವಿಸಬೇಕಿದೆ. ಅವುಗಳಲ್ಲಿರುವ ವೈರುಧ್ಯಾತ್ಮಕ ವಿಚಾರಗಳನ್ನು ಬಯಲಿಗೆಳೆಯಲಾಗಿದೆ.

ಈ ಸಂದರ್ಭದಲ್ಲಿ ಗಂಭೀರವಾದ ಚರ್ಚೆಯ ಒಂದಂಶವೆಂದರೆ ರಾಜನನ್ನೇ ಪರಮೇಶ್ವರ ಎಂದು ಹೇಳಿರುವುದು. ಲೋಕಾಯತವನ್ನು ರಾಜಶಾಹಿ ತನ್ನ ಹಿತಾಸಕ್ತಿಗೆ ಬಳಸಿಕೊಳ್ಳುತ್ತಿತ್ತು ಎಂಬ ನಮ್ಮ ಊಹೆಗೆ ಇಲ್ಲಿ ಆಧಾರ ದೊರಕುತ್ತದೆ. ಇದು ಲೋಕಾಯತದ ಬಗ್ಗೆ ಅನುಮಾನ ಹುಟ್ಟಿಸುತ್ತದೆ. ಜನತೆಯ ತತ್ವಜ್ಞಾನವಾಗಿದ್ದ ಚಾರ್ವಾಕ ಅದು ಹೇಗೆ ಜನತೆಯನ್ನು ಶೋಷಿಸುವ ಅರಸನನ್ನು ದೇವರೆನ್ನುತ್ತದೆ? ಅರಸರ ಭೌತಿಕ ಸುಖಗಳನ್ನು ತಾತ್ವಿಕವಾಗಿ ಸಮರ್ಥಿಸಲು ಈ ಮತವನ್ನು ಬಳಸಿಕೊಳ್ಳಲಾಯಿತು. ಇದಕ್ಕೆ ಪಂಪನ ಆದಿಪುರಾಣದ ಉದಾಹರಣೆಯನ್ನು ಗಮನಿಸಬಹುದು. ಅಗ್ರಹಾರಗಳ ಬ್ರಾಹ್ಮಣರು ಇತರ ಶಾಸ್ತ್ರಗಳ ಜತೆ ಕಾಮಶಾಸ್ತ್ರ, ಲೋಕಾಯತಾದಿಗಳನ್ನು ಓದುತ್ತಿದ್ದುದರ ಉದ್ದೇಶ ಇದೇ ಇರಬೇಕು. ಧರ್ಮ, ಮೋಕ್ಷಗಳ ವಿಚಾರ ಎಷ್ಟೇ ಆಕರ್ಷಕವಾಗಿದ್ದರೂ ಲಂಪಟದೊರೆಗಳು ಅರ್ಥ ಕಾಮಗಳಿಗೇ ಜೋತುಬೀಳುತ್ತಿದ್ದುದು ಸಹಜ. ಅವರ ವರ್ತನೆಗಳನ್ನು ಲೋಕಾಯತ ಮಾತ್ರ ಸಮರ್ಥಿಸಬಹುದಿತ್ತು. ಇದು ಒಂದು ರೀತಿಯಿಂದ ತತ್ವಜ್ಞಾನದ ದುರ್ಬಲಕೆಯೇ. ವಿಚಿತ್ರವೆಂದರೆ, ಹೀಗಿದ್ದಾಗ (ಅಂದರೆ ದೊರೆಗಳ ಆಶ್ರಯವಿದ್ದಾಗ) ಲೋಕಾಯತದ ಗ್ರಂಥಗಳೇಕೆ ಉಳಿದುಬರಲಿಲ್ಲ? ಲೋಕಾಯತರೇಕೆ ಶಾಸನಾದಿಗಳಲ್ಲಿ ಪ್ರಸ್ತಾಪವಾಗಲಿಲ್ಲ? ಇದಕ್ಕೆ ಸಮಾಧಾನವೆಂದರೆ ಲೋಕಾಯತವನ್ನು ಬಳಸಿಕೊಳ್ಳಲಾಯಿತೇ ಹೊರತು ಅದರ ತತ್ವಕ್ಕೆ ಬದ್ಧರಾಗಿದ್ದ ಪಂಡಿತರು ಬಹುಶಃ ಇರಲಿಲ್ಲ. ಅಂತಿಮವಾಗಿ ಶೋಷಕ ವರ್ಗದ ಹಿತವನ್ನು ಕಾಯುವುದು ಅಧ್ಯಾತ್ಮವಾದಿ ತತ್ವಜ್ಞಾನವೇ ಹೊರತು ಭೌತವಾದವಲ್ಲ. ಭೌತವಾದವೇನಿದ್ದರೂ ಜನತೆಯ ಹಿತಾಸಕ್ತಿಯ ಪಕ್ಕಾ ಪ್ರತಿನಿಧಿಯಾಗಿತ್ತು. ಕೆಲವು ದೊರೆಗಳಾದರೂ ತಮ್ಮ ಸ್ವಾರ್ಥಕ್ಕಾಗಿ ಭೌತಿಕವಾದವನ್ನು ಒಪ್ಪಿಕೊಂಡಿದ್ದರೂ ತಮ್ಮ ಉಳಿವಿಗೆ ಅಧ್ಯಾತ್ಮವಾದವನ್ನೇ ಮೊರೆಹೋಗುತ್ತಿದ್ದುದು ಅನಿವಾರ್ಯವಿತ್ತು. ಏಕೆಂದರೆ ಅಧ್ಯಾತ್ಮವಾದ ಮಾತ್ರ ಜಾತಿ ವರ್ಣ ವ್ಯವಸ್ಥೆಯನ್ನು ಬೆಂಬಲಿಸುತ್ತ ಶೋಷಣೆಯ ಆಧಾರದ ಸಾಮಾಜಿಕ ರಚನೆಯನ್ನು ಸಮರ್ಥಿಸುತ್ತಿತ್ತು.

ಎಸ್. ಎಸ್. ಹಿರೇಮಠ
ಪ್ರಾಚಾರ್ಯರು, ಕೊಟ್ಟೂರೇಶ್ವರ ಮಹಾವಿದ್ಯಾಲಯ, ಕೊಟ್ಟೂರು - ೫೮೩ ೧೩೪

# ಪಣಂಬೂರು ಬಂದರು

ಡಾ|| ಎಚ್. ನಾಗವೇಣಿ

ಪಣಂಬೂರು ಬಂದರಿನ ನಿರ್ಮಾಣ ಕೆಲಸ ಶುರುವಾಗಿ ನಾಲ್ಕು ವರ್ಷ ಕಳೆದರೂ ನಮ್ಮ ಕೈಹಿಡಿದು ಅಕ್ಷರ ತಿದ್ದಿಸುತ್ತಿದ್ದ ಸೋಜ ಮಾಸ್ಟ್ರ ಬೈಗಳಲ್ಲಿ ಮಾತ್ರ ಏನೇನೂ ಬದಲಾವಣೆ ಇಲ್ಲ. ಮಗ್ಗಿ ಹೇಳುವುದರಲ್ಲಿ ತಪ್ಪಿದೆವಾ 'ಏಯ್ ಬಿಕನಾಸಿ ಹೋಗು ಪಣಂಬೂರು ಆರ್ಬರ್‌ರಲ್ಲಿ ಮಣ್ಣು ಹೊರು' ಎಂಬ ಬೈಗಳು. 'ಬಾರೆಲೆ ಹಕ್ಕಿ... ಬಣ್ಣದ ಹಕ್ಕಿ...' ಹಾಡಲ್ಲಿ ಎಡವಿದೆವೋ, ತಲೆಗೊಂದು ಠಕ್ಕನೆ ಮೊಟಕಿ 'ನಡಿ ನಡಿ... ಈಗಲೇ ನಡಿ... ಅಗೋ ಅಲ್ಲಿದೆ ಬುಟ್ಟಿ.. ತಗೋ ಪಣಂಬೂರು ಆರ್ಬರ್‌ರಲ್ಲಿ ಮಣ್ಣುಹೊರು...' ಎಂಬ ಬೈಗಳು ಸಿದ್ಧವಾಗಿರುತ್ತಿತ್ತು.

ಸೋಜ ಮಾಸ್ಟ್ರು ಅನ್ನುತ್ತಿದ್ದ 'ಆರ್ಬರ್' ಎಂದರೆ 'ಪಣಂಬೂರು ಹಾರ್ಬರ್' ಅಥವಾ 'ನವಮಂಗಳೂರು ಸರ್ವಋತು ಆಳ ಬಂದರು' ಎಂದು ನನ್ನ ಬಲಿಯುತ್ತಿದ್ದ ಬುದ್ಧಿಗೆ ಹೊಳೆಯುವ ಹೊತ್ತಿಗೆ ಇನ್ನೇನು ತಿಂಗಳೊಂದರಲ್ಲಿ ತಲೆ ಎತ್ತಲಿರುವ ಹೊಸ ಬಂದರಿನ ಸುತ್ತಮುತ್ತಲೆಲ್ಲ ಬೃಹತ್ ಉದ್ದಿಮೆಗಳಾಗಲೇ ಆವರಿಸಿ ಎದ್ದು ಕೂತಿದ್ದವು – ಹಳೆ ಕುರು ಹುಣ್ಣುವಿನ ಸುತ್ತ ಹತ್ತಾರು ಹೊಸ ಹುಣ್ಣುಗಳು ಅಮರಿಕೊಳ್ಳುವಂತೆ.

ನಮ್ಮ ಪಣಂಬೂರಿಗೆ ಹೊಸ ಬಂದರು ಬರುತ್ತಿದೆಯಂತೆ ಎಂಬ ಸುದ್ದಿ ಬಂದದ್ದು ನಮ್ಮೂರವರು ಹದಿನಾರನೇ ಸ್ವಾತಂತ್ರ್ಯ ಹಬ್ಬವನ್ನು ಆಚರಿಸುತ್ತಿದ್ದ ದಿನದಂದು. ಮೀನುಗಾರಿಕೆ ಮತ್ತು ಕೃಷಿಯನ್ನೇ ನಂಬಿ ಬದುಕುತ್ತಿದ್ದ ನಮ್ಮೂರಿಗರಿಗೆ ಈ ಸುದ್ದಿ ಕೇಳಿ ಫಕ್ಕನೆ ಮಿಂಚು ಹೊಡೆದಂತಾಗಿತ್ತು. ಕೆಲವರಿಗೆ ಸಂತೋಷ ಮತ್ತೆ ಕೆಲವರಿಗೆ ದುಃಖ.

'ನಮಗೆ ಈ ಹೊಸ ಬಂದರಾಕೆ. ಏನಾಗಿದೆ ನಮ್ಮ ಹಳೆ ಬಂದರಿಗೆ! ಆ ಹಳೆ ಬಂದರೆಷ್ಟು ಮಂದಿಯನ್ನು ಇಲ್ಲಿಂದ ಮುಂಬೈ ಸೇರಿಸಿಲ್ಲ. ಹಾಗೆ ನಮ್ಮುಡುಗರು ಮುಂಬೈ ಸೇರಿ ಪ್ಲೇಟು-ಗ್ಲಾಸು ತೊಳೆಯದಿದ್ದರೆ, ಟಾಟಾ-ಬಿರ್ಲನ ಕಂಪನಿಯಲ್ಲಿ 'ಪ್ಯೂನ್'ಗಳಾಗದಿರುತ್ತಿದ್ದರೆ, ಬರೀ ಈ ಮೀನುಗಾರಿಕೆ, ಕೃಷಿ ಕಸುಬು ನಮ್ಮನ್ನು ಬದುಕಿಸುತ್ತಿತ್ತ' ಎಂದು ಹಲವರು ತಟ್ಟನೆ ಹೊಸ ಬಂದರು ನಿರ್ಮಾಣಕ್ಕೆ ತಮ್ಮ ತೀರಾ ಅಸಮಾಧಾನ ನಾಕುಸಿ ತೋರಿಸಿಬಿಟ್ಟಿದ್ದರು.

'ಬಂದರು ಬರುತ್ತಂತಾ... ಬರ್ಲಿಬಿಡು. ಬಾಳ ಒಳ್ಳೆದಾಯ್ತು. ಈ ಬೈಲಾರೆ ಗದ್ದೆಗಳನ್ನು, ಹೊಳೆ ಬಾಯಿಯ ಬೈಲುಗದ್ದೆಗಳನ್ನು ಕಟ್ಟಿಕೊಂಡು ನಾನು ಸಾಗುವಳಿ ಮಾಡುವುದು ಅಷ್ಟರಲ್ಲೇ ಇದೆ. ಕಾರ್ತೆಲ್-ಆಟಿ ತಿಂಗಳಲ್ಲಿ ಜೇರಿಗಟ್ಟಿ ಎರಡೇ ಎರಡು ಜಡಿಮಳೆ ಹೊಡೆದರೆ ಸಾಕು. ಆ ಗುರುಪುರ ನದಿಗೆ ಹುಚ್ಚು ಶುರುವಾಗುತ್ತೆ. ನಮ್ಮ ಗದ್ದೆ ತೋಟ ಮನೆಯೊಳಗೆಲ್ಲ ಮತ್ತೆ ಅದರದ್ದೇ ಕಾರುಬಾರು. ನೆಟ್ಟ ನೇಜಿಯನ್ನೆಲ್ಲ ಕೊಳೆಸಿಬಿಟ್ಟೇ ಆ ಹೊಳೆನೀರು ಮತ್ತೆ ಇಳಿದು ಹೋಗುವುದಲ್ವಾ... ! ಅಂತಹ ಪುಸ್ಕು ಗದ್ದೆ ಯಾರಿಗೆ ಬೇಕಾಗಿದೆ' ಎಂದು ನದಿ ಸೆರಗಲ್ಲಿರುವ ದೊಡ್ಡ ಗಂಟಲಿನ ದೊಡ್ಡಣ್ಣ ಶೆಟ್ಟರು ಸಂತೋಷಪಟ್ಟರೆ, ಅವರ ಭಾವ ಗಂಗಯ್ಯ ಶೆಟ್ಟರಂತು ಬಂದರಿನ ಆಗಮನದ ಸುದ್ದಿ ಕೇಳಿದವರೆ ಸಂತೋಷದಿಂದ ಕುಣಿದು ಕುಪ್ಪಳಿಸುವುದೊಂದು ಬಾಕಿ. 'ದೊಡ್ಡ ಮಗಳಿಗೊಂದು ಐದು ಸಾವಿರ ಬದಿ (ವರದಕ್ಷಿಣೆ) ಕೊಟ್ಟು ಮದುವೆ ಮಾಡಿ ಭಾರ ಇಳಿಸಿಕೊಂಡೆ. ಎರಡನೆಯವಳಿಗಂತು ಕೊಟ್ಟು-ಕೊಳ್ಳುವ ಪಗರ್‌ಸಾಟೆ ಮದುವೆಯಾಯ್ತು. ಇನ್ನು ಮೂರನೆಯವಳ ಕತೆ ಏನು ಅಂತಾ ಯೋಚನೆಗೆ ಬಿದ್ದಿದ್ದೆ ಮಾರಾಯಾ..., ಈಗ ಶುಂಠಿರಸ ಇಲ್ಲದೆಯೆ ಗಂಟಲ ಕಫ ಜಾರುತ್ತಿದೆ ನೋಡು. ಈ ನನ್ನ ಪಡೀಲು (ಬೆಳೆ ತೆಗೆಯಲಾಗದ) ಬಿದ್ದ ಗದ್ದೆಗಳನ್ನು ಇಟ್ಟು ನಾನೇನು ಪೂಜೆ ಮಾಡ್ಬೇಕಾ ? ಅದು ಗವರ್ಮೆಂಟಿಗೆ ಹೋದ್ರೆ ಒಂದಷ್ಟು ಸಾವಿರ ಹಣವಾದ್ರೂ ಬಂದೀತು. ಕಡೀರ (ಕೊನೆ) ಮಗಳ ಮದುವೆಯನ್ನಾದರೂ ಸ್ವಲ್ಪ ಗಡದ್ದಾಗಿಯೇ ಮಾಡಿ ಮುಗಿಸ್ತೇನೆ. ಬಂದರಿನವರು ಕೊಡುವ ಕೆಲಸ ಕಾಸು ನನ್ನ ಕಡೇ ಮಗನಿಗಾಯ್ತು. ಅವರು ಅದೆಲ್ಲೋ ಕೊಡುವ ಜಾಗದಲ್ಲಿ ಒಂದು ಸಣ್ಣ ಮನೆ ಕಟ್ಟಿಸಿಕೊಂಡ್ರಾಯ್ತು. ಎಲ್ಲಿದ್ದರೇ[illegible] ಬದುಕುವುದಕ್ಕೆ! ನಾವೇನು ಸಾಯುವಾಗ [illegible] ಜಾಗವನ್ನು ಅಲ್ಲಿಗೆ ಕೊಂಡೋಗ್ಲಿಕ್ಕಿದೆಯಾ ?' ಎಂಬ ಅಭಿಪ್ರಾಯವ[illegible] ಗಂಗಯ್ಯ ಶೆಟ್ಟರು ಎಲ್ಲರೆದುರು ಕಾರಿಕೊಂಡುಬಿಟ್ಟಿದ್ದರು.

ಹೊಸ ಬಂದರು ಯೋಜನೆಯಿಂದ ಸ್ಥಳಾಂತರಕ್ಕೊಳಪಡು[illegible] ಕುಟುಂಬದವರು ಅವರವರ ಭಾವ, ಭಾರ, ಅನುಕೂಲಕ್ಕೆ ತಕ್ಕಂತೆ ತ[illegible]

> ಪಣಂಬೂರು ಬಂದರು ನಿರ್ಮಾಣವಾದ ನಂತರ ಎದ್ದ ಎಲ್ಲ ಉದ್ಯಮಗಳು ನಮ್ಮೂರ ಪ್ರಾಕೃತಿಕ ಪರಿಸರ, ಜೀವಪರಿಸರವನ್ನು ಹದಗೆಡಿಸತೊಡಗಿತಲ್ಲದೆ, ಊರಿನ ಸಾಂಸ್ಕೃತಿಕ ಪರಿಸರವನ್ನೂ ಕೆಡಿಸತೊಡಗಿದ್ದು ಇನ್ನೊಂದು ದುರಂತ. ಅಂದು ಕಿಂಚಿತ್ತು ಪರಿಸರ ಪ್ರಜ್ಞೆಯಿಲ್ಲದೆ ನಾವು ಔದ್ಯಮೀಕರಣದ ಬಲೆಗೆ ನಮ್ಮೂರನ್ನು ಸಿಲುಕಿಸಿಕೊಟ್ಟ ನಂತರ ಇಂದು ಸಾಂಸ್ಕೃತಿಕ ಪರಿಸರ ಕಲುಷಿತಗೊಂಡಿತು ಅಥವಾ ಕೆಟ್ಟಿತು ಎಂದು ಹಲುಬುವುದು ಮೂರ್ಖತನವೇ ನಿಜ.



ಅಭಿಪ್ರಾಯ-ಅನಿಸಿಕೆಗಳನ್ನು ವ್ಯಕ್ತಪಡಿಸುತ್ತ ಆ ಯೋಜನೆಯನ್ನು ಎದುರು ನೋಡತೊಡಗಿದ್ದರು.

ಹಾಗೆ ನೋಡಿದರೆ ಮಂಗಳೂರಿನ ಹಳೆ ಬಂದರೇನು ಖಂಡಿತ ಕೆಲಸಕ್ಕೆ ಬಾರದ, ನಿನ್ನೆ ಮೊನ್ನೆ ಕಣ್ಣುಬಿಟ್ಟ ಪಡ್ಪೋಸಿ ಬಂದರಲ್ಲ. ೨ನೇ ಶತಮಾನದಲ್ಲೇ ಈಜಿಪ್ಟ್ ದೇಶದ ಅಲೆಕ್ಸಾಂಡ್ರಿಯಾದ ಭೂಗೋಳಜ್ಞ ಟಾಲೆಮಿಯು ತನ್ನ ಕೃತಿ 'ಭೂಗೋಳ ವಿಜ್ಞಾನದ ಕೈಪಿಡಿ' ಯಲ್ಲಿ ಈ ಬಂದರಿನ ಬಗ್ಗೆ ಉಲ್ಲೇಖಿಸಿದ್ದಾನೆ. ಹದಿನೈದನೇ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯದ ಭೇಟಿಗಾಗಿ ಬಂದ ಪರ್ಷಿಯಾದ ರಾಯಭಾರಿ ಅಬ್ದುಲ್ ರಜಾಕ್ ಕೂಡಾ ಈ ಬಂದರಿನ ವಹಿವಾಟು ಕಾರುಬಾರಿನ ಬಗ್ಗೆ ತನ್ನ ಪ್ರವಾಸಕಥನದಲ್ಲಿ ವರ್ಣಿಸಿದ್ದಾನೆ. ಹದಿನಾರನೇ ಶತಮಾನದ ಆದಿಯಲ್ಲಿ ಪೋರ್ಚುಗೀಸ್ ನೌಕರ ಬಾರ್ಬೋಸ್ ಹಾಗೂ ೧೬ನೇ ಶತಮಾನದ ಅಂತರದಲ್ಲಿ ಬಂದ ಇಟಲಿ ದೇಶದ ಪ್ರವಾಸಿ ಪಿಯೆತ್ರೊ ದೆಲ್ಲಾವೆಲ್ಲೆ ಕೂಡಾ ಈ ಬಂದರಿನ ಬಗ್ಗೆ ಹಾಗೂ ಬಂದರಲ್ಲಿ ನಡೆಯುತ್ತಿದ್ದ ವ್ಯಾಪಾರಗಳ ಬಗ್ಗೆ ತಮ್ಮ ಪ್ರವಾಸ ಕಥನಗಳಲ್ಲಿ ವಿವರವಾಗಿ ಬರೆದಿದ್ದಾರೆ.

ಆ ನಮ್ಮ ಭೂಗೋಳಜ್ಞ ಟಾಲೆಮಿ ಈ ಬಂದರಿಗೆ ಕಾಲಿಟ್ಟ ನಂತರದಿಂದಲೇ ಈ ಬಂದರಿನಿಂದ ಪರವೂರು ಪರದೇಶಗಳಿಗೆ ಸಾಗಿಹೋದ ದೊಡ್ಡ ಟೋಪಿ - ಸಣ್ಣ ಟೋಪಿಯ ಮಂದಿ ಹಾಗೂ ಸರಕು ಸಾಮಗ್ರಿಗಳಿಗೇನು ಲೆಕ್ಕವಿದೆಯೆ ? ಅಬ್ಬಕ್ಕರಾಣಿ, ಪೋರ್ಚುಗೀಸರನ್ನು ಒಳಗೊಂಡಂತೆ ಹೈದರಾಲಿ ಟಿಪ್ಪುಸುಲ್ತಾನರ ಸತತ ಸಖ್ಯವನ್ನುಂಡ ಈ ಬಂದರಿಗೆ ಕನ್ನಡ ಜಿಲ್ಲೆಯ ಪ್ರಥಮ ಕಲೆಕ್ಟರ್ ಕ್ಯಾಪ್ಟನ್ ವುಡ್ರೋವನ್ನು ಸ್ವಾಗತಿಸಿದ ಕೀರ್ತಿಯೂ ಸಲ್ಲುತ್ತದೆ.

ಇಂತಹ ತೀರಾ ಹಳೆತಲೆ, ಹಳೇ ಇತಿಹಾಸವನ್ನು ಕಂಡಿರುವ ಈ ಹಳೆಬಂದರನ್ನು ಸಂಪೂರ್ಣ ಮೂಲೆಗುಂಪು ಮಾಡುವಂತಹ ಹೊಸ ಪಣಂಬೂರು ಬಂದರು ನಿರ್ಮಾಣವಾಗುವ ಸುದ್ದಿ ಬಂದೆರಗಿದಾಗ ನಾನಿನ್ನೂ ಅಮ್ಮನ ಸೊಂಟದಿಂದಿಳಿದು ಓಡಾಡುವ ಹಂತದಲ್ಲಿದ್ದೆ. 'ಸದ್ಯದಲ್ಲೆ ತಣ್ಣೀರುಬಾವಿ ಪಣಂಬೂರು, ಬೈಕಂಪಾಡಿಯವರೆಲ್ಲ ಎತ್ತಂಗಡಿಯಾಗುತ್ತಾರಂತೆ ! ಆ ಹಳ್ಳಿಗಳೆಲ್ಲ ಕಡಲೊಳಗೆ ಮುಳುಗುತ್ತಾವಂತೆ. ಆ ಇಡೀ ಊರನ್ನೇ ಪೊರೆದ ನಂದನೇಶ್ವರನ ದೇವಸ್ಥಾನವೂ, ವಿಷ್ಣುಮೂರ್ತಿಯ ಗುಡಿ, ಕಾವೇರಿ ಸ್ಥಾನದೊಳಗಿನ ಜಮಾದಿ ದೈವದ ಜತೆಗೆ ಕಡಲಪಾಲಾಗುತ್ತದಂತೆ ! ಈಚೆ ಬದಿ ಬಸ್ಸು ನಿಲ್ಲುವುದಂತೆ, ಆಚೆ ಬದಿ ಹಡಗು ನಿಲ್ಲುವುದಂತೆ. ಹಡಗೆಂದರೆ ಒಂದು ಊರಿನಷ್ಟು ದೊಡ್ಡದಂತೆ, ಅದರ ಮೇಲೆ ವಿಮಾನ ಇಳಿಯುತ್ತಂತೆ..., ನಾವೆಲ್ಲ ಆ ಹಡಗಲ್ಲೇ ದುಡ್ಡಿಲ್ಲದೆ ಪರ್ದೇಶ ಸುತ್ತಿ ಬರಬಹುದಂತೆ...' ಹೀಗೆ ಬೆಟ್ಟದನೆಲ್ಲಿಯಂತೆ ಹುಳಿ-ಸಿಹಿ-ಒಗರು ಎಲ್ಲವೂ ಮಿಶ್ರಿತವಾದಂತಹ ಭಾವದ ಸುದ್ದಿ ಬಂದು ನಮ್ಮವರ ಭಾವವಲಯವನ್ನು ತಲುಪಿದ ವರುಷದೊಳಗಡೆ ಕಡತದಲ್ಲಿದ್ದ ಬಂದರು ಯೋಜನೆ ಕಾರ್ಯಗತಕ್ಕೆ ಬಂದೇಬಿಟ್ಟಿತ್ತು.

ಮಳೆಗಾಲದಲ್ಲಿ ತೆಂಕಣದಿಂದ ಬೀಸಿ ಬರುವ ಮಾರುತಕ್ಕೆ ಮುನ್ನ ಕೊಲಂಬೋದಿಂದ ಹಾರಿಬರುವ ಹಕ್ಕಿಗಳಂತೆ, ಎಲ್ಲೆಲ್ಲಿಂದಲೋ 'ದೊಡ್ಡ ಟೋಪಿ' ಯವರು ಬಂದಿಳಿದರು. ಹಾಗೆ ಬಂದವರು ನೇರ ಒಕ್ಕಲೆಬ್ಬಿಸುವ ಕಾರ್ಯಕ್ಕೇ ಕೈ ಇಟ್ಟರು. ಸುತ್ತ ಮುತ್ತಲ ಕುಟುಂಬಗಳು ತಮ್ಮ ನೆಲೆಯಿಂದ ಬೇರು ಕಳಚಿಕೊಳ್ಳುವ ಸಂದರ್ಭದಲ್ಲಿ ಹರಿಸಿದ್ದ ಕಣ್ಣೀರಧಾರೆಯಲ್ಲಿ ಮತ್ತೊಂದು ಕಡಲೇ ನಿರ್ಮಾಣಗೊಳ್ಳುವ ಸ್ಥಿತಿ ಉಂಟಾಯಿತು.

ಹಲವಾರು ತಲೆಮಾರುಗಳಿಂದ ಆ ಹೊಳೆ ಈ ಕಡಲ ತಾಯಿಯ ಸೆರಗಂಚಲ್ಲಿ ಕಷ್ಟವೋ ಸುಖವೋ ಹಂಚಿಕೊಂಡು ಬದುಕಿ ಬಾಳಿದ್ದ, ಆ ಹುಟ್ಟುಪರಿಸರ-ನೆಲ-ಜಲದೊಂದಿಗೆ ಭಾವನಾತ್ಮಕ ಸಂಬಂಧವನ್ನು ಬೆಸೆದುಕೊಂಡಿದ್ದ ಆ ಹಳ್ಳಿಗರ ಮನೋವಿಪ್ಲವವನ್ನು ಅರ್ಥೈಸಿಕೊಳ್ಳಲು ಸರಕಾರಕ್ಕೆಲ್ಲಿದೆ ಸಮಯ ? ಹಾಗೆ ತಾಳ್ಮೆ-ಸಂಯಮ-ಕರುಣೆ-ಅನುಕಂಪ ತೋರುತ್ತ ಕೂತಲ್ಲಿ ದೇಶದ ಪ್ರಗತಿಯ ರಥದ ಗಾಲಿ ಹೇಗೆ ಉರುಳೀತು ಎಂಬುದನ್ನೂ ನಾವು ಯೋಚಿಸಬೇಕಾಗುತ್ತದೆ ನಿಜ. ಇಲ್ಲಿ ನೆಲೆ ಕಳೆದುಕೊಳ್ಳುವ ಕುಟುಂಬಕ್ಕೊಬ್ಬರಿಗೆ ಉದ್ಯೋಗ ಪುನರ್ವಸತಿಯ ಜತೆಗೆ ಪರಿಹಾರಧನವೂ ಲಭ್ಯ ಎಂಬ ಆಶ್ವಾಸನೆಯೊಂದು ಮೊದಲೇ ಸಿಕ್ಕಿದ್ದರಿಂದ ನೆಲೆ ಕಳೆದುಕೊಳ್ಳುವವರಿಂದ ಹೆಚ್ಚು ವಿರೋಧವಿಲ್ಲದೆ ಭೂಮಿ ವಶಪಡಿಸಿಕೊಳ್ಳುವ ಕ್ರಿಯೆ ಮುಂದುವರಿಯಿತು.

ಈಗಿನಂತೆ ಆಗಿನ್ನೂ ಪರಿಸರವಾದಿಗಳು ನಮ್ಮಲ್ಲಿ ಹುಟ್ಟಿಕೊಂಡಿರಲಿಲ್ಲ. ಅದುವರೆಗೂ ಪರಿಸರ ಮಲಿನಗೊಳ್ಳುವ ಅಥವಾ ನಾಶವಾಗುವ ಯಾವುದೇ ಉದ್ಯಮಗಳು ಆ ಕಡಲ ಜಿಲ್ಲೆಯನ್ನು ಇನ್ನೂ ಹೊಕ್ಕಿರದ್ದರಿಂದ ಪರಿಸರದ ಬಗ್ಗೆ ಎಚ್ಚೆತ್ತುಕೊಳ್ಳುವ ಅಗತ್ಯವೂ ಆಗ ಹುಟ್ಟಿರಲಿಲ್ಲ. ಬಂದರು ನಿರ್ಮಾಣದ ಸುದ್ದಿ ಬಂದಾಗಲೂ ಅದು ಮುಂದೊಂದು ದಿನ ಪರೋಕ್ಷವಾಗಿ ನಾವು ಹುಟ್ಟಿ ಬೆಳೆದಿರುವ ಜೈವಿಕ ಪರಿಸರವನ್ನು ಹಾಗೂ ನಾವು ಪಾರಂಪರಿಕವಾಗಿ ಕಟ್ಟಿಕೊಂಡು ಬಂದಿರುವ ಸಾಂಸ್ಕೃತಿಕ ಪರಿಸರವನ್ನು ಕುಲಗೆಡಿಸಬಹುದು ಎಂಬ ಕಲ್ಪನೆಯ ಸಣ್ಣ ಎಳೆಯೂ ಅಲ್ಲಿನ ಯಾರೊಬ್ಬರನ್ನೂ ಅವುಚಿಕೊಂಡಿರಲಿಲ್ಲ.

'ಸ್ವಾತಂತ್ರ್ಯಾನಂತರದಲ್ಲಿ ನವಭಾರತವನ್ನು ಕಟ್ಟುವ ತುರ್ತು ನಮ್ಮ ದೇಶಕ್ಕಿರುವ ಕಾರಣ ಪಂಚವಾರ್ಷಿಕ ಯೋಜನೆಯಡಿ ದೇಶದ ಸರ್ವತೋಮುಖ ಸಾಧನೆಯನ್ನು ಗಮನದಲ್ಲಿರಿಸಿಕೊಂಡು ಈ 'ಹೊಸ ಬಂದರು ಯೋಜನೆ' ಯನ್ನು ಬಹಳಷ್ಟು ಹೋರಾಟ ನಡೆಸಿಯೇ ಇಲ್ಲಿಗೆ ತರಲಾಗಿದೆ. ಹಾಗೆಯೇ ಸರಕಾರವೂ ನಿಮ್ಮನ್ನೇನು ಬೀದಿಪಾಲು ಮಾಡುವುದಿಲ್ಲ – ವಸತಿ, ಉದ್ಯೋಗ, ಪರಿಹಾರಧನ ಎಲ್ಲವನ್ನೂ ನೀಡುತ್ತದೆ' ಎಂದು ಕಡಲ ಜಿಲ್ಲೆಯ ರಾಜಕೀಯ ಧುರೀಣರು ಈ ಊರವರಿಗೆಲ್ಲ ಸಮಜಾಯಿಷಿ ನೀಡಿದ್ದು ಕೂಡಾ ಅವರೆಲ್ಲರ ಮೌನ ಒಪ್ಪಿಗೆಗೆ ಒಂದು ಕಾರಣವಿರಬಹುದು.

ಎಲ್ಲವೂ ನಿಜ. ಒಕ್ಕಲೆಬ್ಬಿಸುವಾಗ ಸರಕಾರ ನಮ್ಮ ಜನರಿಗೆ ಬದುಕಲು ಅಗತ್ಯವಾದ ಎಲ್ಲವನ್ನೂ ಕೊಡುತ್ತದೆ. ಅವೆಲ್ಲವೂ ಬಂದರೆ ಈ ಕ್ಷಣಕ್ಕೆ ಆಕರ್ಷಣೀಯ ಕೊಡುಗೆಯಂತೆ ನಮಗೆ ಕಾಣಿಸುವುದೂ ನಿಜ. ಆದರೆ ಒಂದು ನಿರ್ದಿಷ್ಟ ಜೈವಿಕ ಪರಿಸರದಲ್ಲಿ ಹುಟ್ಟಿ ಸುದೀರ್ಘ ಕಾಲ ಆ ಪರಿಸರದ ಏಳುಬೀಳುಗಳಿಗೆಲ್ಲ ಸ್ಪಂದಿಸುತ್ತಾ... ಅದರೊಂದಿಗೆ ಹೊಂದಾಣಿಕೆ ಮಾಡಿಕೊಂಡು ತಮ್ಮ ಬದುಕನ್ನಲ್ಲೇ ರೂಪಿಸಿಕೊಂಡು, ಆ ಪರಿಸರದ ಅವಿಭಾಜ್ಯ ಅಂಗವೆಂದೇ ಪರಿಗಣಿಸಿಕೊಂಡ ಕುಟುಂಬಗಳನ್ನು ಹೀಗೆ ಸ್ಥಳಾಂತರಗೊಳಿಸಿ ಅವರನ್ನು ಹೊಸ ಪರಿಸರಕ್ಕೆ ದಬ್ಬುವಾಗ, ಆ ಕುಟುಂಬಗಳು ಹೊಸ ಜೈವಿಕ ಪರಿಸರಕ್ಕೆ ಒಗ್ಗಲಾರದೆ ಬದುಕನ್ನು ತೀರಾ ಯಾತನಾಮಯವಾಗಿ ಕಳೆಯಬೇಕಾಗುತ್ತದೆ.

ಇತ್ತ ಒಕ್ಕಲೆಬ್ಬಿಸುವ ಪ್ರಕ್ರಿಯೆ ಚುರುಕಾಗುತ್ತಿದ್ದಂತೆ ನೆಲೆ ಕಳೆದುಕೊಳ್ಳುತ್ತಿರುವವರ ಮಾನಸಿಕ ತುಮುಲವೂ ಹೆಚ್ಚತೊಡಗಿತ್ತು. 'ತಾವು ಹುಟ್ಟಿ ಬೆಳೆದು ಅನುಭವಿಸಿದ ಈ ಪ್ರಕೃತಿ... ತಮ್ಮ ಬದುಕಿನೊಂದಿಗೆ ಬೆಸೆದುಕೊಂಡಿರುವ ಮನೆ ಮುಂದಿನ ಆ ಕಡಲು, ಈ ಹೊಳೆ, ಆ ಬೆಟ್ಟ, ಬಾಲ್ಯದ ಕುಣಿತ ಕುಪ್ಪಳಿಕೆಗೆ ರಂಗಸ್ಥಳವಾಗಿದ್ದ ಮನೆ ಅಂಗಳ, ಬೈಲು, ತೋಟ, ಬೈಲಾರೆಗಳು..., ಅಲ್ಲಿರುವ ಅಸಂಖ್ಯ ಜೀವಜಾಲಗಳು... ಇವೆಲ್ಲವನ್ನೂ ತೊರೆದು ಬೇರೊಂದು ನಿರ್ಜೀವ ಪರಿಸರಕ್ಕೆ ಇಲ್ಲಿನ ಬೇರುಗಳನ್ನು ಶಾಶ್ವತವಾಗಿ ಕಳಚಿಕೊಂಡು ಸಾಗಬೇಕೆ ? ಈ ದಟ್ಟ ಪ್ರಕೃತಿಯ ಮಧ್ಯೆ ಕ್ರಿಯಾಶೀಲರಾಗಿದ್ದ ನಾವು ಆ ನರಪ್ರಾಣಿ ಸುಳಿಯದ ಬೋಳುಗುಡ್ಡದಲ್ಲಿ 'ನಮ್ಮದಲ್ಲದ ನೆಲವಿದು' ಎಂಬ ಭಾವ ತಾಳಿ ಪರಕೀಯರಂತೆ ಬದುಕು ಸಾಗಿಸಬೇಕೆ ?' ಬಂದರಿಗಾಗಿ ಒಕ್ಕಲೇಳಬೇಕಾದ ಕುಟುಂಬಗಳು ಇಂತಹ ಭಾವ ತಾಳಿ ಕಣ್ಣೀರುಗರೆದಾಗ ಆ ಕುಟುಂಬಗಳ ನಡುವೆ ಆಪ್ತ ಒಡನಾಟವನ್ನು ಬೆಸೆದುಕೊಂಡಿದ್ದ ಅಕ್ಕಪಕ್ಕದ ಕುಟುಂಬಗಳೂ ಕಣ್ಣೀರು ಸುರಿಸಿದ್ದವು. ಹೊಸ ಬಂದರಿಗಷ್ಟೇ ಭೂಮಿ ವಶಪಡಿಸಿಕೊಂಡು ಉಳಿದ ಕುಟುಂಬಗಳ ಸ್ಥಳಾಂತರವನ್ನು ನಿಲ್ಲಿಸಲಾಗದೇ ಎಂದು ಹಲವು ಕುಟುಂಬಗಳು ಸರಕಾರವನ್ನು ಕೋರಿಕೊಂಡವು. ಆಗ ಸರಕಾರ ಮೌನ ತಾಳಿತು. ಅದಕ್ಕೂ ಕಾರಣವಿಲ್ಲದಿಲ್ಲ. ನಮ್ಮ ಸರಕಾರವು ಕೇವಲ ಬಂದರಿನ ನಿರ್ಮಾಣಕ್ಕೆ ಮಾತ್ರವೇ ಹೊರಟಿಲ್ಲ. ಆ ಬಂದರಿನ ಸರಹದ್ದಲ್ಲಿ ಇನ್ನೂ ಅನೇಕ ಉದ್ಯಮಗಳ ಸ್ಥಾಪನೆಗೂ ಅವಕಾಶ ನೀಡುವ ಕೆಲವು ಯೋಜನೆಗಳನ್ನು ಆಗಲೇ ಅದು ರೂಪಿಸಿಕೊಂಡಿತ್ತು. ಸರಕಾರ ಈ ಪೂರ್ವಾಲೋಚನೆಯಿಂದಲೇ ತಾನು ಇಂತಿಷ್ಟು ಭೌಗೋಳಿಕ ಪ್ರದೇಶವನ್ನು ವಶಪಡಿಸಿಕೊಳ್ಳುತ್ತಿದ್ದೇನೆ ಎಂಬ ಅಧಿಸೂಚನೆಯನ್ನು ಮೊದಲೇ ಹೊರಡಿಸಿದ್ದರಿಂದ ಎಲ್ಲ ಕುಟುಂಬಗಳಿಗೆ ಸ್ಥಳಾಂತರವೀಗ ಅನಿವಾರ್ಯವಾಯಿತು.

ತಾನು ಒಂದು ಭೌಗೋಳಿಕ ಪ್ರದೇಶವನ್ನು ವಶಪಡಿಸಿಕೊಳ್ಳುತ್ತಿದ್ದೇನೆ ಎಂದು ಸರಕಾರ ವಾದಿಸಿದರೂ ಅದು ಇಡೀಯ ಒಂದು ಸಾಂಸ್ಕೃತಿಕ ಪ್ರದೇಶದ ವಶಪಡಿಸಿಕೊಳ್ಳುವಿಕೆ ಎಂಬ ಸತ್ಯವನ್ನು ಮಾತ್ರ ಯಾರೂ ಅಲ್ಲಗಳೆಯುವಂತಿಲ್ಲ. ತಾನು ಬದುಕಿ ಬಾಳಿದ ಇಂತಿಷ್ಟು ವಿಸ್ತೀರ್ಣದ ನಿಸರ್ಗದಲ್ಲಿ ಯಾವುದೇ ಒಂದು ಕುಟುಂಬ ತನ್ನದೇ ಆದ ಜೈವಿಕ ಪರಿಸರ ಹಾಗೂ ಸಾಂಸ್ಕೃತಿಕ ಪರಿಸರವನ್ನು ಮಾನಸಿಕವಾಗಿ ಒಪ್ಪಿಕೊಂಡು ಬದುಕು ಸಾಗಿಸುತ್ತಿರುವಾಗ ಹೊಸ ಪರಿಸರವೊಂದಕ್ಕೆ ಶಾಶ್ವತವಾಗಿ ಸ್ಥಳಾಂತರಗೊಳ್ಳಬೇಕಾದ ಅನಿವಾರ್ಯತೆ ಉಂಟಾದಾಗ ಆ ಕುಟುಂಬ ಅನುಭವಿಸುವಂತಹ ಮಾನಸಿಕ ಕ್ಲೇಶ ಯಾವುದೇ ವಿವರಣೆಗೆ ದಕ್ಕುವಂತದ್ದಲ್ಲ. ಹೊಸಬಂದರು ಯೋಜನೆ ನಮ್ಮೂರಿಗೆ ಬರುತ್ತದಂತೆ ಎಂಬ ಸುದ್ದಿ ಬಂದಾಗ ತಮ್ಮದೇ ಆದ ಹತ್ತಾರು ಸಾಂಸಾರಿಕ, ಅರ್ಥಿಕ ಸಮಸ್ಯೆಗಳಲ್ಲಿ ತೊಳಲಾಡುತ್ತಿದ್ದ ನಮ್ಮ ದೊಡ್ಡಣ್ಣ ಶೆಟ್ರು ಮತ್ತು ಗಂಗಯ್ಯಶೆಟ್ರು ಆ ಕ್ಷಣದಲ್ಲಿ ವೈಯಕ್ತಿಕ ಸಂಸಾರ ತಾಪತ್ರಯದ ಕಾರಣಕ್ಕಾಗಿ ಯಾವುದೇ ಪೂರ್ವಾಲೋಚನೆಯಿಲ್ಲದೆ ಹೊಸ ಬಂದರು ಯೋಜನೆಯನ್ನು ಮುಕ್ತಕಂಠದಲ್ಲಿ ಸ್ವಾಗತಿಸಿದ್ದವರು, ಇದೀಗ ಒಕ್ಕಲೇಳಬೇಕಾದ ಕ್ಷಣದಲ್ಲಿ ಅನುಭವಿಸಿದ ವೇದನೆಯಂತೂ ಅಷ್ಟಿಷ್ಟಲ್ಲ. ತಮ್ಮ ಸಾಂಸ್ಕೃತಿಕ ಬೇರನ್ನು ಕಳಚಿಕೊಂಡು ಬದಲಾದ ಜೈವಿಕ ಪರಿಸರದಲ್ಲಿ ಅದರಲ್ಲೂ ನಿರ್ವಸಿತರಿಗೆ ನೀಡುವ ನಿರ್ಜೀವ ಬರಡು ಭೂಮಿಯಲ್ಲಿ ಬದುಕು ಸಾಗಿಸ ಬೇಕಾದ ಅನಿವಾರ್ಯತೆ ಅವರಿಗೆ ಎದುರಾದಾಗ ಅವರು ಬಾಯ್ಕೊಟ್ಟೇ ಅತ್ತುಬಿಟ್ಟಿದ್ದರು.

ದಿನನಿತ್ಯದ ತಮ್ಮ ಬದುಕಲ್ಲಿ ಹಾಸುಹೊಕ್ಕಾಗಿದ್ದ ತಮ್ಮ ಸುತ್ತಲಿನ ಹೊಳೆ-ಕಡಲು-ಗುಡ್ಡ-ಬೈಲು-ಬೈಲಾರೆ ತೋಟಗಳ ನಡುವೆ ಅವರಿಗಿದ್ದ ಪರಸ್ಪರ ಸಂಬಂಧ ಮತ್ತು ಅವಲಂಬನೆ ಇದೀಗ ಅವರು ಹೊಸ ಪರಿಸರಕ್ಕೆ ಬಂದಾಗ ಅವರನ್ನು ತೀವ್ರವಾಗಿ ಕಾಡತೊಡಗಿತ್ತು. 'ನನ್ನ ಮಗಳ ಮದುವೆ ಹೇಗಾದರೂ ಮಾಡಿಯೇನು; ಸರಕಾರದ ಹಣವೂ ಬೇಡ – ಮಗನಿಗೆ ಕೆಲಸವೂ ಬೇಡ. ನನ್ನ ಮನೆ – ನನ್ನ ಅಂಗಳ, ನನ್ನ ಹಿತ್ಲು-ತೋಟ ನನಗಿದ್ದರೆ ಸಾಕು' ಎಂದು ಗಂಗಯ್ಯ ಶೆಟ್ಟರು ಈಗ ಹಠಮಾಡಿದರೆ ಸರಕಾರವೇನು ಪಡೆದುದ್ದನ್ನು ಬಿಟ್ಟು ಕೊಡುತ್ತದೆಯೇ ? ಪುನರ್ವಸತಿ ಪಡೆದ ಆ ಬರಡು ಪ್ರದೇಶದಲ್ಲಿ ಅವರು ಮುಂದೆಂದಾದರೂ ಹೊಳೆ ಮುಖ ಕಾಣಲಿಕ್ಕಿದೆಯೇ, ಕಡಲ ಸೆರಗು ನೋಡಲಿಕ್ಕಿದೆಯೇ ? ಅವರ ಒಡೆತನದಲ್ಲಿದ್ದ ಬೈಲುಗದ್ದೆ-ಬೈಲಾರೆ ಗದ್ದೆಗಳು ಅಸಂಖ್ಯ ಜೀವಿಗಳಿಗೆ-ಪ್ರಾಣಿ ಪಕ್ಷಿಗಳಿಗೆ ತೊಟ್ಟಿಲಾಗಿದ್ದಂತಹ ತಾಣ. ನೆರೆ ಬರುತ್ತೆ-ಹೊಳೆ ನೀರು ನುಗ್ಗುತ್ತೆ ಎಂಬುದೊಂದು ಆರೋಪಬಿಟ್ಟರೆ, ಇಂದಿಗೂ ಅವರು ಹನಿಗಣ್ಣಾಗಿ ನೆನಪಿಸಿ ಕೊಳ್ಳುವುದು – ಈ ಹೊಸ ಬಂದರು ನುಂಗಿ ನೊಣೆದು ಹಾಕಿರುವ ಅವರ ಬೈಲುಗದ್ದೆಗಳನ್ನೇ.

ನಮ್ಮ ದೊಡ್ಡಣ್ಣ ಶೆಟ್ರು – ಗಂಗಯ್ಯ ಶೆಟ್ರಂತೆ ಇಲ್ಲಿ ನೆಲೆ ಕಳೆದುಕೊಂಡವರೆಲ್ಲ ಅಲ್ಲಿಗೆ... ತಮ್ಮ ಹೊಸ ಪುನರ್ವಸತಿ ಪರಿಸರಕ್ಕೆ ಹೊರಟಾಗ – ತಮ್ಮನ್ನು ತಾಯಿಯಂತೆ ಪೊರೆದ ತಮ್ಮ ಊರನ್ನು ಮನೆ ತೋಟ, ನಿಸರ್ಗವನ್ನು ಮತ್ತೊಮ್ಮೆ ಹಿಂತಿರುಗಿ ಕಣ್ತುಂಬ ನೋಡುತ್ತ,

'ಅದು ನನ್ನಪ್ಪ ನೆಟ್ಟಿರುವ ಮಾವಿನಮರ... ಒಳ್ಳೆ ಜಾತಿಯದ್ದು; ಇದು ಕಿಟ್ಟು ಮಾವ ಪೆರುವಾಯಿಯಿಂದ ತಮ್ಮ ಹೆಂಡತಿ ಊರಿಂದ ತಂದು ಹಾಕಿರುವ ತುಳುವ ಹಲಸಿನ ಮರ; ಅಲ್ಲಿದೆಯಲ್ಲಾ... ಅದು ನನ್ನ ಹೆಂಡತಿ ನೆನಪಿಗೆ ನಾನೇ ಅವ್ಳು ಸತ್ತಾಗ ಈ ಕೈಯಾರೆ ನೆಟ್ಟಿರುವ ಕೆಂಡಸಂಪಿಗೆ ಮರ; ಇಲ್ಲೇ ಇದೆ ನೋಡು... ಅಪರೂಪದ ರಾಮಫಲದ ಗಿಡ... ನನ್ನ ದೊಡ್ಡಮಗಳ ಗಂಡನ ಮನೆಯದ್ದು...! ಇವೆಲ್ಲವನ್ನೂ ಹೇಗೆ ಬಿಟ್ಟು ಹೋಗುವುದೋ ಮಾರಾಯ... ?'

'ನನ್ನ ತೋಟದಲ್ಲಿ ನೋಡನಾ... ಎಷ್ಟಿದೆ ಕೆಂದಾಳೆ ಮರಗಳು! ಎಲ್ಲವೂ ನನ್ನಪ್ಪ ಇಟ್ಟಿದ್ದು... ನನ್ನ ಮಗನಿಗಿರಲಿ ಅಂತಾ; ನೋಡಲ್ಲಿ ನಮ್ಮ ಅಂಗಳದಲ್ಲಿ ನಾನೇ ಸ್ವತಃ ಕಟ್ಟಿರುವ ತುಳಸೀ ಕಟ್ಟೆ..., ಅದು ಎದುರಿಗಿರುವ ಸ್ಥಾನ ಇದೆಯಲ್ವಾ... ಅದು ನಮ್ಮ ಕುಟುಂಬದವರೆಲ್ಲ ಸೇರಿ ಕಟ್ಟಿಸಿದ್ದು ದೈವ ವರ್ತೆ-ಪಂಜುರ್ಲಿಯದ್ದು...'

'ನೋಡಲ್ಲಿ ನಮ್ಮ ನಂದನೇಶ್ವರನ ದೇವಸ್ಥಾನ. ಒಳ್ಳೆ ಕಾರ್ಣಿಕದ ದೇವ್ರು. ಆದರೆ ನಮ್ಮನ್ನೆಲ್ಲ ಊರು ಬಿಡಿಸಿ, ತಾನು ಮಾತ್ರ ಆ ಸರಕಾರದ ಅಧಿಕಾರಿಗಳನ್ನೆಲ್ಲ ಬೆದರಿಸಿ ತನ್ನ ದೇವಸ್ಥಾನವನ್ನು ಮಾತ್ರ ಉಳಿಸಿಕೊಂಡುಬಿಟ್ಟ! ನೋಡಾತನ ಧ್ವಜಸ್ತಂಭ... ಗರ್ಭಗುಡಿ; ನಿನ್ನೆದುರಿಗಿರುವ ಕಾವೇರಿಸ್ಥಾನದ ಜುಮಾದಿದೈವ ಕೂಡಾ ಎತ್ತಂಗಡಿಯಂತೆ! ವಾರದೊಳಗೆ ತೊರ್ತಲ್‌ಗೆ (ಸುರತ್ಕಲ್‌ಗೆ) ಹೋಗುತ್ತಂತೆ. ನೋಡು ಮಾರಾಯ... ನಮ್ಮನ್ನೆಲ್ಲ ಕಾಪಾಡಿದ ಈ ಕಾವೇರಿಸ್ಥಾನದ ದೈವದ ಸ್ಥಿತಿಯನ್ನು.'

ಅರೆ! ಒಂದೇ ಎರಡೇ... ನೆನಪಿನಲ್ಲಿ ಒತ್ತಿಕೊಳ್ಳಬೇಕಾದುದು ? ಪ್ರತಿಯೊಬ್ಬ ನೆಲೆ ಕಳೆದುಕೊಳ್ಳುವವನೂ ಕೊನೆಯದಾಗಿ ತನ್ನ ಚಿತ್ತದಲ್ಲಿ ಒತ್ತಿಕೊಳ್ಳಬೇಕಾದ ನೆನಪಿನ ಸ್ಮಾರಕಗಳು ಅದೆಷ್ಟೋ! ಮನೆಯ ತುಳಸಿಕಟ್ಟೆಯಿಂದ ಹಿಡಿದು ಇದುವರೆಗೂ ತಮಗೆ ನೆರಳು-ಗಾಳಿ-ಫಲಕೊಟ್ಟ ಮರ-ಗಿಡ-ಬಳ್ಳಿಗಳನ್ನು, ಅನ್ನ ಕೊಟ್ಟ ಮಜಲು, ಬೈಲು, ತೋಟಗಳನ್ನು... ಹಾಗೆಯೇ ಬಿಟ್ಟು ಹೊರಡುವುದೆಂದರೆ...! ಶಕುಂತಲೆ, ಪತಿ ದುಷ್ಯಂತನನ್ನು ಸೇರ ಹೊರಟಾಗ ಕಣ್ವಾಶ್ರಮವನ್ನು ಅದರ ಸುತ್ತಲ ಜೀವ ಪರಿಸರವನ್ನು ಅಗಲಲಾಗದೆ ಹೇಗೆ ಪರಿತಪಿಸಿ ಅತ್ತಳೋ... ಅದಕ್ಕಿಂತ ನೂರುಪಟ್ಟು ಮಿಗಿಲಾಗಿತ್ತು – ಈ ನೆಲೆ ಕಳೆದುಕೊಂಡವರ ಅಗಲುವಿಕೆಯ ಪರಿತಾಪ ದುಃಖ. ಶಕುಂತಲೆಗಾದರೂ ಮರಳಿ ಬಂದರೆ ತಂದೆಯ ಕಣ್ವಾಶ್ರಮದಲ್ಲಿ ಹಕ್ಕಿನ ಆಶ್ರಯವಿತ್ತು. ಆದರೆ ಇಲ್ಲಿ ನೆಲೆ ಕಳೆದುಕೊಂಡು ಹೊರಟವರಿಗೆ ? ಅವರ ಸಮಸ್ತ ನೆನಪಿನ ಸ್ಮಾರಕಗಳೆಲ್ಲ ನಿದಾನಕ್ಕೆ ಕಡಲ ಒಡಲಿಗೆ ಸೇರಿ ಮುಳುಗಲಿವೆ ಎಂಬ ಕಾರಣಕ್ಕಾಗಿ ಅವರು ಕರುಳು ಕಿತ್ತುಕೊಳ್ಳುವಂತೆ ಕಣ್ಣೀರು ಹಾಕುವುದೊಂದೇ ಅವರಿಗೆ ಉಳಿದ ದಾರಿಯಾಗಿತ್ತು.

ಅಂತೂ ಒಕ್ಕಲೆಬ್ಬಿಸುವ ಕೆಲಸ ಪೂರ್ತಿಯಾಯಿತು. ತಕ್ಷಣವೆ ಬಂದರಿನ ನಿರ್ಮಾಣ ಕಾರ್ಯ ಬಿರುಸಿನಿಂದ ಆರಂಭಗೊಂಡಿತ್ತು. ಪಣಂಬೂರು ಸೀಮೆಯ ಕಡಲಂಚನ್ನು ಆಳಗೊಳಿಸಿ ಕಡಲನ್ನು ಒಂದಿಷ್ಟು ಇತ್ತ ಎಳೆತಂದು, ಕಡಲ ಒಡಲಿಂದ ಮರಳು ಬಗೆದು ಅತ್ತ ಒಗೆವ ಕೆಲಸಕ್ಕೆ ದೇಶ-ಪರದೇಶದ ಯಂತ್ರ ಸಾಮಗ್ರಿ ಜತೆಗೆ ತಂತ್ರಜ್ಞರು ಇಲ್ಲಿಗೆ ಹಾರಿ ಬಂದರು. ಕೆಲವು ಅಮಾವಾಸ್ಯೆ ಕಳೆಯುವಷ್ಟರಲ್ಲಿ ಬಂದರು ಪ್ರದೇಶಕ್ಕೆ ತಾಗಿಕೊಂಡಂತಿದ್ದ ನಮ್ಮೂರು ಬರೀ ಪರವೂರು-ಪರದೇಶಿಗರಿಂದ ತುಂಬಿ ತುಳುಕತೊಡಗಿ ನಾವೇ ಎಲ್ಲಾದರೂ ಪರವೂರಲ್ಲಿದ್ದೇವೇನೋ ಅಥವಾ ನಾವೇ ಪರದೇಶಿಗಳಾಗುತ್ತಿದ್ದೇವೇನೋ ಎಂಬ ಭಾವ ನಮ್ಮನ್ನು ಕಾಡತೊಡಗಿತ್ತು. ಊರು, ದೇಶದ ಇಪ್ಪತ್ತೇಳನೇ ಸ್ವಾತಂತ್ರ್ಯ ಹಬ್ಬವನ್ನು ಆಚರಿಸುವ ವೇಳೆಗೆಲ್ಲ ಬಂದರಿನ ನಿರ್ಮಾಣ ಕಾರ್ಯವೆಲ್ಲ ಮುಗಿದು ಮುಂದಿನ ಐದು ತಿಂಗಳಲ್ಲದು ಪ್ರಧಾನಿ ಇಂದಿರಾ ಗಾಂಧಿಯವರಿಂದ ಉದ್ಘಾಟಿಸಲ್ಪಟ್ಟಿತು.

ಅತ್ತ ಬಂದರು ನಿರ್ಮಾಣವಾಗುತ್ತಿದ್ದಂತೆ ಇತ್ತ ನಮ್ಮೂರ ನಸೀಬು ಒಮ್ಮಿಂದೊಮ್ಮೆಗೇ ಬದಲಾಗತೊಡಗಿತ್ತು. ಬಂದರಿನ ಹೊಸ 'ಗಾಳಿಗೆ' ಊರು ಸಿಕ್ಕಾಪಟ್ಟೆ ಬೆಳೆಯ ತೊಡಗಿತ್ತು. ಬಂದರು ಕಾರ್ಮಿಕರಿಗಾಗಿ ನೌಕರರಿಗಾಗಿ ಊರಲ್ಲಿ ಹೊಟೇಲು ಅಂಗಡಿಗಳು ತೆರೆಯಲ್ಪಟ್ಟವು. ಬಾಡಿಗೆ ಮನೆಗಳೂ ದಿಢೀರನೆ ಸಿದ್ಧವಾದವು. ದನದ ಕೊಟ್ಟಿಗೆ, ಬಚ್ಚಲುಮನೆಗಳೆಲ್ಲವೂ ಬಾಡಿಗೆ ಮನೆಗಳಾಗಿ ರೂಪಾಂತರಗೊಂಡವು. ಊರಿಗದು ಭೂಷಣವೆಂಬಂತೆ ಸಾರಾಯಿ ಸೇಂದಿ ಅಂಗಡಿಗಳ ಸಂಖ್ಯೆಯೂ ವೃದ್ಧಿಗೊಂಡಿತು. ಯಾವ ಹೊಸ ವ್ಯಾಪಾರ ಹಾಕಿ ಪರವೂರ ಮಂದಿಯಿಂದ ಎಷ್ಟು ದೋಚಬಹುದು ಎಂಬ ಆಲೋಚನೆಯಲ್ಲೇ ನಮ್ಮ ಊರಮಂದಿ ಸುಸ್ತಾದರು.

ಆ ಸುಸ್ತಿನ ಜತೆಗೆ ಪರವೂರಿಂದ ಬಂದವರು ನಡೆಸುತ್ತಿದ್ದ ದಾಂಧಲೆ, ಅನೀತಿಯ ಬದುಕಿನ ಪರಿಯೂ ಈ ಊರಮಂದಿಗೆ ಇನ್ನಷ್ಟು ಸುಸ್ತು ಬರಿಸಿತಲ್ಲದೆ ದೊಡ್ಡ ತಲೆನೋವಾಗಿಯೂ ಪರಿಣಮಿಸತೊಡಗಿತ್ತು. ಹೆಣ್ಣು ಹೆತ್ತವರೆಲ್ಲ ತಮ್ಮ ತಮ್ಮ ಹೆಣ್ಣು ಮಕ್ಕಳನ್ನು ರಕ್ಷಿಸುವ ಚಿಂತೆಯ ಜತೆಗೆ ತಮ್ಮ ಹೆಣ್ಮಕ್ಕಳ ಕೊರಳಿಗೊಂದು ಸುರಕ್ಷಿತವಾಗಿ

ತಾಳಿ ಬಿಗಿಸಿ ಮರ್ಯಾದೆಯಿಂದ ಗಂಡನ ಮನೆಗೆ ಕಳುಹಿಸಿಕೊಡುವ ಯೋಚನೆಯಲ್ಲೇ ಅವರು ಹೆಚ್ಚು ಕಾಲ ಮಗ್ನರಾಗಬೇಕಾಯಿತು. ಪರವೂರಿಗರಿಂದ ಊರು ಬೆಳೆದಂತೆ ಕಳ್ಳತನ ದರೋಡೆಗಳೂ ಅಲ್ಲಲ್ಲಿ ನಡೆಯತೊಡಗಿದವು. ಆ ಪುಂಡರನ್ನು ಹಿಡಿಯಲು ಪೊಲೀಸ್ ಠಾಣೆಗಳೂ ಹುಟ್ಟಿಕೊಂಡವು.

ಹೀಗೆ ಪರವೂರ ಕಳ್ಳರ ಜತೆ ಊರ ಸುಭಗರ ಮಕ್ಕಳೂ ಸೇರಿಕೊಂಡು ಕಳ್ಳತನಕ್ಕಿಳಿದಾಗ ಊರಿನ ಮಾನ ಹೋಗಿ ಪೊಲೀಸ್ ಠಾಣೆಯಲ್ಲಿ ಕೂರುವ ಸಂದರ್ಭವೇ ಅಧಿಕವಾಯ್ತು. ಊರು ಬೆಳೆಯುವಾಗ ಇದು ಮಾಮೂಲು ಎಂದು ಹೇಳಿದರು – ಪರವೂರಿಂದ ಬಂದವರು. ಹೊಸ ಬಂದರಿನ ನಿರ್ಮಾಣ ಕಾರ್ಯವಾದೊಡನೆ ಅದರ ಮುಂಭಾಗದಲ್ಲೇ ಸ್ಥಾಪನೆಯಾದ ಬೃಹತ್ ಉದ್ಯಮ ಮಂಗಳೂರು ರಾಸಾಯನಿಕ ಮತ್ತು ರಸಗೊಬ್ಬರ ಕಾರ್ಖಾನೆ, ಅದರ ಪಕ್ಕದಲ್ಲೇ ತಲೆ ಎತ್ತತೊಡಗಿದ ಭಾರತೀಯ ತೈಲ ನಿಗಮದ ತೈಲಸಂಗ್ರಹಣಾ ಘಟಕ, ಬಲಭಾಗದಲ್ಲಿ ಸ್ಥಾಪನೆಗೊಂಡ ಕುದುರೆಮುಖ ಕಬ್ಬಿಣ ಅದಿರು ಸಂಸ್ಥೆಯ ಸ್ಲರಿ ಸಂಗ್ರಹಣಾ ಘಟಕ, ಕೇವಲ ಒಂದು ಕಿ.ಮೀ. ದೂರದಲ್ಲಿ ಎದ್ದುಕೂತ ಕೈಗಾರಿಕಾ ಎಸ್ಟೇಟ್... ಹೀಗೆ ಬಂದರಿನ ಸುತ್ತಮುತ್ತ ಎದ್ದು ಕೂತ ಉದ್ಯಮಗಳು ಒಂದೇ ಎರಡೇ..., ಹಲವು.

ಇವೆಲ್ಲ ಉದ್ಯಮಗಳು ನಮ್ಮೂರಿಗೆ ತೀರಾ ಭಾರವಾಗುವಷ್ಟು ಉದ್ಯೋಗಿಗಳನ್ನು ತಂದು ನೆಲೆಗೊಳಿಸಲಾರಂಭಿಸಿದಂತೆ ಮೊದಲೇ ಊರಲ್ಲಿದ್ದ ಸಮಸ್ಯೆ ಮತ್ತಷ್ಟು ಉಲ್ಬಣವಾಗತೊಡಗಿತ್ತು. ಊರ ಜನಸಂಖ್ಯೆ-ಬಾಡಿಗೆಮನೆ ಹೆಚ್ಚಿದಂತೆ ಊರಿನ ವ್ಯಾಪಾರ ವಹಿವಾಟೂ ವಿಪರೀತವಾಗಿ ಹೆಚ್ಚಿತು. ಈ ವಹಿವಾಟಿನಿಂದ ಕೈಯಲ್ಲಿ ಕಾಸಿನ ಚಲಾವಣೆ ಹೆಚ್ಚಿದಂತಾಗಿ ಮನಸ್ಸು ಕೂಡಾ ನಿಧಾನಕ್ಕೆ ವ್ಯಾವಹಾರಿಕವಾಗತೊಡಗಿತ್ತು. ಮನುಷ್ಯರ ಸಂಬಂಧಗಳು ಕೂಡಾ ಅದೇ ದಾರಿ ಹಿಡಿದವು. ದಿಢೀರನೆ ಹಣ ಮಾಡುವ ದಾರಿಗಳು ಸ್ಪಷ್ಟವಾಗುತ್ತಿದ್ದಂತೆ ಎಳೆತಲೆಗಳಿಗೆ ಕೃಷಿಭೂಮಿಯಲ್ಲಿ ದುಡಿಯುವುದು ತೀರಾ ಮೂರ್ಖತನವೆಂದೆನಿಸತೊಡಗಿತ್ತು. ಕೃಷಿಯಲ್ಲಿ ಏನು ಸಿಗುತ್ತೆ ಬರೀ ಮಣ್ಣು ಎಂದು ಹೀಗಳೆದ ಎಳೆತಲೆಗಳು ಅವುಗಳನ್ನು ಪಾಳು ಬೀಳಿಸತೊಡಗಿ, ನಿಧಾನಕ್ಕೆ ಆ ಭೂಮಿಯನ್ನು ಬಾಡಿಗೆ ಮನೆ, ಸೈಟುಗಳನ್ನಾಗಿ ಮಾರ್ಪಡಿಸಿಕೊಂಡವು.

ಅಲ್ಲಿಂದಲೇ ಹಚ್ಚ ಹಸುರಾದ ನಮ್ಮ ಕೃಷಿ ಭೂಮಿ ತೋಟಗಳೆಲ್ಲ ಬಾಡಿಗೆ ಮನೆಗಳ ಕಾಡಾಗತೊಡಗಿದ್ದವು. ಇವೆಲ್ಲವೂ ಹೊಸ ಬಂದರಿನ ಮಹಿಮೆ ಎಂದು ಅಲ್ಲಿ ಭೂಮಿ ಕಳೆದುಕೊಂಡಿದ್ದ ದೊಡ್ಡಣ್ಣ ಶೆಟ್ರು, ಗಂಗಯ್ಯಶೆಟ್ರಂತ ಹಳೆ ತಲೆಗಳು ಹೊಸ ಬಂದರಿನ ಬಗ್ಗೆ ಕಿಡಿಕಾರತೊಡಗಿದರೆ ಎಳೆತಲೆಗಳು ಅದನ್ನು ಒಪ್ಪಲು ಸಿದ್ಧವಿಲ್ಲ. ಹೊಸ ಬಂದರಿನ ಬಗ್ಗೆ ಕಿಡಿಕಾರುತ್ತಿದ್ದ ದೊಡ್ಡಣ್ಣ ಶೆಟ್ರು ಸಿಡಿದೇಳುವಂತಹ ಭೀಕರ ದುರಂತವೊಂದು ಅವರು ಬದುಕಿಬಾಳಿದ್ದ ಕೂಳೂರು ನದಿಯ ಪಕ್ಕದಲ್ಲೇ ನಡೆದುಹೋಯ್ತು. ಆಗಷ್ಟೇ ಬಂದರಿನ ಮುಂದೆಯೇ ಎದ್ದ ಮಂಗಳೂರು ಗೊಬ್ಬರ ಕಾರ್ಖಾನೆಯು ಆರಂಭಗೊಂಡ ವರ್ಷದಲ್ಲಿ (೧೯೭೬) ತನ್ನ ತ್ಯಾಜ್ಯ ವಸ್ತುಗಳನ್ನು ಪಕ್ಕದಲ್ಲೇ ಹರಿಯುತ್ತಿದ್ದ ಕೂಳೂರು ನದಿಗೆ ಬಿಟ್ಟು ಸುಮಾರು ೧೨ ಟನ್‌ಗಳಷ್ಟು ಕಡಲ ಮೀನುಗಳ ಸಾವಿಗೆ ಕಾರಣವಾಯ್ತು! ಆ ಕಡಲ ಸೆರಗಲ್ಲಿ ಮೀನುಗಾರಿಕೆಯನ್ನೇ ಆಶ್ರಯಿಸಿ ಬದುಕುತ್ತಿದ್ದ ಮೀನುಗಾರರೆಲ್ಲ ಕಂಗಾಲಾಗಿ ಸಣ್ಣ ಪ್ರತಿಭಟನೆ ನಡೆಸಿದಾಗ, ಆ ಪ್ರತಿಭಟನೆಯಲ್ಲಿ ದೊಡ್ಡ ಗಂಟಲಿನ ಈ ದೊಡ್ಡಣ್ಣ ಶೆಟ್ಟರೂ ಸೇರಿಕೊಂಡು ಪ್ರತಿಭಟನೆ ನಡೆಸಿ ತಮ್ಮ ಚಿತ್ತಕ್ಕಷ್ಟು ಶಾಂತಿಯನ್ನು ಪ್ರಾಪ್ತಿಮಾಡಿಕೊಂಡಿದ್ದರು.

ಪಣಂಬೂರು ಬಂದರು ನಿರ್ಮಾಣವಾದ ನಂತರ ಎದ್ದ ಎಲ್ಲ ಉದ್ಯಮಗಳು ನಮ್ಮೂರ ಪ್ರಾಕೃತಿಕಪರಿಸರ, ಜೀವಪರಿಸರವನ್ನು ಹದಗೆಡಿಸತೊಡಗಿತಲ್ಲದೆ, ಊರಿನ ಸಾಂಸ್ಕೃತಿಕ ಪರಿಸರವನ್ನೂ ಕೆಡಿಸತೊಡಗಿದ್ದು ಇನ್ನೊಂದು ದುರಂತ. ಅಂದು ಕಿಂಚಿತ್ತು ಪರಿಸರ ಪ್ರಜ್ಞೆಯಿಲ್ಲದೆ ನಾವು ಔದ್ಯಮೀಕರಣದ ಬಲೆಗೆ ನಮ್ಮೂರನ್ನು ಸಿಲುಕಿಸಿಕೊಟ್ಟ ನಂತರ ಇಂದು ಸಾಂಸ್ಕೃತಿಕ ಪರಿಸರ ಕಲುಷಿತಗೊಂಡಿತು ಅಥವಾ ಕೆಟ್ಟಿತು ಎಂದು ಹಲುಬುವುದು ಮೂರ್ಖತನವೇ ನಿಜ.

ನಮ್ಮೂರಿಗೆ ಹೊಸ ಬಂದರು ಬಂದು ಇಂದಿಗೆ ಮೂವತ್ತು ವರ್ಷಗಳಾಗುತ್ತಿವೆ. ಯಾವತ್ತಾದರೂ ತವರುಮನೆ ಕಡೆ ತಲೆ ಹಾಕಿದರೆ ಅಲ್ಲಿ ಬರೀ ಪರವೂರಿಗರದ್ದೇ ಮುಖದರ್ಶನ! ಆ ಕ್ಷಣ ಅದು ನನ್ನ ತವರೂರು ಎಂದು ಅನಿಸುವುದೇ ಇಲ್ಲ. ಆ ಹೊಳೆಯೂ ನಮ್ಮದಲ್ಲ... ಆ ಕಡಲೂ ನಮ್ಮದಲ್ಲ... ಆ ಗಾಳಿಯೂ ನಮ್ಮದಲ್ಲ ಎಂಬ ಭಾವನೆಯೇ ತುಂಬಿಕೊಳ್ಳುತ್ತದೆ. ರಾತ್ರಿಯೇನಾದರೂ ಅಪ್ಪಿತಪ್ಪಿ ಮಹಡಿಯೇರಿ ಮುಗಿಲು ದಿಟ್ಟಿಸಿದರೆ ಸಾಕು, ಆ ಬಾನೂ ನಮ್ಮದಲ್ಲ ಎಂದೇ ಅನಿಸಿಬಿಡುತ್ತದೆ. ಬಾಲ್ಯದಲ್ಲಿ, ಗೋಧೂಳಿ ಕಾಲ ಕಳೆದೊಡನೆ ನಾವು ಮಹಡಿ ಏರಿ ನಿಂತು ಬಾನು ದಿಟ್ಟಿಸಿದರೆ ಸಾಕು ಬಾನಲ್ಲಿ ನಮಗೆ ಕಾಣಸುತ್ತಿದ್ದ ಬೆಳಕಿನ ಹನಿಗಳು ಎಷ್ಟು! ಅಸಂಖ್ಯ. ಆದರೆ ಇಂದು ನಮ್ಮೂರ ಕಡಲಸೆರಗಲ್ಲಿ ಹಲವು ಉದ್ಯಮಗಳು ಹುಟ್ಟಿಕೊಂಡ ನಂತರ ನಾವು ಚುಕ್ಕಿ ಎಣಿಸಲು ಮಹಡಿ ಏರಿದರೆ ನಮಗೀಗ ಕಾಣುವುದು, ಆಕಾಶಕ್ಕೆ ಹಗಲಿರುಳು ವಿಷ ಉಗುಳುವ ದಟ್ಟ ಹೊಗೆಯ ವೈಭವ ಮಾತ್ರ !

**ಡಾ|| ಎಚ್. ನಾಗವೇಣಿ**
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

## ಸ್ವಗತ

ಇಲ್ಲಿ ಎಷ್ಟೊಂದು ದೀಪಗಳು
ಮಸುಕಾಗಿ ಕಾಣುತ್ತಿವೆ ಗೆಳೆಯಾ,
ಬುದ್ಧ ಬೆಳಗಿದ ದೀಪ
ಬಸವ ಬೆಳಗಿದ ದೀಪ
ಗಾಂಧಿ ಬೆಳಗಿದ ದೀಪ
ಇನ್ನೂ ಯಾರ್‍ಯಾರವೋ...

ಬುದ್ಧನರಿವಿನ ದೀಪ ಯುದ್ಧದಲಿ ನಾಚಿ
ಬಸವ ಕ್ರಾಂತಿಯ ದೀಪ ಸ್ಥಾವರದಿ ನಲುಗಿ
ಗಾಂಧಿಯೊಲವಿನ ದೀಪ ಮಿಥ್ಯದಲಿ ಕರಗಿ,
ಜಗವು ಜಯಿಸಲೆ ಇಲ್ಲಾ;
ಕೊನೆಗೆ, ದೀಪ ಬೆಳಗಿದವರನ್ನು ಪೂಜಿಸಿ ಕರೆದ
ಮೈಲಿಗೆಯ ಮನಸುಗಳೂ ತಿಳಿಗೊಳ್ಳಲೇ ಇಲ್ಲಾ...

ಕತ್ತಲು ಕತ್ತಲನ್ನೇ ಭಜಿಸಿ
ಕತ್ತಲೆಯೇ ಕಣ್ಣಾಗುತ್ತಿರುವಾಗ
ನಾನೂ, ಮತ್ತೆ ಈ ದೀಪಗಳ ಬೆಳಗುವಂತೆ ಭ್ರಮಿಸಿದರೆ
ನನಗೇ ಒಳಗೊಳಗೆ ನಗುಬರುತ್ತದೆ;
ಅಗೋ ಅಲ್ಲೊಂದು ಪುಟ್ಟ ನಕ್ಷತ್ರ ಅರಳುತ್ತಿದೆ
ಅತ್ತ ಮುಖ ಮಾಡೋಣ...

**ಮಂಜು ಶೆಟ್ಟರ್**
ಕೇರಾಫ್ ಈರಪ್ಪ ಎಂ. ಕಂಬಳಿ
ಡಿ-೧೫೪, ಜೀವನ ಬೀಮಾನಗರ
ಬೆಂಗಳೂರು - ೫೬೦ ೦೭೫



# ಕೊಡವ ಸಂಸ್ಕೃತಿಯ ವೈಶಿಷ್ಟ್ಯ



**ಕೊ**ಡಗು ಜಿಲ್ಲೆಗೆ ನಾನು ಮುಖತಃ ಭೇಟಿ ನೀಡದೇ ಇದ್ದರೂ ಆ ಜಿಲ್ಲೆಯ ವೈಶಿಷ್ಟ್ಯಗಳ ಬಗ್ಗೆ, ಅಲ್ಲಿನ ಜನಜೀವನದ ಬಗ್ಗೆ ಸಾಕಷ್ಟು ಮಾಹಿತಿ ಪಡೆದಿದ್ದೆ. ಅದೊಂದು ವಿಶೇಷ ಜನಪದೀಯ ಜೀವನ ಹಾಗೂ ಕಲೆಗಳಿಂದ ಒಡಗೂಡಿದ ತವರು ಎಂದು ಬಲ್ಲವನಾಗಿದ್ದೆ. ಆದರೆ ಅದನ್ನು ಕಣ್ಣಾರೆ ನೋಡಿ, ಅದನ್ನು ಅನುಭವಿಸಬೇಕು ಎಂಬ ಬೇಡಿಕೆ ನನ್ನೊಳಗೆ ಬಹಳ ದಿನಗಳಿಂದಲೂ ಹಾಗೇ ಇತ್ತು. ಭಾರತೀಯ ಪದಾತಿದಳದ, ಅತ್ಯಂತ ನಿಷ್ಠುರ ಹಾಗೂ ದಕ್ಷತೆಗೆ ಹೆಸರಾದ ಜನರಲ್ ಕಾರ್ಯಪ್ಪನವರಿಂದಲೂ ಈ ನಾಡಿಗೆ ಒಂದು ಖದರು ಬಂದಿದೆ. ಈ ಜಿಲ್ಲೆಯ ಪ್ರಮುಖ ಪಟ್ಟಣಗಳಲ್ಲಿ ಒಂದಾದ ಮಡಿಕೇರಿಗೆ ಹೋಗಲೇಬೇಕಾದ ಸಂದರ್ಭ ಬಂದಾಗ ಅದನ್ನು ನಾನು ತಪ್ಪಿಸಿಕೊಳ್ಳಲಿಲ್ಲ.

ಹೊರನಾಡು, ಧರ್ಮಸ್ಥಳದ ಮೂಲಕ ಮಡಿಕೇರಿಯ ದಾರಿ ಹಿಡಿದಾಗ ದಾರಿಯುದ್ದಕ್ಕೂ ನಮ್ಮನ್ನು ಕೈಹಿಡಿದು ನಡೆದಿದ್ದು ಮಳೆ, ಮಳೆ ಮತ್ತು ಮಳೆ. ಧಾರಾಕಾರವಾಗಿ ಬಿಟ್ಟೂಬಿಡದೆ ಸುರಿಯುತ್ತಿದ್ದ ಮಳೆ ಸುರಿಯುತ್ತಿರುವಂತೆಯೇ ಕಡಲತೀರದ ಭಾರ್ಗವ ಡಾ॥ ಶಿವರಾಮ ಕಾರಂತರ 'ಬೆಟ್ಟದ ಜೀವ'ದ ಪಾತ್ರಗಳಾದ ಶಿವರಾಮಯ್ಯ, ಗೋಪಾಲಯ್ಯ, ದೇರಣ್ಣ ಹಾಗೂ ಶಂಕರಿ, ನಾರಾಯಣರೂ ನೆನಪಾದರು. ದಾರಿಯುದ್ದಕ್ಕೂ ಹಬ್ಬಿದ ಹಸಿರಿನ ಬೆಟ್ಟವನ್ನು ನೋಡನೋಡುತ್ತಿರುವಂತೆಯೇ ಕಾನೂರು ಹೆಗ್ಗಡಿತಿಯ ಹೂವಯ್ಯ ಮೂಡಿಬಂದ. ಹಚ್ಚಹಸಿರಿನ ಐಸಿರಿಯನ್ನು ಕಣ್ತುಂಬ ತುಂಬಿಕೊಳ್ಳುತ್ತ ದಾರಿ ಸವೆಸುತ್ತಿದ್ದಂತೆಯೇ ಚುಮು... ಚುಮು ನಸುಕು ಇದಿರಾಯಿತು. ಅದು ನಮ್ಮೂರಲ್ಲಿ ಉಂಟಾದಂತಹ ಬೆಳ್ಳಂಬೆಳಗೂ ಅಲ್ಲ, ಮಂಜು ಮುಸುಕಿದ ವಾತಾವರಣ. ಹಾಡೇ ಹಗಲಲ್ಲೂ ರಸ್ತೆ ಮೇಲೆ ವಾಹನ ಚಲಿಸಬೇಕೆಂದಿದ್ದರೂ ಲೈಟು ಹಾಕಿಯೇ ನಡೆಸಬೇಕು. ಈ ಹಾದಿಯಲ್ಲಿ ಎಷ್ಟು ದಟ್ಟಮೋಡ ಮುಸುಕಿರುತ್ತದೆಯೆಂದರೆ, ಕೆಲವೊಮ್ಮೆ ಮಾರು ದೂರದಲ್ಲಿ ಏನಿದೆ, ಎಂಬುದೇ ಕಣ್ಣಿಗೆ ಕಾಣಿಸದಷ್ಟು ಕತ್ತಲೆ ಸಾಮ್ರಾಜ್ಯವೇ ತುಂಬಿಕೊಂಡಿರುತ್ತದೆ. ಒಂದು ರೀತಿಯಲ್ಲಿ ಮುಗಿಲ ಮೋಡಗಳ ನಡುವೆಯೇ ನಾವು ತಿರುಗಾಡಿದಂತಹ ವಿಶಿಷ್ಟ ಅನುಭವ. ಒಮ್ಮಿಂದೊಮ್ಮೆ ಆವರಿಸುವ ಮೋಡಗಳು. ಇನ್ನೇನು ದಾರಿಯೇ ಕಾಣದಾಗುತ್ತದೆ ಎಂದಾಗ ಥಟ್ಟನೆ ಸರಿದುಹೋಗುತ್ತವೆ. ಅವುಗಳ ಅದ್ಭುತ ನೃತ್ಯ, ರಂಜನೀಯ. ಅಲ್ಲಲ್ಲಿ ನನ್ನ ವಾಹನ ನಿಲ್ಲಿಸುತ್ತ ಕ್ಯಾಮರಾ ಕ್ಯಾನವಾಸಿನ ಮೇಲೆ ಆ ಮನಮೋಹಕ ದೃಶ್ಯ ಸೆರೆಹಿಡಿಯುತ್ತ ಆ ನಿಸರ್ಗ ದೇವತೆಯ ಅಡಿಗಳಿಗೆ ನನಗೆ ಅರಿವಿಲ್ಲದಂತೆ ಬಾಗಿಬಿಟ್ಟಿದ್ದೆ. ಅದು ಅತ್ಯಂತ ನಾಜೂಕಿನ ದಾರಿ ಬೇರೆ. ಸ್ವಲ್ಪವೇ ಯಾಮಾರಿಬಿಟ್ಟರೂ ಆಳದ ಕಮರಿಗೆ ಬಿದ್ದು ಬಿಡಬಹುದಾದ ಅಪಾಯದ ದಾರಿ. ದಾರಿ ಗುಂಟ ಜಾಗ್ರತವಾಗಿ ಹೋಗಬೇಕಾದ ಅನಿವಾರ್ಯತೆ ಬೇರೆ.

**ವಿಶ್ವಾರಾಧ್ಯ ಸತ್ಯಂಪೇಟೆ**

ಆದರೆ ನಾನು ಇದ್ಯಾವುದನ್ನೂ ಮನಸ್ಸಿಗೆ ಹಚ್ಚಿಕೊಳ್ಳದೆ ಹಸಿರಿನಿಂದ ಆವೃತವಾದ ಆ ಚಾರ್ಮಾಡಿ ಘಾಟ್‌ನ ಸವಿಯನ್ನು ಅನುಭವಿಸುತ್ತಲೇ ನಡೆದೆ.

ಅಲ್ಲಲ್ಲಿ 'ಧೋ' ಎಂದು ಒಂದೇ ಸಮ ರಭಸವಾಗಿ ಕಗ್ಗಲ್ಲರಾಶಿಗಳ ಮಧ್ಯದಲ್ಲಿ ಹರಿಯುವ ಜಲರಾಶಿ ಎಂಥವರನ್ನೂ ಬೆಕ್ಕಸಬೆರಗಾಗಿಸುತ್ತಿತ್ತು. ಅದರ ಇಕ್ಕೆಲಗಳಲ್ಲಿಯೇ ಇರುವ ಹಸಿರಿನ ರಾಶಿ ರಾಶಿ ಗಿಡ ಬಳ್ಳಿ ನಿತ್ಯವೂ ನೀರು ಹರಿದರೂ ಸುಮಂಗಲಿಯಾಗೇ ಇದ್ದವು. ಎತ್ತ ನೋಡಿದಡತ್ತ ಹಸಿರೇ ಇಲ್ಲಿ ಉಸಿರಾಗಿತ್ತು. ''ಎಂಥ ಚಂದದ ಬಳ್ಳಿ ಚೆಲ್ವರಿದಿಹುದಿಲ್ಲಿ, ಚಲುವನರಸುವ ಜಾಣ ಬಂದು ನೋಡೋ'' ಎಂದು ಯಾರೋ ನನ್ನೊಳಗೆ ನುಡಿದಂತೆ ಭಾಸವಾಗುತ್ತಿತ್ತು. ನಮ್ಮ ಕಾರ್‌ನಲ್ಲಿಯ ಟೇಪ್ ಮಾತ್ರ ತನ್ನ ಪಾಡಿಗೆ ತಾನು ''ಮೂಡಲ ಮನೆಯ ಮುತ್ತಿನ ನೀರಿನ ಎರಕಾವ ಹೊಯ್ದಾ ನುಣ್ಣನೆ ಎರಕಾವಾ ಹೊಯ್ದ'' ಎಂದು ಹಾಡುತ್ತಲೇ ಇತ್ತು. ಅಂದಂತೆ ಈ ಜಗದ ಬಾಗಿಲನ್ನು ವಿಚಿತ್ರ ಕಲೆಗಳಿಂದ ಎಬ್ಬಿಸುವ ಆ ಕಲೆಗಾರ ಎಲ್ಲಿ ಅಡಗಿದ್ದಾನೆ? ಎಂದು ಜಿಜ್ಞಾಸೆಗೆ ತೊಡಗಿದಂತೆಯೇ ಶಿವಶರಣೆ ಅಕ್ಕಮಹಾದೇವಿ ''ಚಿಲಿಪಿಲಿ ಎಂದೋಡುವ ಗಿಳಿಗಳಿರಾ ನೀವು ಕಾಣಿರೆ? ನೀವು ಕಾಣಿರೆ?!'' ಎಂದು ತನ್ನ ಆತ್ಮ ಸಂಗಾತನನ್ನು ಹುಡುಕಿದ್ದು; ''ಇಳಿನಿಂಬು ಮಾವು ಮಾದಲಕ್ಕೆ ಉಳಿ ನೀರನೆರೆದವರಾರಯ್ಯ?'' ಎಂದು ಪ್ರಕೃತಿಯ ವೈಚಿತ್ರ್ಯಕ್ಕೆ ಬೆರಗಾದ ಆಕೆ, ಆ ನಿಗೂಢತೆಯನ್ನೇ ದೇವರೆಂದು ಕರೆದದ್ದು ಎಷ್ಟೊಂದು ಸತ್ಯವಾಗಿದೆಯಲ್ಲ! ಅನ್ನಿಸಿತು.

ಮುಗಿಲನ್ನು ಚುಂಬಿಸಿಯೇ ಬಿಡುತ್ತೇವೇನೋ ಎಂಬ ಉಮೇದಿನಲ್ಲಿರುವ ಇಲ್ಲಿನ ಸಹಸ್ರ ಸಹಸ್ರ ಮರಗಳು ಮಳೆಗೆ ಬಾಯ್ತೆರೆದು ನಿಂತಿದ್ದವು. ಇಳೆಮಾತ್ರ ಮಳೆಯ ಆಗಮನದಿಂದ ಪುಳಕಗೊಂಡಂತೆ ನೀರನ್ನು ತನ್ನ ಆಳಕ್ಕೆ ಇಳಿಸಿಕೊಳ್ಳುತ್ತಲೇ ಸಂಭ್ರಮಿಸುತ್ತಿರುವಂತೆ ಭಾಸವಾಗುತ್ತಿತ್ತು. ''ಮೊದಲ ದಿನ ಮೌನ ಅಳುವೇ ತುಟಿಗೆ ಬಂದಂತೆ, ಚಿಂತೆ ಬಿಡಿಹೂವ ಮುಡಿದಂತೆ...'' ಎಂಬ ಕೆ. ಎಸ್. ನರಸಿಂಹಸ್ವಾಮಿಯವರ ಹಾಡನ್ನು ಈ ಪ್ರಕೃತಿಗೂ ಅನ್ವರ್ಥವಾಗಿಸಿಕೊಂಡು ನೋಡಿದೆ. ಮದುವೆಯಾಗಿ ಮೊದಲ ಸಲ ಗಂಡನ ಮನೆಗೆ ಬಂದ ಕನ್ಯೆಯಂತೆಯೇ ಭೂತಾಯಿ ಕಂಡುಬಂದಳು. ಆಕೆ ಇನ್ನಷ್ಟು-ಮತ್ತಷ್ಟು ನಾಚಿದಂತೆ ಕಂಡುಬಂತು. ಆ ನಾಚಿಕೆ ಆಕೆಯ ಚೆಲುವನ್ನು ಇಮ್ಮಡಿಗೊಳಿಸಿತ್ತು.

ಅಷ್ಟೊತ್ತು ತೆಪ್ಪಗೆ ತನ್ನ ಪಾಡಿಗೆ ತಾನು ಡ್ರೈವ್ ಮಾಡಿಕೊಂಡಿದ್ದ ನಮ್ಮ ಕಾರಿನ ಡ್ರೈವರ್ ಹುಸೇನ ಸಾಬ ಇದ್ದಕ್ಕಿದ್ದಂತೆಯೇ ತನ್ನ ಕಾಲಲ್ಲಿಯ ಬ್ರೇಕ್ ತುಳಿಯುತ್ತ ''ಮಾಲಕ್... ಬ್ರೇಕ್ ಹತ್ತೊವಲ್ಲುದ್ರೀ...'' ಎಂದು ರಾಗ ಎಳೆಯಬೇಕೆ? ನನಗೆ ಹಾಗೂ ನನ್ನೊಂದಿಗಿದ್ದ ಗೆಳೆಯರಿಗೆ ಒಂದೇ ಏಟಿಗೆ ಎದೆ ಧಸಕ್ಕೆಂದಿತು. ''ಏನೋ ಮಾರಾಯಾ... ಇಲ್ಲಿ ಫೂರ್ತಿ ಡೌನ್ ಕರ್ವ್‌ಡ್ ಅದಾವ... ಸ್ವಲ್ಪ ಎಲ್ಯಾರಾ ಕ್ರಾಸ್‌ನಾಗ ನಿಲ್ಸೊ...'' ಎಂದು ಹೇಳುತ್ತಲೇ ಕುಳಿತ ಸೀಟಿನಿಂದಲೇ ನನ್ನ ಸೀಟ್ ಹತ್ತಿರದ ಕಾರ್ ಬಾಗಿಲು ತೆರೆದು ಹೊರಗಡೆ ಹಾರಬೇಕೆಂಬ ಎತ್ತುಗಡೆಯಲ್ಲಿರುವಾಗಲೇ ಮತ್ತೆ... ಡ್ರೈವರ್ ''ಬ್ರೇಕ್‌ಫೆಲ್ ಏನೂ ಆಗಿಲ್ಲರೀ... ಸರಿಯಾಗಿ ಬ್ರೇಕ್ ಹತ್ತೊವಲ್ದು ಅಷ್ಟೆ ಅಂದ್ರೇರಿ...'' ಎಂದಾಗಲೇ ನನ್ನ ಎದೆ ಹೊಡಕೊಳ್ಳುವುದು ನಿಂತಿತು. ಆಮೇಲೆ ಸ್ವಲ್ಪ ಹೊತ್ತು ಆ ಕರ್ವ್‌ಗಳಲ್ಲಿಯೇ ನಿಂತು ಗಾಡಿಯನ್ನು ಫುಲ್ ಚೆಕ್‌ಅಪ್ ಮಾಡಿ ಧರ್ಮಸ್ಥಳ ತಲುಪುವಷ್ಟರಲ್ಲಿ ಕಣ್ಣಿಗೆ ಕಾಣಿಸಿದ 'ಕಾಂಕ್ರೀಟ್ ಕಾಡು' ನನ್ನ ಮನಸ್ಸನ್ನು ಮುದುಡಿಗೊಳಿಸಿತು. ಧರ್ಮಸ್ಥಳದ ಮಂಜುನಾಥ

ಸ್ವಾಮಿಯ ದರ್ಶನವಾಗಲಿ, ಅಲ್ಲಿನ ಧರ್ಮಾಧಿಕಾರಿಯ ಸತತ ಪ್ರಯತ್ನ ಹಾಗೂ ಪರಿಶ್ರಮದಿಂದ ಎದ್ದು ನಿಂತಿರುವ ಹಲವಾರು ಕಟ್ಟಡಗಳೇ ಮುಂತಾದವ್ಯಾವೂ ನನ್ನ ಮನದಾಳಕ್ಕೆ ಇಳಿಯಲೇ ಇಲ್ಲ. ಪ್ರಕೃತಿ ತಾನೇ ತಾನಾಗಿ ನಿಂತ ಸೌಂದರ್ಯದ ಮುಂದೆ ಮನುಷ್ಯ ನಿರ್ಮಿತ ಕಟ್ಟಡಗಳು ಎಷ್ಟು ಕುಬ್ಜ ಎಂದನ್ನಿಸಿತು.

ದಾರಿಯುದ್ದಕ್ಕೂ ಕಂಡ ಉಜಾರಿ, ಪಂಜ, ಹೆಬ್ರಿ, ಉದಾನಿ, ಸುಳ್ಯದತನಕ ಬರುವವರೆಗೂ ಮಳೆ ನಮ್ಮನ್ನು ಬೆಂಬಿಡದೆ ಬೆನ್ನುಹತ್ತಿತ್ತು. ಆದರೆ ಆ ಮಳೆ ಎಂದಿಗೂ ಬಯಲಸೀಮೆಯಲ್ಲಿ ಸುರಿಯುವ ಬಿರುಮಳೆ ಆಗಿರಲಿಲ್ಲ. ಗುಡುಗು, ಸಿಡಿಲುಗಳ ಆರ್ಭಟ ಕೇಳಲೇ ಇಲ್ಲ. ಆದರೆ ಧಾರಾಕಾರವಾಗಿ ಸುರಿಯುವ ಮಳೆಗೆ ಮಾತ್ರ ಬಿಡುವೆಂಬುದೇ ಇರಲಿಲ್ಲ. ಆ ಪಶ್ಚಿಮ ಘಟ್ಟದ ಅರಣ್ಯ ಮರದ ಮೇಲೆ ಮಳೆ ಎಷ್ಟೇ ಸುರಿದರೂ ಅದರ ಆರ್ಭಟಕ್ಕಿಂತ, ಅಲ್ಲಿಯ ಗಿಡಗಂಟೆಗಳ ಕೊರಳೊಳಗಿಂದ ಉಂಟಾದ ಸುನಾದ ಮಾತ್ರ ಮನಸ್ಸಿಗೆ ಮುದ ನೀಡುತ್ತದೆ. ಎತ್ತರೆತ್ತರಕ್ಕೂ ಬೆಳೆದಿರುವ ಬಿದಿರ ಮೆಳೆಗಳು ತಮ್ಮ ಭವ್ಯತೆಯಲ್ಲಿಯೇ ತಲೆ ಎತ್ತಿ ಎದೆ ಉಬ್ಬಿಸಿ ನಿಂತಿದ್ದವು. ಈ ಬಿದಿರ ಮೇಳೆ ಸಸಿಯಾಗಿ ಮೊದಲ ಸಲ ಫಲವಿಸುವುದು ಕೂಡ 'ಏಕ್‌ದಂ' ಅಂತೆ. ಆ ಸಂದರ್ಭದಲ್ಲಿ ಆ ಮೆಳೆಯ ಮೇಲೆ ಯಾವುದೇ ಪದಾರ್ಥ ವ್ಯಕ್ತಿ ಇದ್ದರೂ ಸಟಕ್ಕನೇ ಟಿಸಿಲೊಡೆದು ಬಿಡುತ್ತದೆ ಎಂಬುದು ನೆನಪಾಗಿ ಆ ಬಿದಿರ ಕಾಡಿನಲ್ಲಿ ನಿಲ್ಲುವುದಕ್ಕೂ ಕೊಂಚ ಯೋಚಿಸುವಂತೆ ಆಯಿತು. ಡಾ|| ಕಾರಂತರು ತಮ್ಮ ಕಾದಂಬರಿಗಳಲ್ಲಿ ಈಗಾಗಲೇ ಚಿತ್ರಿಸಿರುವ ಕಾಡಿನ ನಿಶ್ಶಬ್ದ, ಅವುಗಳ ಸದ್ದು, ಆಗೊಮ್ಮೆ ಈಗೊಮ್ಮೆ ಕೇಳಿಬರುವ ಯಾವುದೋ ಪ್ರಾಣಿಯ ಅರಚುವಿಕೆ ಕೇಳಿಸುತ್ತಿತ್ತು. ಅಲ್ಲದೆ ನಾಲ್ಕಾರು ಹರದಾರಿಗೆ ಒಬ್ಬಿಬ್ಬರಂತೆ ರಸ್ತೆಗುಂಟ ಬಿರಬಿರನೆ ಹೆಜ್ಜೆಹಾಕಿ ಹೊರಟದ್ದೂ ಕಂಡೆವು. ಆದರೆ ಅವರ್‍ಯಾರೂ ಅವರಿಲ್ಲ-ಇವರಿಲ್ಲ, ಒಬ್ಬನೇ ಯಾರೂ ಇಲ್ಲದ ದಾರಿಯಲ್ಲಿ ಅದ್ಹೇಗೆ ಹೋಗಬೇಕು ಎಂದು ಕಾಯ್ದು ಹೊರಟವರಂತೆ ಕಾಣಲೇ ಇಲ್ಲ. ಒಂದಿಬ್ಬರನ್ನು ಈ ಬಗ್ಗೆ ವಿಚಾರಿಸಿದಾಗ ಅವರು ಅದೇನು ಅಷ್ಟು ಅಸಹಜ ಸಂಗತಿಯೇ ಅಲ್ಲ, ಎಂದು ಹೇಳಿ, ಆ ಕಾಡಿನ ದಾರಿಯನ್ನೇ ಸೀಳಿ ಹೊರಟವರಂತೆ (ಮಾರ್ಗ ಮಧ್ಯದಲ್ಲಿಯ) ದಾರಿಯನ್ನು ಹುಡುಕಿ ಹೊರಟೇಬಿಡುತ್ತಿದ್ದರು.

ಸುಳ್ಯಕ್ಕೆ ತಲುಪುತ್ತಿರುವಂತೆ ಮಡಿಕೇರಿ ಇನ್ನು ಕೇವಲ ೫೫ ಕಿ.ಮೀ. ಎಂದಾಗ ಮನಸ್ಸು ಮತ್ತಷ್ಟು ತವಕಗೊಂಡಿತು. ಆದರೆ ಸುಳ್ಯದ ಹೋಟೆಲ್ ಒಂದರಲ್ಲಿ ಚಹಾ ಕುಡಿಯಲು ಇಳಿದಾಗ ಆ ಅಂಗಡಿಯ ಮಾಲೀಕ ಅದ್ಯಾಕೋ ''ನೀವು ಮಡಿಕೇರಿಗೆ ಈ ಮಳೆಯಲ್ಲಿ ಹೋಗಿ, ಅಲ್ಲಿನ ಸಖತ್ ಚಳಿ ಅನುಭವಿಸಿ ಹೈರಾಣ ಆಗೋದಕ್ಕಿಂತ ಇಲ್ಲೇ ಇರೋದು ಒಳ್ಳೆಯದು'' ಎಂಬ ಸಲಹೆ ನೀಡಿದ. ಆದರೆ ಎಷ್ಟೇ ರಾತ್ರಿಯಾದರೂ ಸೈ ಇಂದು ಮಡಿಕೇರಿಯಲ್ಲಿಯೇ ವಾಸ್ತವ ಮಾಡಬೇಕೆಂಬ ನಮ್ಮ ನಿರ್ಧಾರ ಆತನ ಮಾತಿನಿಂದ ಬದಲಾಗಲಿಲ್ಲ. ಆದರೆ ನನ್ನೊಂದಿಗಿದ್ದ ನನ್ನ ಒಂದಿಬ್ಬರು ಗೆಳೆಯರು ಮಾತ್ರ ಮಡಿಕೇರಿ ಚಳಿಯ ಬಗ್ಗೆ ಏನೇನೋ ಕಲ್ಪಿಸಿಕೊಂಡು ಥಂಡಾ ಹೊಡೆದಿದ್ದರು. ಆದರೆ ಚಳಿಯೇ ಆಗಲಿ, ಮತ್ತಿತರ ಯಾವುದನ್ನೇ ಆಗಲಿ ಅದನ್ನು ಅನುಭವಿಸಬೇಕೆಂಬ ತುಡಿತ ನನ್ನೊಳಗೆ ಮಡುಗಟ್ಟಿತ್ತು. ವಾಹನ ಸಂಚಾರದ ದಟ್ಟತೆ ಇರದ ಆ ನಿಶಾಚರ ರಸ್ತೆಯಲ್ಲಿ ಹೊರಟವರು ಕೇವಲ ನಾವೇ ನಾವು ಮಾತ್ರ. ಅಲ್ಲಲ್ಲಿ ಜನ ಮಾತ್ರ ಛತ್ರಿಯನ್ನು ಹಿಡಿದು ಸುರಿವ ಮಳೆಯನ್ನು ಲೆಕ್ಕಿಸದೆ, ಆ ಕಾರ್ಗತ್ತಲನ್ನು ಸೀಳಿ ಬಿರಬಿರನೆ ಹೊರಟದ್ದು ನನಗೆ ಸೋಜಿಗವಾಗಿ ಕಂಡಿತು.



ಮಡಿಕೇರಿಯ ಅಬ್ಬೇ ಫಾಲ್ಸ್ ಜಲಪಾತ

ಬಹುಶಃ ರಾತ್ರಿ ಎಂಟು ಮೂವ್ವತ್ತರ ಸುಮಾರಿಗೆ ನಾವು ಮಡಿಕೇರಿ ನಗರವನ್ನು ಪ್ರವೇಶಿಸಿದೆವು. ಅದೊಂದು ಎತ್ತರದ ದಿಬ್ಬ. ಸಮುದ್ರಮಟ್ಟದಿಂದ ಸುಮಾರು ೪೦೦ ಅಡಿ ಎತ್ತರದ ಆ ದಿನ್ನೆಯ ಮೇಲೆ ಏರುತ್ತಿರುವಂತೆಯೇ ಇಡೀ ಪಟ್ಟಣ ಲೈಟ್‌ಗಳಿಂದ ಜಗಮಗಿಸುತ್ತಿದೆ. ಸುಯ್ಯನೆ ನೆಲಕ್ಕೆ ಸುರಿಯುತ್ತಲೇ ಇರುವ ಮಳೆ ಲೈಟಿನ ಬೆಳಕಿನಲ್ಲಿ ತನ್ನದೇ ಸೊಬಗನ್ನು ಸೃಷ್ಟಿಸುತ್ತಿದೆ. ವಾತಾವರಣವೆಲ್ಲ ಮಂಜು ಮುಸುಕಿ, ನಾವೆಲ್ಲ ಆಕಾಶಯಾನ ಮಾಡುತ್ತಿದ್ದೇವೇನೋ ಎಂಬ ಅನುಮಾನ ಉಂಟಾಗುವಂತೆ ಭಾಸವಾಯಿತು. ಆ ಮಳೆಯಾದರೂ ಎಂತಹುದಂತೀರಿ, ಮೈ ತೋಯದ ಆದರೆ ಮುಖ ಮನಸ್ಸಿಗೆಲ್ಲ ಅಮೃತ ಸಿಂಚನ ಗೈಯ್ಯುವ ಪ್ರಫುಲ್ಲ ಮಳೆ. ಫ್ಲಡ್‌ಲೈಟಿನ ಬೆಳಕಿನಲ್ಲಿ ಉಂಟಾದ ತುಂತುರು ಸಿಂಚನ ಆ ಕೆಂಪು ಬೆಳಕಿನ ಮೂಲಕ ಭೂಮಿಗೆ ಬೆಂಕಿಯ ಉಂಡೆಯನ್ನು ಉಣಬಡಿಸುತ್ತದೇನೋ ಎನ್ನುವ ಭಾವ. ವ್ಹಾ... ! ಇಂಥ ಸೃಷ್ಟಿ ಸೊಬಗು ಉಂಟುಮಾಡಿದ ಆ ಕಲಾವಿದ ಯಾರಿರಬೇಕು ?! ಎಂದು ನನ್ನೊಳಗಿನ ಭಾವ ಲೆಕ್ಕಹಾಕುತ್ತಿರುವಂತೆ ಎದುರಾದ 'ಲಾಡ್ಜ್' ನನ್ನ ಆಲೋಚನಾ ಲಹರಿಯನ್ನೇ ತುಂಡುಮಾಡಿತು.

ನಮ್ಮೂರಲ್ಲಾದರೆ ರಾತ್ರಿ ಯಾವಾಗ ಹಸಿವಾಗುತ್ತದೆ ಆವಾಗಲೇ ಎದ್ದು ಹೋಟೆಲ್‌ಗೆ ಹೊರಟರೆ ಊಟ-ತಿಂಡಿ ಸದಾ ರೆಡಿ. ಆದರೆ ಇಲ್ಲಿ ಕೇವಲ ೯ ಗಂಟೆಗೇ ಎಲ್ಲಾ ಅಂಗಡಿ ಮುಂಗಟ್ಟುಗಳು ಮುಚ್ಚಿದ್ದವು. ಅಘೋಷಿತ ಬಂದ್‌ನಿಂದ ಮಡಿಕೇರಿ ತಣ್ಣಗೆ ಮಲಗಿತ್ತು. ಟ್ಯಾಕ್ಸಿಸ್ಟ್ಯಾಂಡಿನ ಡ್ರೈವರ್‌ಗಳು ತಮ್ಮ ತಮ್ಮ ಗಾಡಿಗಳಲ್ಲೇ ಮಲಗಿ ಸುಖ ನಿದ್ರೆಗೆ ಆಗಲೇ ಜಾರಿಬಿಟ್ಟಿದ್ದರು. ಕಡುಗಪ್ಪುಬಣ್ಣದ ರಸ್ತೆಯ ಕನ್ಯೆ ಮಾತ್ರ ಹಗಲೆಲ್ಲ ಹೈರಾಣಾಗಿ ರಾತ್ರಿ ಆ ಆಯಾಸ ತಮಣಿ ಮಾಡಿಕೊಳ್ಳುವಂತೆ ಕಂಡುಬಂತು. ಈ ನಿರ್ಜನ ರಸ್ತೆಗಳೆಂದರೆ ನನಗೆ ಅದೇಕೋ ಪ್ರೀತಿ. ನನ್ನ ಕಾಲು ನೋಯುವವರೆಗೂ ನಡೆಯುತ್ತಲೇ ಇದ್ದೆ. ಮೈ ಮಳೆಯ ಮುಸಲಧಾರೆಯ ಅಮೃತಸಿಂಚನಕ್ಕೆ ಸಜ್ಜಾಗಿದ್ದರೆ, ಮನಸ್ಸು ಆ ಆಹ್ಲಾದಕರ ವಾತಾವರಣ ಅನುಭವಿಸುತ್ತಿತ್ತು. ಆ ರಾತ್ರಿ ಸಸ್ಯಾಹಾರದ ಊಟ ಸಿಗದೇ ಇದ್ದರೂ ನನಗೆ ಹಸಿವಿನ ವಾಂಛೆ ಮೂಡಲೇ ಇಲ್ಲ, ಯಾಕೆಂದರೆ ಮನಸ್ಸನ್ನೆಲ್ಲ ಆ ಪ್ರಕೃತಿ ಮಾತೆ ಆವರಿಸಿಕೊಂಡಿದ್ದಳು.

ಎಂದಿನಂತೆ ನಾನು ನಸುಕಿನ ಐದು ಗಂಟೆಗೆ ಎದ್ದಾಗ ಮಡಿಕೇರಿ ಮುಂಜಾನೆಯ ನಿದ್ದೆಯ ಮಬ್ಬಿನಲ್ಲಿಯೇ ಇತ್ತು. ಹೊರಗಿನ ವಾತಾವರಣ ಮಾತ್ರ ಕೊಂಚ ಚಳಿ ಆವರಿಸಿಕೊಂಡಿತ್ತು. ಲಾಡ್ಜ್‌ನಲ್ಲಿಯ ನೆಲಹಾಸುಗೆಯ ಬಂಡೆಗಳು ಕಾಲು ಇಟ್ಟರೆ ತಣ್ಣಗೆ ಕೊರೆಯುತ್ತಿದ್ದವು. ನನ್ನ ಗೆಳೆಯರು ಮಲಗುವಾಗ ಕಾಲು ಕೆಳಗೆ ಹಾಕಿಕೊಂಡಿದ್ದ ರಗ್ಗುಗಳು ಪೂರ್ತಿ ಅವರ ಮೈಗಳನ್ನು ಮೆತ್ತಿಕೊಂಡಿದ್ದವು. ಅದಾರೋ ಫ್ಯಾನ್‌ಗಳನ್ನು ಕಿಟಕಿಗಳನ್ನು ಪೂರ್ತಿ ಬಂದ್‌ಮಾಡಿ ಮಲಗಿದ್ದರು. ಮತ್ತೆ ಅವನ್ನೆಲ್ಲ ಸರಿಪಡಿಸಿ, ನನ್ನ ಎಂದಿನ ಪ್ರಾತರ್ವಿಧಿಗಳನ್ನು ಮುಗಿಸಿ ನನ್ನಷ್ಟಕ್ಕೆ ನಾನೇ ''ಸೊಬಗಿನ ಸೆರೆಮನೆಯಾಗಿಯೇ ನೀನು ಚಲುವೆ..., ಅದರಲಿ ಸಿಲುಕಿರೋ ಸೆರೆಯಾಳಾನು ನನ್ನದೆಯಾರತಿಯೆ...'' ಎಂದು ಗುನುಗುನಿಸುತ್ತಾ ಕುಳಿತೆ. ಪ್ರಾಕೃತಿಕ ಹಾಗೂ ಚಾರಿತ್ರಿಕ ಕಾರಣಗಳಿಗಾಗಿ ಈ ಕೊಡವರು ಪ್ರತ್ಯೇಕ ಕೊಡಗು ಕೇಳುವ ಸಂಗತಿ ನೆನಪಾಯಿತು. ಈ ಕೊಡವ ಜನಾಂಗ ಹಾಗೂ ಇಂಥ ಸುಂದರ ಪರಿಸರವನ್ನು ಕರ್ನಾಟಕ ಬಿಟ್ಟು ಕೊಡಬೇಕಾದ ಅಗತ್ಯವೇ ಇಲ್ಲ ಅನ್ನಿಸಿತು. ನನ್ನೆಲ್ಲ ಆಲೋಚನೆಗಳು ಕೇವಲ ಭಾವನಾತ್ಮಕವಾಗಿದ್ದವು. ಆದರೆ ಬೆಂಗಳೂರಿನ ಸೋಕಾಲ್ಡ್ ರಾಜಕಾರಣಿಗಳು ಈ ನೆಲಕ್ಕೆ ಬಗೆಯುತ್ತಿರುವ ದ್ರೋಹ ನಿಜಕ್ಕೂ ಅಸಹನೀಯವೆನಿಸಿತು. ಸರಕಾರ ತಾನು ನೀಡಬೇಕಾದ ಸವಲತ್ತುಗಳಿಂದ ವಂಚಿಸುತ್ತ ನಡೆದದ್ದು ಇಲ್ಲಿನ ಹೋರಾಟಗಾರರಿಗೆ ಪ್ರತ್ಯೇಕ ಕೊಡಗಿನ ಕೂಗು ಅನಿವಾರ್ಯವೆನಿಸಿರಬೇಕೇನೋ ಅನ್ನಿಸಿತು.

ಮಡಿಕೇರಿಗೆ ೪೨ ಕಿಲೋಮೀಟರ್ ಅಂತರದಲ್ಲಿರುವ ತಲಕಾವೇರಿಗೆ ಹೋಗಬೇಕಾದರೆ ದಾರಿಯುದ್ದಕ್ಕೂ ಸಿಗುವ ಆ ಕಾಫಿಯ, ಏಲಕ್ಕಿಯ, ಕರಿಮೆಣಸು, ಕಿತ್ತಳೆ ಹಾಗೂ ಜೇನು ಸಾಕಾಣಿಕೆಯ ಕೃಷಿಯನ್ನು ಕಣ್ತುಂಬ ನೋಡಲೇಬೇಕು. ಆ ಮಳೆಯಲ್ಲೂ ಬಿದಿರ ಬುಟ್ಟಿಗಳನ್ನು ತಲೆ ಮೈಮೇಲೆ ಹಾಕಿಕೊಂಡು ಚಹಾಗಿಡದ ತೊಪ್ಪಲನ್ನು ಬಿಡಿಸುವ ನೀರೆಯರೂ ಆ ಸೊಬಗನ್ನು ಇಮ್ಮಡಿಗೊಳಿಸಿದ್ದರು. ಪ್ರತಿಯೊಂದು ಎಸ್ಟೇಟಿಗೂ ಒಂದೊಂದು

ಕೊಡವರು ಭಾಷೆಯಿಂದ ಹೇಗೋ ಹಾಗೆ ಅವರು ತಮ್ಮದೇ ಆದ ಸಂಸ್ಕೃತಿಯಿಂದಲೂ ಭಿನ್ನರಾಗಿಯೇ ಕಾಣುತ್ತಾರೆ. ಈ ಕೊಡವರಲ್ಲಿಯೂ ಮಾಂಸಾಹಾರಿ ಸಸ್ಯಾಹಾರಿಗಳಿದ್ದಾರೆ. ಅಮ್ಮ ಕೊಡವ, ಹೆಗಡೆ ಕೊಡವ, ಮಲೆಯ ಕೊಡವ, ಐರಿ ಕೊಡವ, ಬಣ್ಣ ಕೊಡವ, ಕೆಂಬಟಿ ಕೊಡವ ಇತ್ಯಾದಿ ಜಾತಿಗಳಿವೆ. ಅವರವರ ಜಾತಿಗಳಲ್ಲೇ ಗಂಡು ಹೆಣ್ಣನ್ನು ಕೊಡು ತಕ್ಕೊಳ್ಳುವುದು ಮಾಡುತ್ತಾರೆ.

ಉತ್ತರ ಕರ್ನಾಟಕದ ಕಡೆ ಮಹಿಳೆಯರು ತಮ್ಮ ಸೀರೆಯ ಸೆರಗನ್ನು ತಲೆಯ ತುಂಬ ಹೊದ್ದುಕೊಂಡು, ನಿರಿಗೆಗಳನ್ನು ಕಾಲಲ್ಲಿ ಚಿಮ್ಮುತ್ತಾ ಬಂದರೆ ಅದರ ಸೊಗಸೆ ಸೊಗಸು. ಆದರೆ ಇಲ್ಲಿನ ಮಹಿಳೆಯರು ಸೀರೆಯನ್ನು ಎದೆಗೇರಿಸಿಕೊಂಡು ಉಟ್ಟುಕೊಂಡಿರುತ್ತಾರೆ. ನಿರಿಗೆಗಳು ಹಿಂಬದಿಗೆ ಬಂದಿರುತ್ತವೆ. ಇವರದೂ ಮತ್ತೊಂದು ಬಗೆಯ ಚೆಲುವು.

ವರದಕ್ಷಿಣೆ ಪಿಡುಗು ಇಲ್ಲಿಗೂ ಸಾಂಕ್ರಾಮಿಕ ರೋಗದಂತೆ. ಹಬ್ಬಿದೆಯಾದರೂ ಬೇರೆ ಭಾಗದಂತೆ ವರದಕ್ಷಿಣೆಗಾಗಿಯೇ ಹೆಣ್ಣಿನ ಜೀವನವನ್ನು ನುಂಗಿ ನೊಣೆಯುವ ಬರ್ಬರ ಕ್ರೌರ್ಯ ಇಲ್ಲಿಲ್ಲವೇನೋ ಅನ್ನಿಸುತ್ತದೆ. ಇಲ್ಲಿಯ ಜನ ತಮ್ಮ ಮಗಳಿಗೆ ಮಾತ್ರ ಏನೆಲ್ಲವನ್ನು ಕೊಡುತ್ತಾರೆ. ಆದರೆ ಅಳಿಯನಿಗಾಗಿ ಅಂತ ಪ್ರತ್ಯೇಕವಾಗಿ ಇಲ್ಲ. ಮದುವೆ ಆದ ಸಂಜೆ ಮಾತ್ರ ಹುಡುಗ ತನ್ನ ಪ್ರಸ್ತದ ದಿನ ಹುಡುಗಿಯ ಕೈ ಬೆರಳಿಗೆ ಒಂದು ಉಂಗುರವಿಡುವ ಶಾಸ್ತ್ರವಿದೆ.

ಎಲ್ಲಾ ಕಡೆಗಳಲ್ಲಿಯಂತೆ ಇಲ್ಲಿಯೂ ಪುರೋಹಿತರ ಉಪಟಳ ಸಾಕಷ್ಟಿರಬೇಕು ಎನ್ನಿಸಿ ಶ್ರೀಮತಿ ಶಾರದಾ ಹಾಗೂ ಆಕೆಯ ಸೊಸೆ ಶ್ರೀಮತಿ ದೀನಾ ಕಾರ್ಯಪ್ಪ ಅವರನ್ನು ಕೇಳಿದೆ. ಅವರು ಸ್ಪಷ್ಟವಾಗಿ ಹೇಳಿದರು. ನಮ್ಮ ಮನೆಯ ಸಂಭ್ರಮದ ಸಂದರ್ಭಗಳಲ್ಲಿ ಯಾವ ಪೂಜಾರಿ ಪುರೋಹಿತರೂ ಭಾಗವಹಿಸುವುದಿಲ್ಲ. ಉದಾಹರಣೆಗೆ ನೋಡಿ, ನಾನು ವಿಧವೆಯಾದರೂ ನನ್ನ ಮಗನ ಮದುವೆಯನ್ನು ನಾನೇ ಮುಂದೆ ನಿಂತು ನೆರವೇರಿಸಿದ್ದೇನೆ. ನಾವೇ ಹೆತ್ತು ಹೊತ್ತು ಬೆಳೆಸಿ, ಶುಭಕಾರ್ಯದ ಸಂದರ್ಭದಲ್ಲಿ ಮಾತ್ರ ಬೇರೆ ಇನ್ಯಾರಿಂದಲೋ ಆಶೀರ್ವಾದ ಪಡೆಯಬೇಕೆ? ಎಂದು ನನ್ನನ್ನೇ ಪ್ರಶ್ನಿಸಿದರು.

ಮದುವೆಯ ದಿನ ಜೋಜಕರ್ತಿ (ಹೆಣ್ಣಿನ ಜೊತೆಗಾತಿ) ಜೋಜಕಾರ (ಗಂಡಿನ ಜೊತೆಗಾರ)ರರೇ ಗಂಡು ಹೆಣ್ಣಿನ ಜೊತೆಗೆ ಮದುವೆಯಾಗುವವರೆಗೂ ಇದ್ದು ಅವರ ಬೇಕು ಬೇಡವೆಲ್ಲವಕ್ಕೂ ಸ್ಪಂದಿಸುತ್ತಾರೆ. ಆ ದಿನ ಬೆಳಿಗ್ಗೆ ೩ ಜನ ಅಥವಾ ೭ ಜನ ಕೂಡಿ ಮದುವಣಗಿತ್ತಿ, ಹಾಗೂ ಮದುಮಗನಿಗೆ ಸ್ನಾನ ಮಾಡಿಸುತ್ತಾರೆ. ಹುಡುಗಿಯನ್ನು ಹುಡುಗನ ಮನೆಯವರಿಗೆ ಒಪ್ಪಿಸಿದ ಮೇಲೆ ನೀರು ತರುತ್ತಾರೆ. ಅದಕ್ಕೂ ಮುಂಚೆ ಬಾವಿಯನ್ನು ಎಲೆ, ಅಡಿಕೆ, ಹೂಗಳಿಂದ ಅಲಂಕೃತಗೊಳಿಸಿರುತ್ತಾರೆ. ಹುಡುಗಿಯ ತಾಕತ್ತನ್ನು ಪರೀಕ್ಷಿಸಲು ಪೋಳಿ (ಅಕ್ಕಿ, ಬೆಲ್ಲ, ತೆಂಗಿನಕಾಯಿ, ಎಲೆ ಅಡಿಕೆ, ಹಾಲಿನ ಗಿಂಡಿ) ಹೊತ್ತುನಿಂತ ಅವಳನ್ನು ನಿಂತಲ್ಲಿಯೇ ನಿಲ್ಲಿಸಿ ೧ ರಿಂದ ೪ ತಾಸುಗಳವರೆಗೂ ಕುಣಿಯುತ್ತಾರೆ.

ಮತ್ತೊಂದು ವಿಶೇಷ ಸಂಗತಿಯೆಂದರೆ ಮದುವೆಯಾಗುವ ಹುಡುಗಿಯ ತಾಯಿಯೇ ಮದುವೆಗೆ ಮುನ್ನಾದಿನ ಹುಡುಗಿಗೆ ಪತ್ತಾಕ (ವಿಶೇಷ ಬಗೆಯ ಆಭರಣ) ಕಟ್ಟುತ್ತಾಳೆ. ಈ ಪತ್ತಾಕನ್ನು ಎಂದಿಗೂ ಗಂಡನಾಗುವವನು ಕಟ್ಟುವಂತಿಲ್ಲ. ಆತ ಮದುವೆಯ ದಿನವೂ ಕೂಡ ಹುಡುಗಿಗೆ ಹುಡುಗ, ಹುಡುಗನಿಗೆ ಹುಡುಗಿ ಹಾರ ಮಾತ್ರ ಹಾಕುತ್ತಾರೆ. ಆಶ್ಚರ್ಯವೆಂದರೆ ಈ ಮೂರ್ತಕ್ಕೆ ಬಂಧು ಬಳಗದವರೆಲ್ಲ ಇದ್ದರೂ ಪುರೋಹಿತರಿಗೆ ಮಾತ್ರ ಆಹ್ವಾನವಿರುವುದಿಲ್ಲ.

ಇಲ್ಲಿನ ಸಂಭ್ರಮದ ದಿನಗಳೆಂದರೆ ಕೈಲಮೂರ್ತ (ಆಯುಧಪೂಜೆ): ಇದು ಸೆಪ್ಟೆಂಬರ ೩ರಂದು ಪ್ರತಿವರ್ಷ ನೆರವೇರಿಸಲಾಗುತ್ತದೆ; ಡಿಸೆಂಬರ್ ತಿಂಗಳಲ್ಲಿ ಭರಪೂರ ಬೆಳೆಬಂದ ಮೇಲೆ ಹುತ್ತರಿ ಹಬ್ಬವನ್ನು ಆಚರಿಸುತ್ತಾರೆ. ಹೊಸಪೈರನ್ನು ಐನಮನೆ (ದೊಡ್ಡಮನೆ)ಗೆ ತಂದು ಪೂಜೆ ಮಾಡುವುದು. ಅಂದು ಹೊಸಅಕ್ಕಿ ಊಟ ಮಾಡುವುದು. ಅಲ್ಲದೆ ಅಂದು ದನ ಜಾನುವಾರುಗಳಿಗೂ ಅರಿಶಿಣ ಹಚ್ಚಿ ಅಕ್ಕಿ ಹುಡಿಯನ್ನು ಬೇಯಿಸಿ ಕೊಡೋದು. ಹೊಲಗದ್ದೆಗಳಲ್ಲಿ ಕೆಲಸ ಮಾಡುವಾಗ ಏನಾದರೂ ತಗುಲಿ ಗಾಯಗಳಾಗಿದ್ದರೆ ಮೈಯಲ್ಲಿಯ ನಂಜು ಹೋಗುತ್ತದೆ ಎಂಬ ಕಾರಣಕ್ಕೆ ಸರ್ವೇಸಾಮಾನ್ಯವಾಗಿ ಎಲ್ಲರೂ ಈ ಅಕ್ಕಿ ಹುಡಿಯನ್ನು ತಿನ್ನುತ್ತಾರೆ.

ಅಕ್ಟೋಬರ್ ೧೭ ಕೊಡವರ ಹೆಮ್ಮೆಯ ದಿನ. ಆ ದಿನ ಕಾವೇರಿಯ ತೀರ್ಥ ತಂದು ಪೂಜೆ ಮಾಡುತ್ತಾರೆ. ಸೌತೆಕಾಯಿಗೋ ಅಥವಾ ತೆಂಗಿನಕಾಯಿಗೋ ಸೀರೆ ಉಡಿಸಿ ತಮ್ಮ ಮನೆಯಲ್ಲಿಯ ತಾವೇ ಉಟ್ಟುಕೊಳ್ಳುವ ಚಿನ್ನಾಭರಣಗಳಿಂದ (ಕೊಕ್ಕೆತಾತಿ, ಜೋಮಾಲೆ, ಪತ್ತಾಕ) ಹಾಗೂ ಕಪ್ಪುಬಳೆ ಹಾಕಿ ಪೂಜೆ ಮಾಡುತ್ತಾರೆ. ಆ ದಿನ ವಿಶೇಷ ಬಗೆಯ ತಿಂಡಿ ತಿನಿಸುಗಳಾದ ಬಡವ ಕಜ್ಜಾಯ, ಅಕ್ಕಿ ರುಬ್ಬಿ ಮಾಡುವ ಚಿಕ್ಕಲು ಉಂಡೆಗಳನ್ನು ಮಾಡುತ್ತಾರೆ. ಜೊತೆಗೆ ಹೆಣ್ಣುಮಕ್ಕಳು ಉಮ್ಮತಾಟ್ ಮಾಡಿದರೆ, ಗಂಡುಮಕ್ಕಳು ಬೋಳಕಾಟ್, ಕೋಲಾಟಗಳೆಂಬ ಆಟಗಳನ್ನು ಸಾಮೂಹಿಕವಾಗಿ ಆಡಿ ಸಂಭ್ರಮಿಸುತ್ತಾರೆ.

ಆದರೆ ಈ ಕೊಡವ ಸಂಸ್ಕೃತಿಗೂ ಈಗೀಗ ಪಾಶ್ಚಿಮಾತ್ಯದ ರೋಗ ತಗುಲಿಕೊಂಡಿದೆ. ಹಾಗಾಗಿ ಇಂದಿನ ಯುವ ಜನಾಂಗ ತನ್ನ ಮೂಲ ಸಂಸ್ಕೃತಿಯನ್ನೇ ಮರೆತು ಪರಕೀಯವಾಗುತ್ತಿದೆ.



ಕೊಡವ ಸಾಂಪ್ರದಾಯಿಕ ಉಡುಪಿನಲ್ಲಿ ಕಾರ್ಯಪ್ಪ ಮತ್ತು ದೀನಾ ಕರಗುಂದಾ

ಮನೆ. ಆ ಮನೆ ಮನಾಕರ್ಷಕ, ಹೆಂಚುಗಳ ಹೊದಿಕೆ. ಹಸಿರ ಆಚ್ಛಾದಿತ ಪ್ರದೇಶದಲ್ಲೊಂದು ಹೆಂಚಿನ ಮನೆ ಆ ಸೊಬಗನ್ನು ಇಮ್ಮಡಿಗೊಳಿಸಿತ್ತು. ಶುದ್ಧ ಹವೆ, ರಮಣೀಯ ತಾಣ, ಹಚ್ಚಹಸಿರಿನ ಸೊಬಗು ನೋಡ ಸಿಗುತ್ತಿದ್ದರೆ ಬೇರೆ ಏನೆಲ್ಲ ಬೇಡ ಎನಿಸದಿರದು. ಸತತ ಮಳೆ ಸುರಿಯುತ್ತಿದ್ದರೂ ನಮ್ಮೂರಂತೆ ರಮರಾಡಿಯಾಗಿ ನಿಂತಿರುವ ಹೊಂಡಗಳಾಗಲಿ, ರಸ್ತೆಯಾಗಲಿ ನನಗೆ ಇದಿರಾಗಲಿಲ್ಲ. ಬಹುಶಃ ಮಳೆಯಂಥ ಮಳೆಯನ್ನೇ ನುಂಗಿ ನೊಣೆಯುವ ಶಕ್ತಿ ಈ ಧರೆಗೆ ದಯಪಾಲಿಸಿರಬೇಕೇನೋ ಅನ್ನಿಸಿತು. ಆದರೆ ಇಲ್ಲಿಯ ಪ್ರತಿಯೊಬ್ಬರೂ ಗರಮ್ ಜರ್ಕಿನ್ ಅಥವಾ ಸ್ವೆಟರ್ ಹಾಕಿ, ನೆತ್ತಿಯ ಮೇಲೆ ಕೊಡೆ ಹಿಡಿದು ಅಲ್ಲಲ್ಲಿ ಹೋಗುತ್ತಿದ್ದುದು, ನಿಂತದ್ದು ಸಾಮಾನ್ಯವಾಗಿತ್ತು. ಮಕ್ಕಳೂ ಆಯಾ ಶಾಲೆಗಳ ಸಮವಸ್ತ್ರಗಳ ಜೊತೆಗೆ ಅವರೇ ನಿರ್ಧರಿಸಿದ ಕಲರಿನ ಸ್ವೆಟರ್ ಹೊದಿಕೆ ಹಾಕಿದ್ದು, ಜೊತೆಗೊಂಡು ಪುಟ್ಟ ಛತ್ರಿ ಹಿಡಿದು ದಾರಿಯ ಇಕ್ಕೆಲಗಳಲ್ಲಿ ಹೊರಟದ್ದು ಮೋಹಕವಾಗಿತ್ತು. ಎಲ್ಲೆಲ್ಲೂ ಆಚ್ಛಾದಿತವಾದ ಹಸಿರು ಸಂದು-ಗೊಂದುಗಳನ್ನೂ ಬಿಡದೆ ಹಬ್ಬಿಕೊಂಡಿತ್ತು. ಎತ್ತರಕ್ಕೆ ಇರುವ ಬೆಟ್ಟ. ಆ ಬೆಟ್ಟ ಬರೀ ಮಣ್ಣಿನ ಗುಡ್ಡ. ಆ ಗುಡ್ಡಕ್ಕೆ ಹಸಿರ ಸೀರೆ ಮತ್ತು ರವಿಕೆಗಳ ಹೊದಿಕೆ. ಆ ವನದೇವತೆಯ ಮುಖ, ಮೈ, ಕಿವಿಯ, ಟೊಂಕದ ಸುತ್ತ ಹಬ್ಬಿದ್ದು ಬರೀ ಹಸಿರ ಒಡವೆ-ಓಲೆಗಳು. ಅಲ್ಲಲ್ಲಿ ಉಳಿದ ಜಾಗದಲ್ಲಿ ಗದ್ದೆಗಳಿವೆ. ಅವುಗಳಲ್ಲಿ ಅದೇ ಆಗ ತಾನೇ ಮೊಳಕೆ ಒಡೆದ ಸಸಿಗಳು ಅಲುಗಾಡಿದರೆ ಪುಟ್ಟ ಕಂದನ ಪರಿಶುಭ್ರನಗುವಿನಂತೆ ಭಾಸವಾಗುತ್ತಿತ್ತು. ಗಾಳಿ ಬೀಸಿದಾಗ, ಮಳೆ ಹುಯ್ದಾಗ ಉಂಟಾಗುವ ಸಂಚಲನಕ್ಕೆ ಅವು ಮೈಯೆಲ್ಲಾ ಕಿವಿಯಾಗಿ ಪ್ರತಿಸ್ಪಂದಿಸುತ್ತಿದ್ದವು.

ಈ ಹಸಿರ ಬನದ ಸೊಬಗಿನಲ್ಲಿ ಕೊಡಗಿನ ಸುಂದರಿಯರೂ ಅಲ್ಲಲ್ಲಿ ಕಾಣಸಿಗುತ್ತಿದ್ದರಾದರೂ ಅವರನ್ನು ದಾರಿಯಲ್ಲೇ ತರುಬಿ ನಿಲ್ಲಿಸಿ ಅವರ ಸಂಸ್ಕೃತಿ, ಉಡುಗೆ ತೊಡುಗೆಗಳ ಬಗ್ಗೆ ಕೇಳುವುದು ಅದ್ಯಾಕೋ ಸರಿ ಅನ್ನಿಸಲಿಲ್ಲ. ಹಾಗಾಗಿ ಕರಗುಂದಾ ಅಂಚೆಗೆ ಸೇರಿದ ಕೆ. ಶಾರದಾ ನಂಜಪ್ಪ ಎಂಬುವವರ ಮನೆಗೆ ನಾವಾಗಿಯೇ ಹೋಗಿ ವಿಚಾರಿಸಿದಾಗ ಆ ತಾಯಿ ಅಷ್ಟೇ ಆಪ್ಯಾಯಮಾನವಾಗಿ ನಮ್ಮನ್ನೆಲ್ಲ ಮನೆಗೆ ಕರೆದು ಬೇಸರ

ಮಾಡಿಕೊಳ್ಳದೆ ಕೊಡವರ ಪ್ರತ್ಯೇಕ ಸಾಂಸ್ಕೃತಿಕ ಸೊಬಗನ್ನು ವಿವರಿಸಿದರು. ಅದನ್ನು ಈ ಲೇಖನದ ಪ್ರತ್ಯೇಕ ಬಾಕ್ಸ್‌ನಲ್ಲಿ ಕೊಡಲಾಗಿದೆ.

ತಲಕಾವೇರಿ ಇನ್ನೂ ೧೦ ಕಿ.ಮೀ. ದೂರ ಇದೆ ಅನ್ನುವಾಗ ಎದುರಾಗುವುದು ಭಾಗಮಂಡಲ. ಇಲ್ಲಿನ ಭಗಂಡೇಶ್ವರ ದೇವರೂ ಪುರಾತನವಂತೆ. ಸ್ಕಾಂದ ಪುರಾಣದಲ್ಲಿ ಕಾವೇರಿ ನದಿ ಹುಟ್ಟುವಾಗ ತ್ರಿಮೂರ್ತಿಗಳಾದ ಬ್ರಹ್ಮ-ವಿಷ್ಣು-ಮಹೇಶ್ವರ ಎಂಬ ದೇವರು ಒಂದೆಡೆ ಕೂಡಿದ ಸ್ಥಳವಂತೆ ! ಇಡೀ ದೇವಾಲಯದ ಮೇಲ್ಛಾವಣಿ ತಾಮ್ರದ ತಗಡಿನಿಂದ ಆಚ್ಛಾದಿತವಾಗಿದೆ. ಪ್ರತಿವರ್ಷ ಅಕ್ಟೋಬರ್ ೧೭ರಿಂದ ನವೆಂಬರ್ ೧೭ರವರೆಗೆ ಕಾವೇರಿ ನದಿಯಲ್ಲಿ ಸ್ನಾನ ಮಾಡಿಬಂದು ಭಗಂಡೇಶ್ವರನ ದರ್ಶನ ಪಡೆದರೆ ಸುಖ ಸಮೃದ್ಧಿ ಲಭ್ಯವಾಗುತ್ತದೆ ಎಂಬ ನಂಬುಗೆ ಇಲ್ಲಿ ಬಲವಾಗಿದೆ. ಈ ದೇವಸ್ಥಾನಕ್ಕೆ ಹೆಚ್ಚಾಗಿ ನಡಕೊಳ್ಳುವವರು ಅಮ್ಮಕೊಡವರು. ಆದರೂ ಇಲ್ಲಿಯ ಪೂಜಾರಿಗಳು ಮಾತ್ರ ತಲತಲಾಂತರದಿಂದ ಬ್ರಾಹ್ಮಣರು ! ಈ ಪುರೋಹಿತರ ಕೈಯಲ್ಲಿ ಎಂಥವೇ ಕ್ಷೇತ್ರ ಸಿಕ್ಕರೂ ಅವಕ್ಕೆ ಇಲ್ಲಸಲ್ಲದ ಪುರಾಣೇತಿಹಾಸದ ಕತೆ ಕಟ್ಟಿ ಜನಮಾನಸದಲ್ಲಿ ಅವುಗಳನ್ನು ಬಿತ್ತಿ, ಅದರಿಂದ ಭರ್ಜರಿ ಫಸಲನ್ನೇ ಪಡೆಯುತ್ತಾ ಸುಖೋಪಜೀವನ ಸಾಗಿಸುತ್ತಿದ್ದಾರಲ್ಲ, ಯಾವ ಶ್ರಮವನ್ನೂ ವಹಿಸದೆ, ಎಂದು ನೆನಪಾಗಿ ಮೈ ಭಗ್ಗನೇ ಉರಿದಂತಾಯಿತು. ತಲಕಾವೇರಿಯ ಕಡೆ ಮುಖಮಾಡಿ ನಡೆದಾಗ ಪುರೋಹಿತಶಾಹಿಯ ನಾನಾ ಕ್ರೌರ್ಯದ ಮುಖಗಳು ಒಂದೊಂದೇ ನೆನಪಾಗುತ್ತಿರುವಂತೆ ವಿವೇಕಾನಂದರು ಹೇಳಿದ ''ಪುರೋಹಿತ, ಮುಲ್ಲಾ, ಪಾದ್ರಿಗಳು ಎಂದಿಗೂ ತಮ್ಮನ್ನು ತಾವು ತಿದ್ದಿಕೊಳ್ಳುವವರಲ್ಲ, ಇವರೆಲ್ಲ ಪ್ರಗತಿಯ ವಿರೋಧಿಗಳು. ಇವರನ್ನು ಈ ದೇಶದಿಂದಲೇ ಒದ್ದೋಡಿಸಿ'' ಎಂಬ ಮಾತು ನೆನಪಾಯಿತು. ಆದರೆ ತಮ್ಮ ಶಾಸ್ತ್ರಗಳೆಂಬ ಅಕ್ಟೋಪಸ್ ಹಿಡಿತದಲ್ಲಿ ಜನಮಾನಸವನ್ನು ಹಿಡಿದಿಟ್ಟಿರುವರಲ್ಲ, ಅದನ್ನು ಬಿಡಿಸುವ ಪರಿ ಹೇಗೆ ಎಂದಾಗ ನೆನಪಾದವರು, ಬಸವಾದಿ ಶರಣರು.

ಇಷ್ಟರಲ್ಲಾಗಲೇ ಭಾಗಮಂಡಲದಿಂದ ೩೭೦೦ ಅಡಿ ಎತ್ತರದ ಜಾಗದಲ್ಲಿ ಬಂದು ನಿಂತುಬಿಟ್ಟಿದ್ದೆವು. ಇಲ್ಲೊಂದು ವಿಹಂಗಮ ದೃಶ್ಯದ ತಾಣವಿದೆ. ಇಲ್ಲಿಂದ ಭಾಗಮಂಡಲ ಹಾಗೂ ಕಾಡಿನ ಒಳ ತಿರುವು ಮುರುವಾದ ರಸ್ತೆಗಳು ಹಾಗೂ ದಟ್ಟ ಕಾಡು ಕಣ್ಣಿಗೆ ಕಾಣುತ್ತದೆ. ಎತ್ತರಕ್ಕೆ ಏರುತ್ತ ಏರುತ್ತ ಹೋಗುತ್ತಿರುವಂತೆ ಸೂಸಿ ಬರುವ ತಂಗಾಳಿ, ಮನಸ್ಸಿಗೆ ಮುದ ನೀಡುತ್ತದೆ. ಆ ಎತ್ತರದಿಂದ ವೀಕ್ಷಿಸಿದರೆ ಆಳದ ಕಮರಿನ ಒಂದು ಮಗ್ಗುಲಿಗೆ ಒಂದೆರಡು ಮನೆಗಳು, ಸುತ್ತಲೂ ಆವರಿಸಿರುವ ಅಡಕೆ-ತೆಂಗಿನ ತೋಟಗಳು, ಕಾಣಸಿಗುತ್ತವೆ. ಹಸಿರ ಬಟ್ಟಲಲ್ಲಿ ಕೆಂಪು ಪದಾರ್ಥವನ್ನು ಕಂಡಂತೆ ಕಾಣುವ ಹೆಂಚಿನ ಮನೆಗಳು ಮನಮೋಹಕ. ಇಲ್ಲೂ ಅಪಾಯದ ತಿರುವುಗಳುಂಟು. ಸ್ವಲ್ಪವೇ ಮೈಮರೆತರೂ ಆಳದ ಹಸಿರ ಪ್ರಪಾತಕ್ಕೆ ನೇರ ಪ್ರಯಾಣ. ಈ ಹೇರ್‌ಪಿನ್ ಬೆಂಡ್‌ಗಳ ರಸ್ತೆಯನ್ನು ದಾಟುತ್ತಾ ಮುಂದೆ ಹೋಗುತ್ತಿರುವಂತೆ ಎದಿರಾಗುವುದೇ ತಲಕಾವೇರಿ. ಕಾವೇರಿಯ ಉಗಮ ಸ್ಥಾನ. ಇಲ್ಲೂ ನಾಲ್ಕೆಂಟು ಅಂಗಡಿ ಮುಂಗಟ್ಟುಗಳಿವೆ. ಕಾವೇರಮ್ಮನ ಐತಿಹಾಸಿಕತೆಯನ್ನು ಬಣ್ಣಿಸುವ ಕ್ಯಾಸೆಟ್‌ಗಳು, ನಾಮಫಲಕಗಳು, ಸ್ಟಿಕರ್‌ಗಳು ರಾರಾಜಿಸುತ್ತವೆ. ಇದರ ಜೊತೆ ಜೊತೆಗೆ ಆಯುರ್ವೇದಿಕ ಗಿಡಮೂಲಿಕೆಗಳು (?) ಮಾರಾಟಕ್ಕೆ ಇಡಲಾಗಿವೆ.

ಕಾವೇರಿ ಕನ್ನಡದ ಕೆಲವೇ ಜೀವನದಿಗಳಲ್ಲಿ ಒಬ್ಬಳು. ಆಕೆ ಇಲ್ಲಿಂದ ಮುಂದೆ ಸಾಗಿದಂತೆಲ್ಲ ಭೋರ್ಗರೆಯುತ್ತ ಸಾಗುವ ಕಾವೇರಮ್ಮ ಇಲ್ಲಿ ಪ್ರಶಾಂತಳೂ, ಸೌಮ್ಯಳೂ ಆಗಿ ಕಾಣುತ್ತಾಳೆ. ಈಕೆಯ ಉಗಮ ಸ್ಥಾನವನ್ನು ಇಲ್ಲಿನ ಪುರೋಹಿತರು ಬ್ರಹ್ಮಕುಂಡಿಕೆ ಎಂತಲೂ ಮುಂದಿನ ಭಾಗವನ್ನು ಕಲ್ಯಾಣಿ ಎಂತಲೂ ಕರೆಯುತ್ತಾರೆ. ಕಲ್ಯಾಣಿಯಲ್ಲಿ ಸ್ನಾನಮಾಡಿ ಹಾಗೇ ಅದೇ ನೀರಲ್ಲಿ ಮುಂದೆ ಬಂದು ನಿಂತರೆ ಬ್ರಹ್ಮಕುಂಡಿಕೆಯ ಹತ್ತಿರ ಬಂದು ನಿಲ್ಲುತ್ತಾರೆ. ಹಾಗೆ ಮೈ ತೊಳೆದುಕೊಂಡು ಬಂದವರಿಗೆ ಮಾತ್ರ ಬ್ರಹ್ಮ ಕುಂಡಿಕೆಯಲ್ಲಿಯ ನೀರು (ತೀರ್ಥ) ಸಿಗುತ್ತದಂತೆ. ಮೈ ತೊಳೆಯದೇ ಹಾಗೆ ಬಂದವರಿಗೆ ಬ್ರಹ್ಮಕುಂಡಿಕೆಯ ನೀರು ಸಿಗುವುದಿಲ್ಲ ಹಾಗಂತ ಅಲ್ಲಿಗೆ ಅಮರಿಕೊಂಡಿರುವ ಪೂಜಾರಿಯೊಬ್ಬ ಹೇಳುತ್ತಲೇ ಇದ್ದ. ಆತನ ವ್ಯಾಪಾರ ಮುಂಗಾರು ಮಳೆಯ ಈ ದಿನಗಳಲ್ಲೂ ಭರ್ಜರಿಯಾಗಿಯೇ ನಡೆದಿತ್ತು. ಕಾವೇರಮ್ಮನ ಮಡಿಲಲ್ಲಿ ಮುಳುಗಿ ''ನಮ್ಮ ಹಿಂದಿನ ಮುಂದಿನ ಪಾಪಗಳೆಲ್ಲ ತೊಳೆದುಹೋದವೇನೋ'' ಎಂಬ ಭ್ರಮೆಯಲ್ಲಿ ದೈನ್ಯರಾಗಿ ನಿಂತ ಜನಗಳು ಪೂಜಾರಿಯ ಕೈಯಿಂದ ತೀರ್ಥ ಪಡೆದದ್ದೇ ಪಡೆದದ್ದು. ನೀರಲ್ಲಿ ಮುಳುಮುಳುಗಿ ಏಳುವವರಲ್ಲಿ ಹದಿಹರೆಯದ ಹುಡುಗ/ಹುಡುಗಿಯರಿಂದ ಮುಪ್ಪಾನುಮುಪ್ಪಾದ ಮುದುಕರದೂ ಸಾಲಿತ್ತು. ಪೂಜಾರಿ ಮಾತ್ರ ಇಲ್ಲಿಯ ನೀರಲ್ಲಿ ಮಿಂದು ಬಂದ ಹದಿಹರೆಯದ ಹುಡುಗಿಯರತ್ತ ತನ್ನ ಕಳ್ಳನೋಟ ಬೀರುತ್ತಲೇ ಇದ್ದ. ಆತನ ಕಳ್ಳನೋಟ ಪತ್ತೆಹಚ್ಚಿ ಆತನ ಮುಖವನ್ನು ನಾನು ದಿಟ್ಟಿಸುತ್ತಿರುವಂತೆ ಆತನ ಮುಖ ಹುಳ್ಳುಳ್ಳಗೆ ಆಯ್ತು. ಕಾವೇರಮ್ಮನ ಮಡಿಲಲ್ಲಿ ಮಿಂದು ಬಂದರೆ ಜನ್ಮವೇ ಸಾರ್ಥಕವಾಯಿತು ಎಂಬ ಭ್ರಮೆಯಲ್ಲಿರುವ ಈ ಜನಗಳಿಗೆ ಬಸವಣ್ಣನವರು ಹೇಳಿದ

*ನೀರನು ಕಂಡಲ್ಲಿ ಮುಳುಗುವರಯ್ಯಾ*
*ಮರವನು ಕಂಡಲ್ಲಿ ಸುತ್ತುವರಯ್ಯಾ*
*ಬತ್ತುವ ಜಲವ, ಒಣಗುವ ಮರವ*
*ನಂಬಿದವರು ನಿಮ್ಮನೆತ್ತ ಬಲ್ಲರು ಕೂಡಲಸಂಗಮದೇವ*

ಎಂಬ ವಚನ ನೆನಪು ಮಾಡುವ ಬಗೆಯಾದರೂ ಹೇಗೆ ?

*ತೊರೆಯ ಮೀವ ಸ್ವಾಮಿಗಳಿರಾ,*
*ತೊರೆಯ ಮೀವ ಅಣ್ಣಗಳಿರಾ*
*ತೊರೆಯಿಂಭೋ ಪರಸತಿಯರ ಸಂಗವ*
*ತೊರೆಯಿಂಭೋ ಪರಧನದಾಮಿಷವ*
*ಇವತೊರೆಯದೆ ಬರಿ ತೊರೆ ಮಿಂದರೆ*
*ಕೂಡಿಕೊಳ್ಳ ನಮ್ಮ ಕೂಡಲಸಂಗಮದೇವ*

ಎಂಬ ವೈಚಾರಿಕ ಹಾಗೂ ಸತ್ಯಪ್ರತಿಪಾದನೆ ಮಾಡುವ ಮಾತುಗಳನ್ನು ತಲುಪಿಸುವುದೆಂತು ? ಹಾಡೇ ಹಗಲಲ್ಲೂ ಜನತೆಯ ತಲೆಗೆ ಮಂಕು ಬೂದಿಯನ್ನು ಚೆಲ್ಲಿ ಅವರಿಂದ ಏನೆಲ್ಲವನ್ನೂ ಸುಲಿಗೆ ಮಾಡುವುದನ್ನು ಇವರಿಗೆ ಹಾಕಿಕೊಟ್ಟವರು ಯಾರು ? ಎಂದೆಲ್ಲ ಆಲೋಚನೆಗಳು ಬಂದವು.

ಈ ತಲಕಾವೇರಿಯ ಮೇಲ್ಗಡೆ 'ಬ್ರಹ್ಮಗಿರಿ'ಯ ಬೆಟ್ಟವಿದೆ. ಈ ಬೆಟ್ಟಕ್ಕೆ ಸುಮಾರು ೫೦೦ಕ್ಕೂ ಮೇಲ್ಪಟ್ಟು ಮೆಟ್ಟಿಲುಗಳಿವೆ. ಈ ಮೆಟ್ಟಿಲು ಹತ್ತಿ ಹೋಗಿ ಅಲ್ಲಿ ವಿಹಂಗಮ ದೃಶ್ಯ ಸವಿಯುವ ಸೊಬಗೂ ಇನ್ನೂ ಮನನೀಯ. 'ಧೋ' ಎಂದು ಸುರಿಯುತ್ತಿರುವ ಮಳೆಯಲ್ಲಿ ನೆನೆಯುತ್ತಲೇ ಈ ಬೆಟ್ಟದ ತುದಿಗೆ ಬಂದು ನಿಂತಾಗ ಕಡುಗಪ್ಪಿನ ಮೋಡಗಳು ಅಕ್ಷರಶಃ ನಮ್ಮ ಸುತ್ತಲೇ ಗಿರಕಿ ಹೊಡೆಯುತ್ತಿದ್ದವು. ಸುಯ್ ಎಂದು ಬೀಸುವ ಗಾಳಿಯ ವೇಗಕ್ಕೆ ತಕ್ಕಂತೆ ನರ್ತಿಸುತ್ತಿರುವ ಮೋಡಗಳ ಚೆಲ್ಲಾಟ ಮೋಹಕ. ಇಲ್ಲಿಯ ಮಳೆಯೇ ವಿಚಿತ್ರ. ಖಚಿತವಾಗಿ ನಂಬುವಂತೆಯೇ ಇಲ್ಲ, ಇನ್ನು ಬಿಟ್ಟುಬಿಡದೆ ಮಳೆ ಸುರಿಯುತ್ತದೆ ಎಂದಾಗ ಮತ್ತೆ ಥಟ್ಟನೆ ಸೆಟಗೊಂಡುಬಿಡುವ ಗೆಳತಿಯಂತೆ ದೂರ ಸರಿದುಹೋಗುತ್ತದೆ. ಇನ್ನೇನು ಮಳೆ ಮುನಿಸಿ ಕೊಂಡಳು ಎಂದು ತಿಳಿಯುತ್ತಿರುವಂತೆ ಹಿಂದಿನಿಂದ ಬಂದು ಅಪ್ಪಿಕೊಳ್ಳುತ್ತಾಳೆ.

ಇಲ್ಲಿಂದ ನೇರವಾಗಿ ಹಿಂದಿನ ಜಾಡು ಹಿಡಿದು ಬಂದು ನಿಂತದ್ದು ಮಡಿಕೇರಿಗೆ. ಇಲ್ಲಿಗೆ ಕೇವಲ ೮ ಕಿ.ಮೀ. ಅಂತರದಲ್ಲಿಯ ಅಬ್ಬೆ ಫಾಲ್ಸ್ ನೋಡಲೇಬೇಕಾದ ಸ್ಥಳಗಳಲ್ಲಿ ಒಂದು. ಕೊಡವ ಭಾಷೆಯಲ್ಲಿ ಅಬ್ಬಿ ಎಂದರೆ ಜಲಾಶಯವೆಂದು ಅರ್ಥ. ಮಡಿಕೇರಿಯ ಪ್ರಥಮ ಪಾದ್ರಿಯ ಮಗಳ ನೆನಪಿಗೆ 'ಜಸ್ಸಿ ಜಲಪಾತ'ವೆಂದು ಹೆಸರಿಸಿದ್ದರು. ಆದರೆ ಇದನ್ನು ಈಗಲೂ 'ಅಬ್ಬಿ ಫಾಲ್ಸ್' ಎಂದೇ ಕರೆಯುತ್ತಾರೆ. ೨೧.೩ ಮೀಟರ್ ಎತ್ತರದಿಂದ ಧುಮ್ಮಿಕ್ಕುವ ಜಲಪಾತದ ಎದುರಿನ ತೂಗು ಸೇತುವೆಯ ಮೇಲೆ ಹೋಗಿ ನಿಂತರೆ ನೀರಿನ ಅಬ್ಬರ ಜೊತೆಗೆ ಆ ಜಲಪಾತ ನೆಲಕ್ಕೆ ಬೀಳುವಾಗ ಉಂಟಾಗುವ ಸೀರ್ಪನಿಯ ಸಿಂಪಡಿಕೆ ಅದನ್ನು ಅನುಭವಿಸಿಯೇ ಅರಿಯಬೇಕು. ಎತ್ತರದ ಜಾಗದಿಂದ ಕೆಳಕ್ಕೆ ಧುಮ್ಮಿಕ್ಕುವಾಗ ಉಂಟಾಗುವ ನೀರಿನ ಸಪ್ಪಳ, ಸುತ್ತಮುತ್ತೆಲ್ಲ ಇರುವ ಗಿಡಗಂಟೆಗಳಿಂದ ಆವೃತವಾದ ಕಾಡು ಅದಕ್ಕೊಂದು ಸುಂದರ ಭೂಮಿಕೆಯನ್ನು ಒದಗಿಸಿವೆ.

ಸೊಬಗಿನ ಈ ಐಸಿರಿಯನ್ನು ಕಣ್ತುಂಬ ತುಂಬಿಕೊಳ್ಳುತ್ತಿರುವಂತೆಯೇ ನನಗೆ ಮತ್ತೆ ಮತ್ತೆ ನೆನಪಾದುದು, ''ಕಂಗಳು ತುಂಬಿದ ಬಳಿಕ ನೋಡಲಿಲ್ಲ... ಮನ ತುಂಬಿದ ಬಳಿಕ ನೆನೆಯಲಿಲ್ಲ'' ಎಂಬ ಅಣ್ಣ ಬಸವಣ್ಣನವರ ವಚನ. ಬಹುಶಃ ಮುಂದಿನ ಜನ್ಮವೇನಾದರೂ ಇದ್ದರೆ ಆ ಪಂಪ ಬನವಾಸಿಯನ್ನು ಬಯಸಿದಂತೆ ನನಗೆ ಈ ಹಸಿರ ಐಸಿರಿಯಲ್ಲಿಯೇ ಹುಟ್ಟಿಸು ಮಾರಾಯಾ ಎಂದು ದೈನ್ಯತೆಯಿಂದ ಕೇಳಿಕೊಳ್ಳುತ್ತಿದ್ದೆ, ನನ್ನಷ್ಟಕ್ಕೆ ನಾನೆ.

ವಿಶ್ವಾರಾಧ್ಯ ಸತ್ಯಂಪೇಟೆ
'ಬಸವಮಾರ್ಗ' ಪತ್ರಿಕೆ, ಶಹಾಪುರ - ೫೮೫ ೨೨೩

# ಹಂದಿಸಾಕಣೆ ಇವರ ಬದುಕು



ಊರಿನಿಂದಾಚೆ ಹೊಲಗಳ ಮಧ್ಯೆ ಒಂದು ಪ್ರತ್ಯೇಕ ಹೆಂಚಿನ ಮನೆ. ಅದರ ಪಕ್ಕದಲ್ಲಿ ಮತ್ತೊಂದು ಹುಲ್ಲು ಮನೆ. ಮನೆಯ ಮುಂದುಗಡೆ ಒಂದೆರಡು ತೆಂಗಿನ ಮರಗಳು. ಹಿಂಧುಗಡೆ ಸಣ್ಣ ಹಿತ್ತಿಲು, ಹುಲ್ಲುಮೆದೆ. ಹೆಂಚಿನ ಮನೆಯೊಳಗಿಂದ ರೇಡಿಯೋ ಹಾಡಿನ ದನಿ.

ಮನೆಗೆ ಹೊಂದಿಕೊಂಡಂತೆ ಹಂದಿಗಳ ಕೂಡು ದೊಡ್ಡಿ. ಅದಾಗ ಹೊರಬಂದಿದ್ದ ಹಂದಿಗಳು ಗುಟುರು ಗುಡುತ್ತ, ನೆಲದ ಮೇಲೆ ಸಿಕ್ಕಬಹುದಾದ ಮೇವಿಗಾಗಿ ಸಿಕ್ಕಿದ ಕಡೆ ಮೂತಿ ತೂರಿಸುತ್ತಿದ್ದವು. ಕೊಬ್ಬಿದ ಸಲಗಗಳು ಗುದ್ದಾಡಿಕೊಂಡು ಕಿರಿಚುತ್ತಿದ್ದವು. ಹೆಣ್ಣುಹಂದಿಗಳ ಹಿಂದೆ ಮರಿಗಳ ಹಿಂಡು. ಮನೆಯವರು ನೀಡಲಿದ್ದ ಹಿಂಡಿ ಮೇವು ಹಾಗೂ ಕಲಗಚ್ಚಿಗಾಗಿ ಮತ್ತೆ ಮತ್ತೆ ಮನೆ ಬಾಗಿಲಿನ ಮುಂದೆ ಮುಕುರುತ್ತಿದ್ದವು. ಮನೆಯವರು ಅವನ್ನು ಗದ್ದರಿಸಿದಾಗ ಬೆದರಿ ಹಿಂದೆ ಸರಿದರೂ ಅವುಗಳ ಕಣ್ಣು ಒಡತಿ ನೀಡಲಿದ್ದ ತಿಂಡಿಯ ಕಡೆಗೇ !

ಈ ಗದ್ದಲದ ಮಧ್ಯೆ ಏಳೆಂಟು ವರ್ಷದ ಹುಡುಗಿ ಅವ್ವನ ಕೈಯಲ್ಲಿ ತಲೆಕೂದಲು ಬಾಚಿಸಿಕೊಂಡು ಶಾಲೆಗೆ ಹೋಗಲು ತಯಾರಾಗುತ್ತಿದ್ದಳು.

ರಾಮಂದೂರು ಕೆರೆಗೆ ಪ್ರತಿವರ್ಷ ಬರುವ ವಲಸೆ ಹಕ್ಕಿಗಳನ್ನು ನೋಡಲು ಹೊರಟಿದ್ದಾಗ ಕಾಣಿಸಿದ್ದು ಮೇಲಿನ ದೃಶ್ಯ.

ಆ ಮನೆಯ ಯಜಮಾನ ವೆಂಕಟಯ್ಯನವರಿಗೆ ನನ್ನ ಪರಿಚಯ ಹೇಳಿಕೊಂಡು, ಅವರ ಬದುಕಿನ ಬಗ್ಗೆ ತಿಳಿದುಕೊಳ್ಳುವ ಕುತೂಹಲ ತೋರಿಸಿದೆ.

''ಅಯ್ಯೋ ತೆಗೀರಿ ಸ್ವಾಮಿ, ನಮ್ಮ ಪಾಡು ನಮಗೆ, ಅದನ್ನು ಕಟ್ಟಿಕೊಂಡು ನಿಮಗೇನಾಗಬೇಕು ?'' ಎಂದು ಅವರು ನನ್ನ ಕುತೂಹಲಕ್ಕೆ ತಣ್ಣೀರು ಸುರಿಯಲಿಲ್ಲ. ಹುಲ್ಲು ಹೊರೆಯ ಮೇಲೆ ಕುಳಿತು ತಮ್ಮ ಬಗ್ಗೆ ಹೇಳಿದರು.

ಸುಮಾರು ನೂರೈವತ್ತು ವರ್ಷಗಳ ಹಿಂದೆ ಇವರ ಮುತ್ತಾತ ನೇರಲಕೆರೆಯಿಂದ ಈ ಊರಿಗೆ ಬಂದು ಊರ ಹೊರಗೆ ಒಂಟಿ ಗುಡಿಸಿಲು ಹಾಕಿಕೊಂಡು ನೆಲೆನಿಂತ. ಹಂದಿ ಸಾಕುವುದೇ ಅವರ ಮುಖ್ಯ ಕಸುಬು. ಹಾಗಾಗಿ 'ಹಂದಿ ಜೋಗಿಗಳು' – ಎಂದೇ ಪರಿಚಿತರು. ಈಗ ಮೂರು ತಲೆಮಾರಿನಿಂದಲೂ ಅಲ್ಲಿ ವಾಸವಾಗಿರುವ ಅವರು ಹಂದಿಸಾಕಣೆ ಜೊತೆಗೆ ಮನೆಗೆ ಹೊಂದಿಕೊಂಡಂತೆಯೇ ಸ್ವಲ್ಪ ಭೂಮಿ ಖರೀದಿಸಿ ಇತರ ರೈತರಂತೆ ವ್ಯವಸಾಯ ಮಾಡಿ ಮನೆಗೆ ಬೇಕಾದ ದವಸ ಧಾನ್ಯ, ಕಾಳುಕಡ್ಡಿ ಬೆಳೆದುಕೊಳ್ಳುತ್ತಾರೆ. ವೆಂಕಟಯ್ಯ ಮೂರನೇ ತಲೆಮಾರಿನ ಹಿರಿಯ. ಇವರಿಗೂ ಮಕ್ಕಳು, ಮೊಮ್ಮಕ್ಕಳು ಇದ್ದಾರೆ.

ಹಂದಿ ಜೋಗಿಗಳು ಮಂಡ್ಯ, ಮೈಸೂರು ಹಾಗೂ ಚಾಮರಾಜನಗರ ಜಿಲ್ಲೆಗಳಲ್ಲಿ ಹಂಚಿಹೋಗಿದ್ದಾರೆ. ಇವರ ಹಾಗೆಯೇ ಊರಿಗೊಂದು ಅಥವಾ ಎರಡು ಕುಳಗಳು ಚಾಮರಾಜನಗರದಲ್ಲಿ ಹೆಚ್ಚು ಸಂಖ್ಯೆಯಲ್ಲಿದ್ದಾರೆ.

ಊರ ಹೊಲಸನ್ನು ಸ್ವಚ್ಛಗೊಳಿಸುವ ಪ್ರಾಣಿ ಹಂದಿ. ಇತರ ಜಾನುವಾರುಗಳನ್ನು ಸಾಕುವ ಜನರಿಗಿರುವ ಮರ್ಯಾದೆ, ಮಾನ್ಯತೆ ಹಂದಿ ಸಾಕುವವರಿಗಿಲ್ಲ. ನಮ್ಮ ಮಹಾವಿಷ್ಣು ವರಾಹ ಅವತಾರ ತಾಳಿದ್ದಿರಬಹುದು! ಆದರೇನು ಅದು ಪುರಾಣಕ್ಕಾಯಿತು! ಸುತ್ತಲಿನ ಊರುಗಳ ಜನರೊಂದಿಗೆ ಯಾವುದೇ ರೀತಿಯ ಹೊಕ್ಕು ಬಳಕೆ ಇವರಿಗಿಲ್ಲ. ಮನುಷ್ಯ ಮನುಷ್ಯರ ಮಧ್ಯೆ ಇರುವ ಪರಿಚಯ ಮಾತ್ರ. ನೂರೈವತ್ತು ವರ್ಷಗಳ ಈ ಪ್ರತ್ಯೇಕತೆಯನ್ನು ಅವರು ಒಂದು ಕೊರತೆಯೆಂದು ಭಾವಿಸುವುದಿಲ್ಲ. ಯಾವುದೋ ಜನ್ಮದ ಪಾಪವೆಂದು ಕುಗ್ಗುವುದಿಲ್ಲ. ಹಂದಿ ಸಾಕಣೆ ಪರಂಪರೆಯ ಕಸುಬಾದ್ದರಿಂದ ಈ ಪ್ರತ್ಯೇಕತೆ ಒಂದು ಸಹಜ ಕ್ರಿಯೆಯೆಂದೇ ಸ್ವೀಕರಿಸಿದ್ದಾರೆ.



ಪ್ರತಿದಿನ ಹಂದಿ ಹಿಂಡನ್ನು ಮೇಯಿಸಲು ಹೋಗುವುದು ಮುಖ್ಯ ಕೆಲಸ. ಅವು ಅಷ್ಟು ದೂರ ತಿರುಗಾಡಿ ಸಿಕ್ಕಿದ್ದನ್ನು ಮುಕ್ಕಿ, ಕೆಸರಿನಲ್ಲಿ ಹೊರಳಾಡಿ ಬಂದರೆ ಅವುಗಳಿಗೆ ಲವಲವಿಕೆ. ಹಂದಿ ಮೇಯಿಸಲು ಮನೆಯ ಗಂಡಸರು, ಹೆಂಗಸರು, ಕೆಲವು ಸಂದರ್ಭಗಳಲ್ಲಿ ಮಕ್ಕಳು – ಎಲ್ಲರೂ ಸಹಕರಿಸುತ್ತಾರೆ. ಹಗಲಿಡೀ ಅವನ್ನು ಬಹಳ ಎಚ್ಚರಿಕೆಯಿಂದ ಕಾಯಬೇಕಾಗುತ್ತದೆ. ಅವು ಇತರರ ಹೊಲ, ತೋಟಗಳಿಗೆ ನುಗ್ಗಿ ಫಸಲನ್ನು ಹಾನಿಮಾಡದಂತೆ ಬಹಳ ಎಚ್ಚರದಿಂದ ಕಾಯಬೇಕು. ಒಂದು ಕ್ಷಣ ಎಚ್ಚರ ತಪ್ಪಿದರೂ ಇತರ ರೈತರ ಕೋಪಕ್ಕೆ ಗುರಿಯಾಗಬೇಕಾಗುತ್ತದೆ.

ಮನೆಯಲ್ಲಿ ತೆಲುಗು ಮಾತಾಡುತ್ತಾರೆ. ಬಳಕೆಯಲ್ಲಿರುವ ತೆಲುಗಿಗೂ ಇವರ ತೆಲುಗಿಗೂ ಬಹಳ ವ್ಯತ್ಯಾಸವಿದೆ. ಆಂಧ್ರದಿಂದ ವಲಸೆ ಬಂದವರಿರಬಹುದೆ – ಎಂದರೆ, ''ಬಿಡೀ ಸ್ವಾಮಿ ನಮ್ ತಾತ ಬಂದದ್ದು ನೇರಲಕೆರೆಯಿಂದ. ಅದೆಲ್ಲಾಯ್ತು, ಆಂಧ್ರ ಎಲ್ಲಾಯ್ತು ?'' ಎನ್ನುತ್ತಾರೆ.

ಇವರು ಸಾಕುವ ಹಂದಿಗಳಿಗೆ ೫೦೦ರಿಂದ ೧೫೦೦ರವರೆಗೆ ಬೆಲೆ ಬರುತ್ತದೆ. ಹಬ್ಬದ ದಿನಗಳಲ್ಲಿ ಸುತ್ತಲ ಊರಿನವರು ಹಂದಿ ಖರೀದಿಸಿ ಒಯ್ಯುತ್ತಾರೆ. ಮನೆಯ ಇನ್ನಿತರ ಎಲ್ಲ ಖರ್ಚುಗಳು, ಹಬ್ಬ ಹರಿದಿನ, ಬಟ್ಟೆಬರೆ – ಎಲ್ಲ ಈ ಹಣದಿಂದಲೇ ಆಗಬೇಕು.

ಮತ್ತೊಂದು ಆಶ್ಚರ್ಯದ ವಿಷಯವೆಂದರೆ ಇವರು ಹಂದಿಗಳನ್ನು ಸಾಕಿ ತಿನ್ನುವವರಿಗೆ ಮಾರಾಟ ಮಾಡುತ್ತಾರೆ, ಹಂದಿಮಾಂಸ ತಿನ್ನುವವರಲ್ಲ!

ಸಾಮಾನ್ಯವಾಗಿ ಈಗ ಹಳ್ಳಿಗಳಲ್ಲಿ ಸರಕಾರದ ಸಬ್ಸಿಡಿಗೆಂದೇ ಬಾಯ್ತೆರೆದು ಕಾಯುತ್ತ ಕುಳಿತುಕೊಳ್ಳುವ ಜನರು ಹೆಚ್ಚುತ್ತಿದ್ದಾರೆ. ಇದಕ್ಕೆ ವಿರುದ್ಧವಾಗಿ, ವೆಂಕಟಯ್ಯ ಸರಕಾರದ ಯಾವುದೇ ಸವಲತ್ತನ್ನು ಅನುಮಾನದಿಂದಲೇ ನೋಡುತ್ತಾರೆ. 'ಸಾಲ ಸವಲತ್ತು ಅಂತ ಒಂದ್ಸಲ ಕೈಯಾಕಿದ್ರೆ ಮುಂದೆ ಏನೇನಾಗುತ್ತೋ !' ಎಂಬ ಮುಗ್ಧ ಅನುಮಾನ.

ಈ ಮನೆಯ ಮಗ ರಾಜಣ್ಣ ಹೈಸ್ಕೂಲು ಶಿಕ್ಷಣ ಮುಗಿಸಿದ್ದಾನೆ. ಆದರೆ ಕೆಲಸಕ್ಕೆಂದು ಸರಕಾರದ ಕಡೆ ನೋಡಲಿಲ್ಲ. ಒಂದು ಬಟ್ಟೆ ಅಂಗಡಿಯಲ್ಲಿ ಕೆಲಸ ಮಾಡುತ್ತಾನೆ.

ಆದರೆ ಮನೆಯ ಸೊಸೆಗೆ ಮನೆಯ ಹಿರಿಯರ ಬಗೆಗಿನ ಅಂಜಿಕೆ ಇದ್ದರೂ, ಹಂದಿ ಸಾಕುವವರಿಗೂ ಸರಕಾರ ಏನಾದರೂ ಸಹಾಯ ಮಾಡಿದರಾಗುತ್ತಿತ್ತು ಎಂಬ ದೂರದ ಆಸೆ ಇದೆ !

ಇವರೆಲ್ಲ ಸರಕಾರದ ಲೆಕ್ಕದಲ್ಲಿ ಎಲ್ಲಿ ಬರುತ್ತಾರೆ ?

**ಕೆ. ಪಿ. ಸ್ವಾಮಿ**
ನಂ. ೧೬೭, ೧೦ನೇ ಮೇನ್, ೩ನೇ ಫೇಸ್, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು - ೫೬೦ ೦೫೮

# ಸಂಶೋಧನೆ – ಒಂದು ಪರಿಚಯ

*ಕನ್ನಡ ವಿಶ್ವವಿದ್ಯಾಲಯ, ಹಂಪಿ, ಇಲ್ಲಿ ಡಾ॥ ಶಂ. ಬಾ. ಜೋಶಿ ಅಧ್ಯಯನ ಪೀಠದ ಆಶ್ರಯದಲ್ಲಿ ನವೆಂಬರ್ ೧೮, ೨೦೦೫ರಂದು ಸಂಶೋಧನ ಕಮ್ಮಟದ ಉದ್ಘಾಟನಾ ಭಾಷಣ*

ಡಾ॥ ಎಂ. ವಿ. ನಾಡಕರ್ಣಿ

**ಸಂಶೋಧನೆ ಎಂದರೇನು ?**

ಸಂಶೋಧನೆಯೆಂದರೆ ಬರಿ ಮಾಹಿತಿ ಮತ್ತು ಅಂಕಿಸಂಖ್ಯೆಗಳನ್ನು ಕೂಡಿಹಾಕುವುದು ಮಾತ್ರವಲ್ಲ. ಅದು ಅಭಿಪ್ರಾಯಗಳ ಸಂಕಲನವೂ ಅಲ್ಲ. ದೊರಕಿಸಿದ ಮಾಹಿತಿಗಳನ್ನು ಅರ್ಥೈಸಿ ಪರಸ್ಪರ ಸಂಬಂಧಗಳನ್ನು ಹುಡುಕಿ, ಸಮರ್ಥಿಸಿ, ಒಂದು ನಿಷ್ಕರ್ಷಕ್ಕೆ ಬರುವುದೇ ಸಂಶೋಧನೆಯೆಂದು ಹೇಳಬಹುದು. ಸಂಶೋಧಕನ ಮನಸ್ಸಿನಲ್ಲಿ ಕೆಲ hypotheses (ಪರೀಕ್ಷೆಗೆ ಸಿದ್ಧಪಡಿಸಿದ ಆಧಾರ ಊಹೆ ಅಥವಾ ಕಲ್ಪನೆಗಳು) ಇರುತ್ತವೆ. ಅವುಗಳಿಗೆ ತನ್ನ ಹತ್ತಿರ ಇದ್ದ ಮಾಹಿತಿಯನ್ನು ಜೋಡಿಸಿ ಅರ್ಥೈಸಿದಾಗ ಯಾವ ಸಮರ್ಥನೆ ಸಿಗುವುದು ಎಂದು ನೋಡುವುದು ಸಂಶೋಧನೆಯ ಜೀವಾಳ.

ಪ್ರಾ॥ ಸಿ. ಟಿ. ಕುರಿಯನ್ ಅವರು 'ಅರ್ಥಶಾಸ್ತ್ರ ಸಂಶೋಧನೆಗೆ ಮಾರ್ಗದರ್ಶಿಕೆ'[೧] ಎಂಬ ಇಂಗ್ಲಿಷ್‌ನಲ್ಲಿ ಬರೆದ ಪುಸ್ತಕದಲ್ಲಿ ಕೊಟ್ಟ ಉದಾಹರಣೆಯಿಂದ ಸಂಶೋಧನೆಯೆಂದರೆ ಏನೆಂದು ಮನಗಾಣಬಹುದು. ಒಂದು ಕೊಲೆಯಾದ ಸನ್ನಿವೇಶ. ಪೊಲೀಸ್ ಕಾನ್‌ಸ್ಟೇಬಲ್‌ಗಳು ಬಂದು ಮೊದಲು ಆ ಸ್ಥಳದ, ಮೃತ ದೇಹದ ಬಗ್ಗೆ ಎಲ್ಲ ಮಾಹಿತಿಯನ್ನು ಬರೆದುಕೊಳ್ಳುತ್ತಾರೆ, ಫೋಟೋ ತೆಗೆಯುತ್ತಾರೆ, post-mortem ಮಾಡಿಸುತ್ತಾರೆ. ಹೀಗೆ ಎಲ್ಲ ಬಗೆಯ ಮಾಹಿತಿ ಮತ್ತು ಅಂಕಿ ಸಂಖ್ಯೆಗಳನ್ನು ಕೂಡಿ ಹಾಕುತ್ತಾರೆ. ಇಷ್ಟರಿಂದಲೇ ಅಪರಾಧಿ ಯಾರು, ಏಕೆ ಕೊಲೆ ಮಾಡಿದ ಎನ್ನುವುದು ಗೊತ್ತಾಗುವುದಿಲ್ಲ. ನಂತರ ಹಿರಿಯ ಪೊಲೀಸ್ ಅಧಿಕಾರಿ ಬಂದು, ದೊರಕಿಸಿದ ಎಲ್ಲ ಮಾಹಿತಿ ಪರೀಕ್ಷಿಸಿ, ಸಂಶಯಾಸ್ಪದ ಮತ್ತು ಇತರ ವ್ಯಕ್ತಿಗಳನ್ನು ಪ್ರಶ್ನಿಸಿ, ತನ್ನಲ್ಲಿ ಕೆಲ hypotheses ರೂಪಿಸಿಕೊಳ್ಳುತ್ತಾನೆ. ಅವುಗಳನ್ನು ಒಂದೊಂದಾಗಿ ಸಿಕ್ಕ ಮಾಹಿತಿಯೊಡನೆ ಜೋಡಿಸಿ ಯಾವುದಕ್ಕೆ ಹೆಚ್ಚು ಆಧಾರವಿದೆಯೆಂದು ಗೊತ್ತುಮಾಡುತ್ತಾನೆ. ಇದು ಸಂಶೋಧನೆಯ ಮಹತ್ವದ ಘಟ್ಟ. ಇದರ ಸಾಬೀತು ಕೋರ್ಟಿನಲ್ಲಿ ಆಗಬೇಕಾಗುತ್ತದೆ. ವಿದ್ವತ್ ಸಂಶೋಧನೆಯ ಸಾಬೀತು ಆ ಆ ಕ್ಷೇತ್ರದ ವಿದ್ವಾಂಸರಿಂದ ಆಗಬೇಕಾಗುತ್ತದೆ.

> ಸಂಶೋಧನೆ ವಸ್ತುಸ್ಥಿತಿಯ ವಿಶ್ಲೇಷಣೆಯಿಲ್ಲದೇ ಬರೀ ನೀತಿಪಾಠವಾದರೆ ಅದು ಸಂಶೋಧನೆಯೇ ಅಲ್ಲವೆಂದು ಒಪ್ಪತಕ್ಕ ಮಾತು. ಆದರೂ ನನಗನಿಸುವ ಮಟ್ಟಿಗೆ ವಸ್ತುನಿಷ್ಠತೆ-ಆತ್ಮನಿಷ್ಠತೆ ವಿವಾದವೆ ಉಪಯುಕ್ತವಾದುದಲ್ಲ, ಫಲಕಾರಿಯಲ್ಲ. ಮೌಲ್ಯಗಳನ್ನು ತನ್ನ ಸಂಶೋಧನೆಯಿಂದ ಹೊರಗೆ ಹಾಕುವುದು ಸಾಧ್ಯವಾಗದಿದ್ದರೂ, ಅವುಗಳ ಅರಿವು ಸಂಶೋಧಕನಿಗೆ ಇರಬೇಕುಮಾತ್ರವಲ್ಲ, ಅದನ್ನು ಆತ ತನ್ನ ಬರವಣಿಗೆಯಲ್ಲಿ ಓದುಗರಿಗೆ ಸ್ಪಷ್ಟವಾಗಿ ತಿಳಿಸಬೇಕು.

**ಸಂಶೋಧನೆ ಮತ್ತು ಸೃಜನಶೀಲತೆ**

ಸೃಜನಶೀಲತೆ ಸಂಶೋಧನೆಯ ಜೀವಾಳ. ಸಾಹಿತಿಗೆ ಮಾತ್ರವಲ್ಲ, ವಿಚಾರಪೂರ್ಣ ಸಂಶೋಧನೆಯಲ್ಲಿಯೂ ಸೃಜನಶೀಲತೆ ಬೇಕಾಗುತ್ತದೆ. ಇಲ್ಲದಿದ್ದರೆ ಅದು ತಂಗಳು ಬರವಣಿಗೆಯಾಗುತ್ತದೆಯೇ ಹೊರತು, ಸಂಶೋಧನೆಯಾಗುವುದಿಲ್ಲ. ಸಾಹಿತ್ಯದಲ್ಲಿ ಸೃಜನಶೀಲ ಮತ್ತು ವೈಚಾರಿಕ ಎಂಬ ಭೇದವನ್ನು ಅನುಕೂಲತೆಗೋಸ್ಕರ ಮಾತ್ರ ಕಲ್ಪಿಸಲಾಗಿದೆಯೇ ಹೊರತು, ಇದರ ಅರ್ಥ ವಿಚಾರಸಾಹಿತ್ಯದಲ್ಲಿ ಸೃಜನಶೀಲತೆ ಬೇಕಾಗಿಲ್ಲವೆಂದಲ್ಲ.

ವಿಜ್ಞಾನವನ್ನು ವ್ಯವಸ್ಥಿತ ಜ್ಞಾನ (organised knowledge) ಎಂದು ವ್ಯಾಖ್ಯೆ ಕೊಡಲಾಗುತ್ತದೆ. ಆದರೆ ಅದು ಕೂಡಿಟ್ಟ ಭಂಡಾರ ಮಾತ್ರವಲ್ಲ. ಅದಕ್ಕಿಂತ ಹೆಚ್ಚಾಗಿ ವಿಜ್ಞಾನ ಒಂದು ಕಾರ್ಯಗತಿ[೨] (process) ಕೂಡ ಆಗಿದೆ. ಜ್ಞಾನ ಭಂಡಾರದ ಹೆಚ್ಚುವಿಕೆ ಯಾವ ಕಾರ್ಯಗತಿಯಿಂದ ಆಗುತ್ತದೆಯೋ ಅದೇ ವಿಜ್ಞಾನವೆಂದೂ ಹೇಳಬಹುದು. ಈ ಕಾರ್ಯಗತಿಯೇ ಸಂಶೋಧನೆ. ಈ ಕಾರ್ಯಗತಿಯಿಂದ ಜ್ಞಾನದ ಉತ್ಪಾದನೆಯೂ ಆಗುತ್ತದೆ, ಪರೀಕ್ಷೆಯೂ ಆಗುತ್ತದೆ, ಆದರೆ ಸಪ್ರಮಾಣತೆಯೂ ಆಗುತ್ತದೆ. ಪರೀಕ್ಷೆಗೆ ಒಳಪಡಲು ಅರ್ಹವಾದ ಸತ್ಯಶೋಧನೆಯೇ ವಿಜ್ಞಾನದ ಗುರಿ. ಸಂಶೋಧನೆ ಇಲ್ಲದಿದ್ದರೆ ವಿಜ್ಞಾನವಿಲ್ಲ, ಸೃಜನಶೀಲತೆಯಿಲ್ಲದಿದ್ದರೆ ಸಂಶೋಧನೆಯಿಲ್ಲ.

ಸೃಜನಶೀಲತೆ ಯಾಂತ್ರಿಕವಾದ ತರಬೇತಿ ವರ್ಗಗಳಿಂದ ಬರುವುದಿಲ್ಲ. ಅದು ಬರುವುದು ವಿಚಾರ ಮಂಥನ, ಸಂಪಾದಿಸಿದ ಜ್ಞಾನದ ವಿಚಾರಪೂರ್ಣ ಅಥವಾ ವಿಮರ್ಶಾತ್ಮಕ ಅಧ್ಯಯನ, ಅನುಭವ ಮತ್ತು ಸ್ಫೂರ್ತಿಯಿಂದ ಬರುತ್ತದೆ.

ಸೃಜನಶೀಲತೆ ಏಕೆ ಬೇಕು, ಹೇಗೆ ಬರುತ್ತದೆ ಎಂದು ನೋಡಿದೆವು. ಅದು ಎಲ್ಲಿ ಬರುತ್ತದೆ ? ಸಂಶೋಧನೆಯ ಪ್ರತಿ ಹಂತದಲ್ಲಿಯೂ ಸೃಜನಶೀಲತೆಗೆ ಆಸ್ಪದವಿದೆ. ಆದರೆ ಅದರ ವಿಶೇಷ ಮಹತ್ವವಿರುವುದು ಸಂಶೋಧನೆಯಲ್ಲಿ ಅಡಕವಾಗಿರುವ ಸಂಬಂಧ ಅಥವಾ ಸಹಸಂಬಂಧಗಳನ್ನು ಪರೀಕ್ಷಿಸಲು ಬೇಕಾದ hypotheses ಗಳನ್ನು ರೂಪಿಸುವಲ್ಲಿ. ಈ ಆಧಾರ ಕಲ್ಪನೆಗಳನ್ನು ಪರೀಕ್ಷಣೆಗೆ ಒಳಪಡಿಸುವುದರಲ್ಲಿಯೂ ಸೃಜನಶೀಲತೆ ಬೇಕಾಗುತ್ತದೆ. ಆದರೆ ಈ ಪರೀಕ್ಷಾ ವಿಧಾನ (respond) ಯಾವಾಗಲೂ ಹೊಸತಾಗಿರುತ್ತದೆಂದು ಹೇಳಬರುವುದಿಲ್ಲ. ಅನೇಕ ಸಲ ಅಂಧಾನುಕರಣೆಯನ್ನು ಪರೀಕ್ಷಾ ವಿಧಾನದಲ್ಲಿ ನೋಡಬಹುದು. ಇಂತಹ ಸನ್ನಿವೇಶದಲ್ಲಿ ಸೃಜನಶೀಲತೆ ಇರುವುದಿಲ್ಲ ನಿಜ. ಆದರೆ ವಿಧಾನ ಹಳೆಯದಾಗಿದ್ದರೂ ಅದು ಪ್ರಸ್ತುತ hypotheses ಗಳ ಪರೀಕ್ಷಣೆಗೆ ಎಷ್ಟು ಸಮರ್ಪಕವೆಂದು ಆಳವಾಗಿ ಯೋಚಿಸುವಲ್ಲಿ ಮತ್ತು ಅವುಗಳನ್ನು ಪ್ರಾಮಾಣಿಕವಾಗಿ ಸಮಸ್ಯೆಗೆ ಬೇಕಾದ ರೂಪದಲ್ಲಿ ಬದಲಿಸುವಲ್ಲಿ ಸೃಜನಶೀಲತೆ ಬೇಕು.

**ಸಂಶೋಧನೆ ಮತ್ತು ತರಬೇತಿ**

ಸೃಜನಶೀಲತೆ ಯಾಂತ್ರಿಕವಾದ ತರಬೇತಿಯಿಂದ ಬರುವುದಿಲ್ಲವೆಂದು ಈ ಮುಂಚೆ ಹೇಳಿದ್ದೇನೆ. ಆದರೂ ಸಂಶೋಧನೆಗೆ ತರಬೇತಿಯ ಅವಶ್ಯವಿದೆ. ಏಕೆ ?

ಮೊದಲನೆಯದಾಗಿ, ಕಲ್ಪಿಸಿದ ಆಧಾರ ಊಹೆಗಳನ್ನು ಮತ್ತು ಸಂಶೋಧನೆಯ ತೀರ್ಮಾನಗಳನ್ನು ಪರೀಕ್ಷಿಸಲು ಕೆಲ ಶಾಸ್ತ್ರೀಯ ವಿಧಾನಗಳು ಬೇಕಾಗುತ್ತವೆ. ಈ ವಿಧಾನಗಳ ಗಾಢವಾದ ಪರಿಚಯ ಮತ್ತು ಅವುಗಳ ಇತಿಮಿತಿ, ಕುಂದು ಕೊರತೆಗಳ ಜ್ಞಾನವೂ ಸಂಶೋಧನೆಯಲ್ಲಿ ಮಹತ್ವದ್ದು.

ಎರಡನೆಯದಾಗಿ, ತರ್ಕಶಾಸ್ತ್ರದ ಪರಿಚಯವಿಲ್ಲದಿದ್ದರೆ ಮಾಹಿತಿ ಮತ್ತು ಅಂಕಿಸಂಖ್ಯೆಗಳಿಂದ ಯಾವ ತೀರ್ಮಾನಗಳನ್ನು ತೆಗೆಯುತ್ತೇವೆಯೋ ಅವು ತರ್ಕಬದ್ಧವಾಗಿವೆಯೋ ಇಲ್ಲವೋ ಎಂಬುದು ಗೊತ್ತಾಗುವದಿಲ್ಲ. ಇತ್ತೀಚೆಗೆ ಸಮಾಜಶಾಸ್ತ್ರಗಳ ಸಂಶೋಧನಾ ವರ್ಗಗಳಲ್ಲಿ ಬಹುಪಾಲು ವೇಳೆ ಸಂಖ್ಯಾಶಾಸ್ತ್ರದ ವಿಧಾನಗಳ ಪರಿಚಯಕ್ಕಷ್ಟೇ ಮೀಸಲಾಗಿಡುತ್ತಾರೆ; ತರ್ಕ ಶಾಸ್ತ್ರದ ಪರಿಚಯಕ್ಕೆ ಅಲಕ್ಷ್ಯ ಮಾಡಲಾಗುತ್ತದೆ. ಈ ತರಹದ ಅರ್ಧಮರ್ಧ ಅಥವಾ ಅಪಕ್ವ (immature) ತರಬೇತಿಯಿಂದ ಸಂಶೋಧಕರಿಗೆ ಸರಿಯಾದ ಮಾರ್ಗದರ್ಶನವಾಗುವುದಿಲ್ಲ. ಸಂಶೋಧನೆಯಲ್ಲಿ ಅಡಕವಾಗಿರುವ ಪರಸ್ಪರ ವೈರುಧ್ಯ ಅಥವಾ ಅಸಂಗತತೆ, ಚಕ್ರೀಯ ವಿಚಾರಸರಣಿ ಇಂತಹ ಹಲವಾರು ತಾರ್ಕಿಕ ಕುಂದುಕೊರತೆಗಳನ್ನು ಪತ್ತೆ ಹಚ್ಚಲು ತರ್ಕಶಾಸ್ತ್ರದ ಪರಿಚಯ ಮಾತ್ರವಲ್ಲ, ವಿಶಾಲವಾದ ಓದಿನ ಅಭ್ಯಾಸವೂ ಬೇಕು. ಚಕ್ರೀಯ ವಿಚಾರಸರಣಿಗೆ ಒಂದು ಉದಾಹರಣೆ ಕೊಡಬಹುದು. ಈ ಕೆಳಗಿನ ಸಂವಾದ ನೋಡಿರಿ.

''ಬಡವರು ಏಕೆ ಬಡವರಾಗಿದ್ದಾರೆಂದರೆ ಅವರಲ್ಲಿ ಸೋಮಾರಿತನವಿದೆ. ಬಡತನಕ್ಕೆ ಸೋಮಾರಿತನವೆ ಕಾರಣ.''

''ಇದು ನಿಮಗೆ ಹೇಗೆ ಗೊತ್ತು ? ಇದಕ್ಕೆ ಆಧಾರವಿದೆಯೇ ?''

''ಏಕಿಲ್ಲ? ಬಡವರು ಸಾಕಷ್ಟು ಕೆಲಸ ಮಾಡುವುದಿಲ್ಲ. ಅದಕ್ಕೇ ಅವರಿಗೆ ಆಯ ಕಡಿಮೆ.''

''ಅವರಿಗೇಕೆ ಸಾಕಷ್ಟು ಕೆಲಸ ಸಿಗುವುದಿಲ್ಲ ?''

''ಏಕೆಂದರೆ ಅವರು ಸೋಮಾರಿಗಳು !''

ಈ ಸರಳ ಸಂವಾದದಲ್ಲಿಯ ಚಕ್ರೀಯತೆ ನಿಚ್ಚಳವಾಗಿ ಸ್ಪಷ್ಟವಾಗಿ ಒಮ್ಮೆಲೇ ಗೊತ್ತಾಗುವುದಾದರೂ, ಅನೇಕ ಸಂಶೋಧನೆಗಳಲ್ಲಿ ಅದು ಶಬ್ದ ಜಾಲಗಳಲ್ಲಿ ವರ್ಣನಾವೈಖರಿಯಲ್ಲಿ ಅಡಗಿಹೋಗಿರುತ್ತದೆ. ಒಳ್ಳೆಯ ಗ್ರಹಣಶಕ್ತಿ ಇರುವ ನಿಷ್ಣಾತ ಸಂಶೋಧಕನಿಗೆ ಅಡಗಿಕೊಂಡರೂ ಈ

ಕುಂದುಗಳು ಗೊತ್ತಾಗಿಬಿಡುತ್ತವೆ.

ವಸ್ತುನಿಷ್ಠ ಜಗತ್ತಿನಲ್ಲಿಯೂ ಕಾರಣ-ಪರಿಣಾಮಗಳಲ್ಲಿ ಚಕ್ರೀಯತೆ ಇರುವುದು ಸಾಧ್ಯವಿದೆ. ಸಮುದ್ರಕ್ಕೆ ಬಿಸಿ ತಗುಲಿ ಆವಿಯಾಗಿ, ಮೋಡವಾಗಿ, ಮಳೆ ಸುರಿದು, ಮತ್ತೆ ಸಮುದ್ರಕ್ಕೆ ನೀರು ಸೇರುವುದು ಒಂದು ಬಗೆಯ ಚಕ್ರೀಯತೆ. ಈ ತರಹದ ಚಕ್ರೀಯತೆ ಸಾಮಾಜಿಕ ಜಗತ್ತಿನಲ್ಲಿಯೂ ಇರಬಹುದು. ವಸ್ತುನಿಷ್ಠ ಜಗತ್ತಿನಲ್ಲಿಯ ಕಾರಣ-ಪರಿಣಾಮಗಳ ಚಕ್ರೀಯತೆಯನ್ನು ತೋರಿಸಿಕೊಟ್ಟ ಮಾತ್ರಕ್ಕೆ ಅದು ತಾರ್ಕಿಕ ಕುಂದು ಆಗುವುದಿಲ್ಲ. ಅದು ಇರುವುದು ತಾರ್ಕಿಕ ಚಕ್ರೀಯತೆಯಲ್ಲಿ. ಎಲ್ಲೆಲ್ಲಿ ಮೂಲಗ್ರಹಿಕೆ (assumptions)ಗಳನ್ನೇ ತೀರ್ಮಾನಗಳೆಂದು ವಾದಿಸುತ್ತೇವೆಯೋ ಅಲ್ಲಲ್ಲಿ ತಾರ್ಕಿಕ ಚಕ್ರೀಯತೆಯನ್ನು ಕಾಣಬಹುದು.

ಸಂಖ್ಯಾಶಾಸ್ತ್ರಗಳ ವಿಧಾನಗಳನ್ನು ಉಪಯೋಗಿಸುವಾಗಂತೂ ಎಚ್ಚರವಹಿಸಿದಷ್ಟೂ ಕಡಿಮೆ. ಲೆಕ್ಕ ನಾನು ಮಾಡಿಲ್ಲ, ಕಂಪ್ಯೂಟರ್ ಮಾಡಿದೆ ಎಂದು ಜಾರಿಕೊಳ್ಳಲು ಇಲ್ಲಿ ಆಸ್ಪದವಿಲ್ಲ. ಸಹಸಂಬಂಧಗಳ (correlations) ವಿಶ್ಲೇಷಣೆಯ ಉದಾಹರಣೆ ತೆಗೆದುಕೊಳ್ಳೋಣ. ವೇಗದಿಂದ ಬೆಳೆಯುತ್ತಿರುವ ಒಂದು ನಗರದ ಸನ್ನಿವೇಶ. ಇಪ್ಪತ್ತು ವರ್ಷಗಳ ಅಂಕಿಸಂಖ್ಯೆಗಳನ್ನು ನೋಡಲಾಗಿ ದೇವಾಲಯಗಳಿಗೆ ಹೋಗುವ ಜನಸಂಖ್ಯೆಯಲ್ಲಿ ಗಮನಾರ್ಹ ಹೆಚ್ಚಳ ಕಾಣಬಂದಿತೆನ್ನಿ. ಹಾಗೆಯೇ ಅದೇ ನಗರದಲ್ಲಿ ಅಪರಾಧಗಳ ಸಂಖ್ಯೆಯಲ್ಲಿಯೂ ಹಾಗೆಯೇ ಹೆಚ್ಚಳವಾಗಿದೆಯೆನ್ನಿ. ಇದರ ಅರ್ಥವೇನು? ಈ ಎರಡೂ ಪ್ರವೃತ್ತಿಗಳಲ್ಲಿ ಒಂದೇ ದಿಶೆಯಿದ್ದುದರಿಂದ ಇವುಗಳಲ್ಲಿ ಧನಾತ್ಮಕ ಸಹಸಂಬಂಧವಿದೆ. ದೇವಾಲಯಗಳಿಗೆ ಹೋಗುವ ಪ್ರವೃತ್ತಿಯಿಂದಲೇ ಅಪರಾಧಗಳ ಹೆಚ್ಚಳವೂ ಆಗುತ್ತಿದೆ ಎಂದು ತೀರ್ಮಾನಕ್ಕೆ ಬರಬಹುದೆ? ಇದು ಖೋಟಾ ಅಥವಾ ಭ್ರಾಂತಿಪೂರ್ಣ (spurious) ಸಹಸಂಬಂಧವೆಂದು ಯಾರೂ ಹೇಳಬಹುದು. ಏಕೆಂದರೆ ಕೊಟ್ಟ ಉದಾಹರಣೆ ಸರಳವಾಗಿದೆ. ಈ ಎರಡೂ ಪ್ರವೃತ್ತಿಗಳ ಹಿಂದೆ ಅವೆರಡನ್ನೂ ನಿಯಂತ್ರಿಸುವ ಇನ್ನೊಂದು ಪ್ರವೃತ್ತಿಯಿದೆ – ಇದು ಜನಸಂಖ್ಯಾವೃದ್ಧಿ.

ಸಹಸಂಬಂಧಗಳ ವಿಶ್ಲೇಷಣೆಯಲ್ಲಿ ಯಾವುದು ಕಾರಣ ಮತ್ತು ಯಾವುದು ಪರಿಣಾಮವೆಂದು ಗೊತ್ತಾಗುವುದಿಲ್ಲ. ಸಂಖ್ಯಾಶಾಸ್ತ್ರದ ಸಹಸಂಬಂಧದ ಮೇಲಷ್ಟೇ ಅವಲಂಬಿಸಿದರೆ ಕಾರಣ-ಪರಿಣಾಮಗಳ ದಿಶೆ ಯಾವುದೆಂದು ಹೇಳಲು ಬರುವುದಿಲ್ಲ. ಅದು ಗೊತ್ತಾಗಬೇಕಾದರೆ, ಸಂಶೋಧನೆಯ ವಿಧಾನದ ಹಿಂದೆ ಒಂದು ತಾತ್ವಿಕ (practical) ಮಾರ್ಗ ಬೇಕಾಗುತ್ತದೆ. ಅದರಂತೆ ಆಧಾರ ಊಹೆ ಕಲ್ಪಿಸಿ, ಅದಕ್ಕನುಗುಣವಾಗಿ ಸಂಶೋಧನಾ ವಿಧಾನಗಳನ್ನು ಜೋಡಿಸಿ, ಅದರಿಂದ ಬಂದ ತೀರ್ಮಾನಗಳನ್ನು ತರ್ಕ ಶುದ್ಧತೆಯ ಒರೆಗಲ್ಲಿಗೆ ತಿಕ್ಕಿ ತೇಯಬೇಕಾಗುತ್ತದೆ. ಆದರೂ ಎಚ್ಚರವಹಿಸಬೇಕಾದುದು ಅಗತ್ಯ. ಈ ಮುಂಚೆ ಕೊಟ್ಟ ಉದಾಹರಣೆಯಲ್ಲಿ ಕೇವಲ ದಿಶೆಯ ಮಾರ್ಪಾಡಿನಿಂದ ಗೊಂದಲ ಪರಿಹಾರವಾಗುವುದಿಲ್ಲ. ಒಬ್ಬ ಸಂಶೋಧಕ ತನ್ನ ಆಧಾರ ಊಹೆಯಲ್ಲಿ ಪಾಪಪ್ರಜ್ಞೆಯೇ ಧಾರ್ಮಿಕತೆಗೆ ಕಾರಣವೆಂದು ಗ್ರಹಿಸಿದಲ್ಲಿ, ಅಪರಾಧಗಳ ಸಂಖ್ಯೆ ಮತ್ತು ದೇವಾಲಯಗಳಿಗೆ ಹೋಗುವುದರ ಸಂಖ್ಯೆ ಎರಡರಲ್ಲೂ ಹೆಚ್ಚಳ ಕಂಡು, ತನ್ನ ಆಧಾರ ಸಾಬೀತಾಯಿತು ಎಂದು 'ಯುರೇಕಾ'! ಎಂದು ಕುಣಿಯಬಹುದು. ಆದರೆ ಇದೂ ಕೂಡ ಮೇಲೆ ಹೇಳಿದಂತೆ ಭ್ರಾಂತಿಯ ಸಹಸಂಬಂಧ. ಇಷ್ಟರಿಂದಲೇ ಮಾಡಿದ ಅವನ ತೀರ್ಮಾನ ಅಪಕ್ವ ಮತ್ತು ಅಸಮಂಜಸವಾಗುತ್ತದೆ. ಅನೇಕಸಲ ಸಮಸ್ಯೆ ಸ್ವಲ್ಪ ಗಡುಚಾಗಿದ್ದಲ್ಲಿ ಅಥವಾ ಸಂಕೀರ್ಣವಾಗಿದ್ದಲ್ಲಿ ಈ ತಾರ್ಕಿಕ ಕುಂದು ಒಮ್ಮೆಲೇ ಗೊತ್ತಾಗುವುದಿಲ್ಲ. ಅದಕ್ಕೆ ವಿಮರ್ಶೆ ಬೇಕಾಗುತ್ತದೆ. ತರಬೇತಿಯ ಮುಖ್ಯವಾದ ಅವಶ್ಯಕತೆ ಈ ವಿಮರ್ಶಕತೆಯನ್ನು ಬೆಳೆಸುವುದು.



**ಸಂಶೋಧನೆ ಮತ್ತು ಅಂತರ್‌ಶಾಸ್ತ್ರೀಯತೆ**

ವಾಸ್ತವಿಕ ಜಗತ್ತಿನಲ್ಲಿ ಕಂಡುಬರುವ ಸಮಸ್ಯೆಗಳು ಒಂದೇ ಶಾಸ್ತ್ರದ ಅಡಿಯಲ್ಲಿ ಬರುವಂತಹವುಗಳಲ್ಲ. ಅವುಗಳಿಗೆ ಅನೇಕ ಮಗ್ಗಲುಗಳಿವೆ. ನಮ್ಮ ಅನುಕೂಲಕ್ಕಾಗಿ ಒಂದೆ ಮಗ್ಗುಲಿನಲ್ಲಿ ವ್ಯಾಸಂಗ ಪಡೆದು ಒಂದೇ ಶಾಸ್ತ್ರದಲ್ಲಿ ವಿಶೇಷಜ್ಞತೆ ಪಡೆಯುವುದು ಸಾಮಾನ್ಯ. ಆದರೆ ಸಮಸ್ಯೆಗಳ ಅನೇಕ ಮಗ್ಗಲುಗಳನ್ನು ಗ್ರಹಿಸಿ ಸಮಗ್ರ ದೃಷ್ಟಿಯಿಂದ (holistic) ತಿಳಿದುಕೊಳ್ಳುವುದಾದರೆ ಅದಕ್ಕೆ ಅಂತರ್‌ಶಾಸ್ತ್ರೀಯತೆ ಬೇಕಾಗುತ್ತದೆ. ವ್ಯಾವಹಾರಿಕ ನೀತಿಗಳನ್ನು ರೂಪಿಸುವಲ್ಲಿಯಂತೂ ಈ ಅಂತರ್ ಶಾಸ್ತ್ರೀಯತೆ ಇಲ್ಲದಿದ್ದರೆ ಲೋಪದೋಷಗಳು ಉಂಟಾಗುವ ಸಂಭವ ಬಹಳ. ಆನೆ ಮತ್ತು ಒಂಬತ್ತು ಕುರುಡರ ಕಥಾರೂಪಕ ಈ ಸನ್ನಿವೇಶಕ್ಕೆ ತುಂಬ ಒಪ್ಪುತ್ತದೆ. ಒಬ್ಬೊಬ್ಬ ಕುರುಡ ಒಂದೊಂದು ಮಗ್ಗಲು ಅಥವಾ ಭಾಗ ಮಾತ್ರ ಪರಿಚಯಿಸಿಕೊಳ್ಳುತ್ತಾನೆ. ಅವರಿಗೆ ಇಡೀ ಆನೆಯ ಕಲ್ಪನೆ ಬರುವುದಿಲ್ಲ.

ಇದೇ ಕಾರಣಕ್ಕಾಗಿಯೇ ಅನೇಕ ವ್ಯಾಸಂಗ ವಿಭಾಗಗಳು ಅಂತರ್‌ಶಾಸ್ತ್ರೀಯಗಳಾಗಿವೆ. ಪರಿಸರಶಾಸ್ತ್ರ ಒಂದು ಮಹತ್ವದ ಉದಾಹರಣೆ. ಗಣಿತದೊಂದಿಗೆ ಸಖ್ಯವಿಲ್ಲದಿದ್ದರೆ ಆಧುನಿಕ ಭೌತಿಕಶಾಸ್ತ್ರವೇ ಸಾಧ್ಯವಿಲ್ಲದಿಲ್ಲ. ಜೀವ ರಸಾಯನಶಾಸ್ತ್ರ ಇನ್ನೊಂದು ಉದಾಹರಣೆ. ಅರ್ಥಶಾಸ್ತ್ರ ಮತ್ತು ಸಂಖ್ಯಾಶಾಸ್ತ್ರಗಳ ಹೊಂದಾಣಿಕೆಯಿಂದ Econometrics ಜನಿಸಿತು. ಇಂತಹ ಸರ್ವಮಾನ್ಯ ಅಂತರ್‌ಶಾಸ್ತ್ರೀಯ ಶಾಸ್ತ್ರಗಳ ಹೊರಗೆಯೂ ಮಹತ್ವದ Breakthrough ಆದ ಸಂಶೋಧನೆಗಳಲ್ಲಿ ಅಂತರ್‌ಶಾಸ್ತ್ರೀಯತೆಯನ್ನು ಕಾಣಬಹುದು. ಕಾರ್ಲ್ ಮಾರ್ಕ್ಸ್‌ನ ಬರವಣಿಗೆಗಳು ಅಂತರ್‌ಶಾಸ್ತ್ರೀಯತೆಯ ಅಪ್ರತಿಮ ಉದಾಹರಣೆಗಳು. ಒಂದೇ ಶಾಸ್ತ್ರದ ಮೇಲೆ ಅವಲಂಬಿಸಿರುವುದಕ್ಕಿಂತ ಅಂತರ್‌ಶಾಸ್ತ್ರೀಯ ದೃಷ್ಟಿಕೋನದಿಂದ ಮೌಲಿಕವಾದ ಹೊಸ ಹೊಸ ಒಳ ದೃಷ್ಟಿಗಳು ಸಿಗುತ್ತವೆ, ಸತ್ಯದ ಹೊಸ ಹೊಸ ರೂಪಗಳು ನಿದರ್ಶನಕ್ಕೆ ಬರುತ್ತವೆ.

ಅಂತರ್‌ಶಾಸ್ತ್ರೀಯತೆ ಮತ್ತು ಬಹುಶಾಸ್ತ್ರೀಯತೆ ಇವೆರಡೂ ಒಂದೇ ಅಲ್ಲ. ಒಂದು ಅರಣ್ಯದ ಅಧ್ಯಯನವನ್ನೇ ತೆಗೆದುಕೊಳ್ಳಿ. ಒಬ್ಬ ಶಾಸ್ತ್ರಜ್ಞ ಅರಣ್ಯಗಳ ಪ್ರಾಣಿಗಳ, ಇನ್ನೊಬ್ಬ ಪಕ್ಷಿಗಳ, ಇನ್ನೊಬ್ಬ ಅದರಲ್ಲಿಯ ಮರ, ಗಿಡ ಬಳ್ಳಿ, ವನಸ್ಪತಿಗಳ, ಮಗದೊಬ್ಬ ಅರಣ್ಯ ಸಂಪತ್ತಿನ ಆರ್ಥಿಕ ಮಗ್ಗಲು ಹೀಗೆ ಬೇರೆ ಬೇರೆ ದೃಷ್ಟಿಕೋನಗಳಿಂದ ಅಧ್ಯಯನ ನಡೆಸಿ ಒಟ್ಟಾಗಿ ಒಂದು ಪುಸ್ತಕ ಪ್ರಕಟಿಸಬಹುದು. ಇದು ಬಹುಶಾಸ್ತ್ರೀಯತೆಯ

ಉದಾಹರಣೆ. ಇವೆಲ್ಲವನ್ನೂ ಒಟ್ಟಾಗಿ ಬೇರೆಬೇರೆ ಮಗ್ಗಲುಗಳಲ್ಲಿಯ ಅಂತರ್‌ಸಂಬಂಧಗಳನ್ನು ಗುರುತಿಸಿ ಅಧ್ಯಯನ ನಡೆಸಿದರೆ ಅದು ಅಂತರ್‌ಶಾಸ್ತ್ರೀಯತೆ ಯಾಗುತ್ತದೆ. ಅರಣ್ಯದ ಪರಿಸರ ಅಧ್ಯಯನ ಇದಕ್ಕೆ ಉದಾಹರಣೆ. ಬಹುಶಾಸ್ತ್ರೀಯತೆಗೂ ಪ್ರಯೋಜನವಿದೆ. ಏಕಶಾಸ್ತ್ರೀಯ ಅಧ್ಯಯನಕ್ಕಿಂತ ಅದು ಒಂದು ಹಂತ ಮೇಲೆ. ಆದರೆ ಸಂಬಂಧಪಟ್ಟ ಇತರ ಮಗ್ಗಲುಗಳಲ್ಲಿಯ ಸಹಸಂಬಂಧ ಅಂತರ್‌ಸಂಬಂಧಗಳ ಅಧ್ಯಯನ ನಡೆಸಿದಾಗ ಇನ್ನೂ ಹೆಚ್ಚು ಒಳ ದೃಷ್ಟಿಗಳು ಸಿಗುತ್ತವೆ. ಅಧ್ಯಯನಕ್ಕೆ ಇನ್ನೂ ಹೆಚ್ಚು ಪುಷ್ಟಿ ಬರುತ್ತದೆ.

ಆದರೆ ವ್ಯಾವಹಾರಿಕ ಅನುಕೂಲತೆಗಳಿಗಾಗಿ ನಮ್ಮ ವ್ಯಾಸಂಗ, ಸಂಶೋಧನಾ ತರಬೇತಿ ಸಾಮಾನ್ಯವಾಗಿ ಏಕ-ಶಾಸ್ತ್ರನಿಷ್ಠವಾಗಿರುತ್ತವೆ. ಹೀಗೆ ಇದ್ದಾಗ ಇಂತಹ ಶಾಸ್ತ್ರಜ್ಞರು ಒಮ್ಮೆಲೇ ಇತರ ಮಗ್ಗಲುಗಳಲ್ಲಿ ಸಂಶೋಧನೆಯಲ್ಲಿ ತಕ್ಕ ತರಬೇತಿ ಇಲ್ಲದೇ ತೊಡಗಿದರೆ ತಪ್ಪಾಗುವ ಸಂಭವಗಳಿವೆ. ಹೀಗಾಗಿ ಅಂತರ್‌ಶಾಸ್ತ್ರೀಯತೆ ಎಷ್ಟೇ ಇಷ್ಟವಾದರೂ ಅದರ ಬಗ್ಗೆ ಎಚ್ಚರವಹಿಸಬೇಕಾಗುತ್ತದೆ. ಆದರೆ ಈ ಎಚ್ಚರಿಕೆಗೆ ಮಾತ್ರ ಮಹತ್ವಕೊಟ್ಟು ತಪ್ಪಾದೀತೆಂದು ಹೆದರಿ ಅಂತರ್‌ಶಾಸ್ತ್ರೀಯ ಅಧ್ಯಯನ ಸಂಶೋಧನೆಗಳಿಗೆ ಕೈಹಾಕುವುದಿಲ್ಲವೆಂದು ನಿರ್ಧರಿಸಿದರೆ, ಮಗು ಬಿದ್ದೀತೆಂದು ನಡೆಯಲು ಕಲಿಯಲು ಕೊಡದಂತೆ ಆದೀತು. ಎಚ್ಚರಿಕೆ ಇರಬೇಕು, ಆದರೆ ಇತರ ಶಾಸ್ತ್ರಗಳ ಪರಿಚಯ ಮಾಡಿಕೊಳ್ಳುವ ಅಭಿರುಚಿಯೂ ಇರಬೇಕು. ಅದರಿಂದ ಸಂಶೋಧನೆಗೆ ಪುಷ್ಟಿ ಬರುತ್ತದೆ. ಇದೇ ಕಾರಣಕ್ಕಾಗಿ Ph.D. ಮಾಡಬಯಸುವ ಸಮಾಜಶಾಸ್ತ್ರಗಳ ವಿದ್ಯಾರ್ಥಿಗಳಿಗೆ ISECನಲ್ಲಿ[೩] ಅಂತರ್‌ಶಾಸ್ತ್ರೀಯ ದೃಷ್ಟಿಕೋನಗಳನ್ನು ಪರಿಚಯಿಸುವುದು ಪಠ್ಯಕ್ರಮದಲ್ಲಿ ಅಡಕವಾಗಿದೆ. ಇಂತಹದೇ ತರಬೇತಿಯನ್ನು National Law School of India University ಯಲ್ಲಿಯೂ Indian Institute of Managementಗಳಲ್ಲಿಯೂ ಪಠ್ಯಕ್ರಮದಲ್ಲಿ ಅಳವಡಿಸಲಾಗಿದೆ.

**ಸಂಶೋಧನೆ ಮತ್ತು ವಸ್ತುನಿಷ್ಠತೆ (Objectivity)**

ಸಂಶೋಧನೆಯಲ್ಲಿ ವಸ್ತುನಿಷ್ಠತೆ ಬೇಕೆಂದು ವಾದಿಸುವುದು ಸರ್ವಸಾಮಾನ್ಯ. ವಸ್ತುನಿಷ್ಠತೆಗೆ ವಿರುದ್ಧವಾಗಿ ಆತ್ಮನಿಷ್ಠತೆ (subjectivity)[೪] ನಿಂದೆಗೊಳಗಾಗಿದೆ. ವಸ್ತುನಿಷ್ಠತೆಯಲ್ಲಿ ಯಾವ ಮೌಲ್ಯಗಳನ್ನೂ ಗ್ರಹಿಸಿಲ್ಲವೆಂದೂ, ಆತ್ಮನಿಷ್ಠತೆಯಲ್ಲಿ ಸಂಶೋಧಕನ ವೈಯಕ್ತಿಕ ಮೌಲ್ಯಗಳು ಅಡಕವಾಗಿರುವುದರಿಂದ ಆತನ ಸಂಶೋಧನೆ ನಂಬಲರ್ಹವಾದುದಲ್ಲವೆಂದು ಕೆಲ ಶಾಸ್ತ್ರಜ್ಞರ ವಾದವಾಗಿದೆ. ಸಂಶೋಧನೆಯಲ್ಲಿ ಈ ವಿಂಗಡಣೆಯನ್ನು ಲಕ್ಷ್ಯದಲ್ಲಿಟ್ಟು positive (ಮೌಲ್ಯಬಾಹಿರ) ಮತ್ತು normative (ಮೌಲ್ಯನಿಷ್ಠ) ಎಂಬ ಎರಡು ಮಾರ್ಗ (approach)ಗಳನ್ನು ಕಲ್ಪಿಸಲಾಗುತ್ತದೆ. ವಸ್ತುನಿಷ್ಠ ಸಂಶೋಧನೆ ಮೌಲ್ಯಬಾಹಿರವಾಗಿದ್ದು ಆತ್ಮನಿಷ್ಠ ಸಂಶೋಧನೆ ಮೌಲ್ಯನಿಷ್ಠ ಎಂದು ಹೇಳಲಾಗುತ್ತದೆ. ಮೌಲ್ಯಬಾಹಿರ ಮಾರ್ಗದವರು ಮೌಲ್ಯನಿಷ್ಠ ಮಾರ್ಗದವರ ಗೇಲಿ ಮಾಡುವುದು ಸಾಮಾನ್ಯ. ಒಬ್ಬ ಸಂಶೋಧಕ ತನ್ನ ತೀರ್ಮಾನಗಳು ವಾಸ್ತವಿಕ ಜಗತ್ತಿನ ಸ್ಥಿತಿಗಿಂತ ಬೇರೆಯಾಗಿವೆ ಎಂದು ಕಂಡುಹಿಡಿದಿದ್ದಾನೆ ಎನ್ನುವ. ಈ ಸಂಶೋಧಕ ವಸ್ತುನಿಷ್ಠ ಅಥವಾ ಮೌಲ್ಯಬಾಹಿರ ಮಾರ್ಗದವನಾಗಿದ್ದರೆ, ತನ್ನ ತೀರ್ಮಾನಗಳಲ್ಲಿ ಅಥವಾ ಸಂಶೋಧನೆಯಲ್ಲಿಯೇ ಏನೋ ಕುಂದುಕೊರತೆ ಇರಬಹುದೆಂದು ಅವುಗಳ ಪುನಃ ಪರೀಕ್ಷೆ ಮಾಡುತ್ತಾನೆ. ಆದರೆ ಆತ ಮೌಲ್ಯನಿಷ್ಠ ಮಾರ್ಗದವನಾಗಿದ್ದರೆ, ಈ ವಾಸ್ತವಿಕ ಜಗತ್ತಿನಲ್ಲಿಯೇ ಕುಂದುಕೊರತೆಗಳಿವೆ, ಅವನ್ನೇ ಸರಿಪಡಿಸಬೇಕು ಎಂದು ಹೇಳಿ ತನ್ನ ಸಂಶೋಧನೆಯನ್ನು ಪ್ರಶ್ನಿಸುವುದಿಲ್ಲ.[೫] ಇದು ವಸ್ತುನಿಷ್ಠರು ಮಾಡುವ ಗೇಲಿ ಎಂಬುದು ಸ್ಪಷ್ಟವಿದೆ. ವಾಸ್ತವಿಕ ಜಗತ್ತು ತಪ್ಪೋ ಸರಿಯೋ ಎಂಬ ಪ್ರಶ್ನೆ ಭೌತಿಕ ಅಥವಾ ನೈಸರ್ಗಿಕ ವಿಜ್ಞಾನಗಳಲ್ಲಿ (Natural Science) ಹೆಚ್ಚು ಏಳಲಿಕ್ಕಿಲ್ಲ. (ಏಳುವುದಿಲ್ಲ ಎಂದು ಹೇಳುವುದೂ ಕಠಿಣ). ಆದರೆ ಈ ಪ್ರಶ್ನೆ ಸಮಾಜ ಶಾಸ್ತ್ರಗಳಲ್ಲಿ ಬಾರದೇ ಇರುತ್ತದೆಯೆ ? ಈ ಪ್ರಶ್ನೆಯನ್ನೇ ಅಲಕ್ಷಿಸುವುದು ಶಾಸ್ತ್ರೀಯ ಅಥವಾ ತರ್ಕಬದ್ಧವಾದೀತೆ ? ಯಾವುದೇ ಸಂಶೋಧನೆಯಲ್ಲಿ ಮಾಹಿತಿ ಮತ್ತು ಅಂಕಿಸಂಖ್ಯೆಗಳನ್ನು ಕೂಡಿಹಾಕುವಲ್ಲಿ ವಸ್ತುನಿಷ್ಠತೆ ಇರಬೇಕೆಂದು ಒಪ್ಪಬಹುದು. ಆದರೆ Hypothesesಗಳನ್ನು ರೂಪಿಸುವಲ್ಲಿ ವಸ್ತುನಿಷ್ಠತೆ ಸಾಧ್ಯವೇ ? Hypothesesಗಳನ್ನು ಮೌಲ್ಯಬಾಹಿರವಾಗಿ ಇಡುವುದು ನೈಸರ್ಗಿಕ ವಿಜ್ಞಾನಗಳಲ್ಲಿ ಸಹ – ಅದೂ Applied Scienceಗಳಲ್ಲಿ – ಬಹಳ ಕಠಿಣವಾದೀತು. ಸಂಶೋಧಕನಿಗೆ ತನ್ನ ಮನಸ್ಸಿನಲ್ಲಿದ್ದ ಮೌಲ್ಯಗಳ ಅರಿವು (conscious awareness) ಇರಬಹುದು, ಇಲ್ಲದೆಯೂ ಇರಬಹುದು. ಆದರೆ ಮೌಲ್ಯಗಳನ್ನು Hypothesesಗಳಿಂದ ಹೊರಗೆ ಹಾಕುವುದು ಸಾಧ್ಯವಾಗುವುದು ಅಪರೂಪ ಅಥವಾ ಅಸಾಧ್ಯ.

ಸಂಶೋಧನೆ ವಸ್ತುಸ್ಥಿತಿಯ ವಿಶ್ಲೇಷಣೆಯಿಲ್ಲದೇ ಬರೀ ನೀತಿಪಾಠವಾದರೆ ಅದು ಸಂಶೋಧನೆಯೇ ಅಲ್ಲವೆಂದು ಒಪ್ಪತಕ್ಕ ಮಾತು. ಆದರೂ ನನಗನಿಸುವ ಮಟ್ಟಿಗೆ ವಸ್ತುನಿಷ್ಠತೆ-ಆತ್ಮನಿಷ್ಠತೆ ವಿವಾದವೆ ಉಪಯುಕ್ತವಾದುದಲ್ಲ, ಫಲಕಾರಿಯಲ್ಲ. ಮೌಲ್ಯಗಳನ್ನು ತನ್ನ ಸಂಶೋಧನೆಯಿಂದ ಹೊರಗೆ ಹಾಕುವುದು ಸಾಧ್ಯವಾಗದಿದ್ದರೂ, ಅವುಗಳ ಅರಿವು ಸಂಶೋಧಕನಿಗೆ ಇರಬೇಕು ಮಾತ್ರವಲ್ಲ, ಅದನ್ನು ಆತ ತನ್ನ ಬರವಣಿಗೆಯಲ್ಲಿ ಓದುಗರಿಗೆ ಸ್ಪಷ್ಟವಾಗಿ ತಿಳಿಸಬೇಕು. ಇದೇ ನಿಜವಾದ ವಸ್ತುನಿಷ್ಠತೆಯೆನ್ನಬಹುದು. ಆದರೆ ವಸ್ತುನಿಷ್ಠ-ಆತ್ಮನಿಷ್ಠ ಭೇದಕ್ಕಿಂತ ಮುಖ್ಯವಾದ ಭೇದ ಪ್ರಾಮಾಣಿಕ ಮತ್ತು ಅಪ್ರಾಮಾಣಿಕ ಸಂಶೋಧನೆ. ಸಂಶೋಧನೆ ಪ್ರಾಮಾಣಿಕವಾಗಿರದಿದ್ದರೆ ಅದು ಸತ್ಯಶೋಧನೆಯ ಪ್ರಯತ್ನವಾಗಲಾರದು, ಹೀಗಾಗಿ ಸಂಶೋಧನೆಯೂ ಆಗಲಾರದು. ತನ್ನ ತೀರ್ಮಾನಗಳನ್ನು ಮೊದಲೇ ಮಾಡಿಕೊಂಡು ಅದಕ್ಕನುಗುಣವಾದ ಆಧಾರ ಮಾಹಿತಿಯನ್ನಷ್ಟೇ ತೆಗೆದುಕೊಂಡು, ಅದಕ್ಕೆ ವಿರುದ್ಧವಾದ ಮಾಹಿತಿಯನ್ನೆಲ್ಲ ಉದ್ದೇಶಪೂರ್ವಕವಾಗಿ ಅಲಕ್ಷ್ಯ ಮಾಡುವುದು ಅಪ್ರಾಮಾಣಿಕತೆ. ಸುಳ್ಳು ಮಾಹಿತಿಯನ್ನು ಸೃಜಿಸಿ ಅದನ್ನೇ ಆಧಾರವಾಗಿ ತೋರಿಸಿದರಂತೂ ಅದು ಅಕ್ಷಮ್ಯ ಅಪರಾಧ. ಮೇಲೆ ಕೊಟ್ಟ ಅಪರಾಧದ ಉದಾಹರಣೆಗೆ ಮತ್ತೆ ಹೋಗುವ. ನಿಜವಾದ ಅಪರಾಧಿಯನ್ನು ಕಂಡುಹಿಡಿಯುವ ಬದಲು, ತನಗೆ ಆಗದ ಅಥವಾ ತನ್ನ Godfather ಆದ ರಾಜಕೀಯ ಪುಢಾರಿಗೆ ಆಗದ ಒಬ್ಬ ವ್ಯಕ್ತಿಯನ್ನೇ ಅಪರಾಧಿ ಎಂದು ತೋರಿಸುವ ಉದ್ದೇಶವಿದ್ದರೆ, ಪೊಲೀಸ್ ಅಧಿಕಾರಿ ತನಗೆ ಬೇಕಾದ ಮಾಹಿತಿಯನ್ನು ಸೃಷ್ಟಿಸಿ, ಸುಳ್ಳು ಸಾಕ್ಷಿಗಳನ್ನು ತಯಾರು ಮಾಡಿ ಖಟ್ಲೆ ಹಾಕುವುದು ಅಸಾಧ್ಯವೇನಲ್ಲ, ಅತಿ ವಿರಳವೂ ಆಗಿರಲಿಕ್ಕಿಲ್ಲ. ಒಬ್ಬ ಸಂಶೋಧಕ ಸಹಿತ ಇಂತಹ ಮಾರ್ಗ ಹಿಡಿಯಬಹುದು. ಅಥವಾ ದುರುದ್ದೇಶವಿಲ್ಲದಿದ್ದರೂ ಸೋಮಾರಿತನದ ಕಾರಣ ಮನೆಯಲ್ಲೇ ಕೂತು ಸರ್ವೇ ಪ್ರಶ್ನೆಗಳನ್ನು ತಾನೇ ಉತ್ತರಿಸಿ ಮಾಹಿತಿಯನ್ನು cook up ಮಾಡಬಹುದು. ಆದರೆ ಇಂತಹ ಸಂಶೋಧಕರ ಮೋಸ ಮತ್ತು ಅಪ್ರಾಮಾಣಿಕತೆ ಬಹಿರಂಗವಾಗಲು ಹೆಚ್ಚು ಹೊತ್ತು ಹಿಡಿಯುವುದಿಲ್ಲ. ಇಂತಹ ಸಂಶೋಧಕ ತನಗಷ್ಟೇ ಅಲ್ಲ, ತನ್ನ ಸಂಸ್ಥೆಗೂ, ತನ್ನ ದೇಶಕ್ಕೂ ಕೆಟ್ಟ ಹೆಸರು ತರುತ್ತಾನೆ.

ಸತ್ಯಶೋಧನೆ ಅಧ್ಯಾತ್ಮದಲ್ಲಷ್ಟೇ ಅಲ್ಲ, ಶಾಸ್ತ್ರೀಯ ಸಂಶೋಧನೆಯಲ್ಲಿಯೂ ಕಠಿಣವಾದ ಮಾರ್ಗ. ಇದಕ್ಕೂ ತಪಸ್ಸು ಮತ್ತು ನೈತಿಕ ನಿಷ್ಠತೆ (moral integrity) ಬೇಕಾಗುತ್ತವೆ. ಈ ಮಾರ್ಗದಲ್ಲಿ ಅಡಚಣೆಗಳೂ ಇರುತ್ತವೆ, ಆಮಿಷಗಳೂ (temptations) ಇರುತ್ತವೆ. ಅವನ್ನೆಲ್ಲ ಎದುರಿಸಿ ಮುಂದೆ ಹೋಗುವ ಎದೆಗಾರಿಕೆ, ನೈತಿಕ ಧೈರ್ಯ ಮತ್ತು ಭಗವದ್ಗೀತೆಯಲ್ಲಿ ಹೇಳಿದ ಸ್ವಾರ್ಥವನ್ನು ಕಡೆಗಣಿಸುವ ನಿರಾಸಕ್ತತೆ ಆಧ್ಯಾತ್ಮಿಕ ಸಾಧಕನಿಗಿದ್ದಂತೆ ಶಾಸ್ತ್ರಜ್ಞನಲ್ಲಿಯೂ ಇರಬೇಕಾಗುತ್ತದೆ. ಇಬ್ಬರಿಗೂ ಸತ್ಯಶೋಧನೆಯಲ್ಲಿ ಆತ್ಮಾರ್ಪಣೆ ಬೇಕಾಗುತ್ತದೆ. ಈ ದೃಷ್ಟಿಯಿಂದ ಒಬ್ಬ ಶ್ರೇಷ್ಠ ಶಾಸ್ತ್ರಜ್ಞ ಶ್ರೇಷ್ಠ ಸಾಧಕನಿಗಿಂತಲೂ ಕಡಿಮೆಯವನಲ್ಲ.

**ಟಿಪ್ಪಣಿಗಳು**

೧. C. T. Kurien (1973) : *Guide to Research in Economics*, Madras : Sangam Publishers.

೨. 'ಕಾರ್ಯಗತಿ'ಯೇ processಗೆ ಸಮಶಬ್ದ. 'ಕಾರ್ಯವಿಧಿ' ಎಂದರೆ procedure ಎಂದು ಅಪಾರ್ಥವಾಗುತ್ತದೆ.

೩. ISEC – Institute for Social and Economic Change, Bangalore.

೪. Subjectivity ಈ ಪದವನ್ನು ಕೆಲವರು ಕನ್ನಡದಲ್ಲಿ ವಿಷಯ ನಿಷ್ಠತೆಯೆಂದು ತಪ್ಪಾಗಿ ಅನುವಾದಿಸುತ್ತಾರೆ. Subject ಇದಕ್ಕೆ ಇಂಗ್ಲಿಷ್‌ನಲ್ಲಿ ಎರಡು ಬೇರೆ ಬೇರೆ ಅರ್ಥಗಳಿವೆ. Topic ವಿಷಯ ಅಥವಾ ವಸ್ತು ಎಂದು ಒಂದು ಅರ್ಥವಾದರೆ, ಇನ್ನೊಂದು ಅರ್ಥ ಕರ್ತೃವಿಗೆ ಸಂಬಂಧಪಟ್ಟ, ತನ್ನ ಎಂದು ಆಗುತ್ತದೆ. ಇಂಗ್ಲಿಷಿನ subjectಗೆ ಎರಡು ಅರ್ಥಗಳಿವೆಯೇ ಹೊರತು, ಕನ್ನಡದ (ಅಥವಾ ಸಂಸ್ಕೃತದ) ವಿಷಯ ಈ ಪದಕ್ಕೆ ಅವೇ ಎರಡು ಅರ್ಥಗಳಿಲ್ಲ. Subjective ಇದನ್ನು ಈ ಕಾರಣಕ್ಕಾಗಿ 'ಆತ್ಮನಿಷ್ಠತೆ' ಎಂದು ಹೇಳಬಹುದು; ಕರ್ತೃನಿಷ್ಠತೆಯೆಂದರೂ ತಪ್ಪಾಗಲಾರದು. ಇಲ್ಲಿಯ ಆತ್ಮ ಆಧ್ಯಾತ್ಮಿಕ ಆತ್ಮ ಅಥವಾ Soul ಅಲ್ಲ.

೫. ನೋಡಿ : Scott Gordon (1991) : *History and Philosophy of Social Science*, Routledge.

ಡಾ|| ಎಂ. ವಿ. ನಾಡಕರ್ಣಿ
ಪರಿಜ್ಞಾನ ಬಾಲವಿಹಾರ, ಮಹಡಿ, ೨ನೇ ಕ್ರಾಸ್
ನಾಗರಬಾವಿ, ಬೆಂಗಳೂರು - ೫೬೦ ೦೭೨

**ಹೊಸತು** : ಸುಮಾರು ಆರು ದಶಕಗಳಾಗಿರಬೇಕು ನೀವು ಕಮ್ಯುನಿಸ್ಟರಾಗಿ, ಭಾರತ ಕಮ್ಯುನಿಸ್ಟ್ ಪಕ್ಷ (ಸಿ.ಪಿ.ಐ.)ವನ್ನು ಸೇರಿ. ಈ ನಡುವೆ ನಮ್ಮ ರಾಷ್ಟ್ರದ ರಾಜಕೀಯದಲ್ಲಿ ಏನೆಲ್ಲಾ ಬದಲಾವಣೆಗಳಾಗಿವೆ. ಒಂದು ದಿನವೂ ಅಧಿಕಾರದ ಕುರ್ಚಿ ನಿಮಗೆ ವೈಯಕ್ತಿಕವಾಗಿ ದಕ್ಕಲಿಲ್ಲ. ಇದೇನಿದು, ಈ ಪಕ್ಷದೊಡನೆ ನಿಮ್ಮ ಅವಿಚಲ ದಾಂಪತ್ಯ ನಿಷ್ಠೆ ? ಬೇರೆ ಪಕ್ಷಗಳಿಗೆ ಸೇರಿದ್ದರೆ ರಾಷ್ಟ್ರ ನಾಯಕರಾಗಿಯೇ ರಾರಾಜಿಸಬಹುದಿತ್ತಲ್ಲ ? ನಿಮ್ಮ ವೈಯಕ್ತಿಕ ಹಿನ್ನೆಲೆಯನ್ನು ನಮ್ಮ ಓದುಗರೊಡನೆ ಒಂದಿಷ್ಟು ಹಂಚಿಕೊಳ್ಳಬಹುದೇ ? ನೀವು ನಾಗಪುರವಾಸಿಯಾಗಿದ್ದೂ ಆರ್‌ಎಸ್‌ಎಸ್‌ನ ಆಕರ್ಷಣೆಯಿಂದ ತಪ್ಪಿಸಿಕೊಂಡಿದ್ದಾದರೂ ಹೇಗೆ ?

**ಬರ್ಧನ್** : ಇದು ದಾಂಪತ್ಯನಿಷ್ಠೆಗಿಂತ ಅಪೂರ್ವವಾದ ಮಾತೃವಾತ್ಸಲ್ಯವೆಂದರೇ ಚೆನ್ನ. ಸೈದ್ಧಾಂತಿಕ ನಿಷ್ಠೆ, ವೈಜ್ಞಾನಿಕ ಮನೋಭಾವಗಳಿದ್ದರೆ ಅಧಿಕಾರದ ವಾಸ್ತವ ಕಲ್ಪನೆ ದಕ್ಕುವುದು ಸಾಧ್ಯ. ವಿದ್ಯಾರ್ಥಿ ಜೀವನದಲ್ಲಿ ಕಳೆದ ನಲವತ್ತರ ದಶಕದ ಆರಂಭದಲ್ಲೇ ಅಖಿಲ ಭಾರತ ವಿದ್ಯಾರ್ಥಿ ಒಕ್ಕೂಟದ ಪ್ರಭಾವಕ್ಕೆ ಸಿಕ್ಕಿ, ಮೊದಲಿಗೆ ನಾನು ಓದಿದ ಪುಸ್ತಕಗಳೆಂದರೆ ಕಮ್ಯುನಿಸ್ಟ್ ಮ್ಯಾನಿಫೆಸ್ಟೋ ಹಾಗೂ ಮಾರ್ಕ್ಸ್‌ವಾದ ಕುರಿತು ಬುಖಾರಿನ್ ಬರೆದ ಬರಹಗಳು. ಚಳುವಳಿಯಲ್ಲಿ ಜೈಲು ಸೇರಿದ್ದರಿಂದ ಸುಮಾರು ೧೭ರ ವಯಸ್ಸಿನಲ್ಲೇ ಜೈಲಿನ ಏಕಾಂತದಲ್ಲಿ, ಇನ್ನಿತರ ಚಳುವಳಿಕಾರರ ಸಖ್ಯದಲ್ಲಿ ಗಂಭೀರ ವ್ಯಾಸಂಗ, ಚರ್ಚಿಸಿ ತಿಳಿಯಲು ಅವಕಾಶ – ಇವು ಅಂದಿನ ಇನ್ನಿತರ ಸ್ವಾತಂತ್ರ್ಯ ಹೋರಾಟಗಾರರಿಗೆ ಆದಂತೆಯೇ ನನ್ನ ವ್ಯಕ್ತಿತ್ವವನ್ನೂ ಸ್ಥಾಯಿಯಾಗಿ ನಿರ್ಮಿಸಿದವು. ನಾನು ಮೂಲ ನಾಗಪುರದವನಲ್ಲ. ಇಂದಿನ ಬಾಂಗ್ಲಾದೇಶದ ಸಿಲ್ಹಾರಿನಲ್ಲಿ ಹುಟ್ಟಿ ಬಾಲ್ಯ ಕಳೆದಿದ್ದವನು. ಅಪ್ಪನ ಕೇಂದ್ರ ಸರ್ಕಾರಿ ನೌಕರಿಯಿಂದಾಗಿ ವರ್ಗಾವಣೆಯಾಗಿ, ನನ್ನ ವಿದ್ಯಾರ್ಥಿ ಜೀವನ ನಾಗಪುರದಲ್ಲಿ ಕಳೆಯಿತು. ನಾನು ಹಲವು ಸಹೋದರರ ಪೈಕಿ ಅತ್ಯಂತ ಕಿರಿಯ. ಬಡಜನರ ದಾರುಣ ಸ್ಥಿತಿಗೆ ಮರುಗುವ ಹೃದಯ ಉಳ್ಳವರು ಕೇವಲ ರಾಜಕೀಯ ಅಧಿಕಾರ ಬಯಸುವುದಿಲ್ಲ. ಕಮ್ಯುನಿಸ್ಟರು ಬಯಸುವುದು ಸಾಮಾಜಿಕ ಪರಿಸ್ಥಿತಿಯ ಮೂಲಭೂತ ಬದಲಾವಣೆ. ಇದು ಎಷ್ಟು ಸಾಧಕವಾಗುತ್ತದೋ ಅಷ್ಟೂ ಅಧಿಕಾರ ದೊರೆಯುತ್ತದೆ. ಕಮ್ಯುನಿಸ್ಟರ ಧ್ಯೇಯ ಸಿದ್ಧಾಂತ ನಿಷ್ಠೆಯೇ ವಿನಾ ಅಧಿಕಾರ ಲಾಲಸೆಯಲ್ಲ. ನಮ್ಮಮ್ಮ ಅಂದಿನ ಎಲ್ಲ ಅಮ್ಮಂದಿರಂತೆ ದೈವನಿಷ್ಠೆಯುಳ್ಳವಳಾಗಿದ್ದಳು. ಅಂದಿನ ಬಂಗಾಳಿ ಸಾಧು ಒಬ್ಬರನ್ನು ಸಾಯಿಬಾಬಾ ಎಂದು ಕರೆಯುತ್ತಿದ್ದರು. ನಾನು ನಾಸ್ತಿಕನಾಗಿ ಅಡ್ಡಾಡುತ್ತಿದ್ದರೂ, ಅವರನ್ನು ಗೌರವಿಸುತ್ತಿದ್ದ ನನಗೂ ಒಂದಿಷ್ಟು ದೈವಭಕ್ತಿ ಉಂಟುಮಾಡುವ ಉಪದೇಶ ನೀಡಲು ಅಮ್ಮ ಅವರನ್ನು ಬೇಡಿಕೊಂಡಾಗ, ಆ ಬಾಬಾ, ಅವನಿಗೆ ನೀವೆಲ್ಲಾ ನಂಬಿರುವ ದೈವಕ್ಕಿಂತ ಹಿರಿಯ ದೈವ ಎಂದರೆ ಜನತೆಯಲ್ಲಿ ನಂಬಿಕೆಯಿದೆ, ಚಿಂತೆಯಿಲ್ಲ ಎಂದಿದ್ದರು. ನಾಗಪುರಕ್ಕೆ ಆರ್‌ಎಸ್‌ಎಸ್‌ನೊಡನೆ ಅಂಥ ಗಾಢವಾದ ನಂಟೇನೂ ಇಲ್ಲ. ಕೇವಲ ಒಮ್ಮೆಯಷ್ಟೆ ಅಲ್ಲಿ ಭಾಜಪ ಚುನಾವಣೆಯಲ್ಲಿ ಆರಿಸಿಬಂದದ್ದು. ನಾನು ಆರಿಸಿಕೊಂಡ ದಾರಿ ಮತ್ತು ನನ್ನ ಸಾಧನೆಯ ಬಗ್ಗೆ ನನಗೆ ತೃಪ್ತಿ ಇದೆ.

**ಹೊಸತು** : ನಿಮ್ಮ ಪಕ್ಷಕ್ಕೆ ಇಂದು ಎಂಬತ್ತು ವರ್ಷ. ಸಿ.ಪಿ.ಐ. ಬೂರ್ಷ್ವಾ ರಾಜಕೀಯ ವ್ಯವಸ್ಥೆಯಲ್ಲಿ ಕೇವಲ ಮತ್ತೊಂದು ರಾಜಕೀಯ ಪಕ್ಷವೇ ? ರಾಜಕೀಯ ಚಳುವಳಿಯೇ ? ವಿಶಾಲವಾದ ಸಾಮಾಜಿಕ ಚಳುವಳಿಯೇ ? ನೀವು ಪದೇ ಪದೇ ಬೂರ್ಷ್ವಾ-ಪಕ್ಷಗಳೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುವುದನ್ನು ಗಮನಿಸಿದ ಚಿಂತನಶೀಲರಿಗೆ ಸ್ವಲ್ಪ ನಿರಾಶೆಯಾಗಿರುವಂತಿದೆಯಲ್ಲಾ ?

**ಬರ್ಧನ್** : ಕಾಂಗ್ರೆಸ್ ಮತ್ತು ಗಾಂಧೀಜಿ ಬ್ರಿಟಿಷ್ ಆಳ್ವಿಕೆಯ ಸಾಮ್ರಾಜ್ಯದ ಚೌಕಟ್ಟಿನ ಒಳಗೇ ಪ್ರಜಾಪ್ರಭುತ್ವಾತ್ಮಕ ಬೆಳವಣಿಗೆಗಾಗಿ ಸೀಮಿತಮಟ್ಟದಲ್ಲಿ ಹೋರಾಡುತ್ತಿದ್ದಾಗ, ಭಾರತದ ಹೋರಾಟದ ಮುಖ್ಯ ಗುರಿ ಸಂಪೂರ್ಣ ಸ್ವರಾಜ್ಯವೆಂದು ಘೋಷಿಸಿ, ಅದನ್ನು ಸ್ವಾತಂತ್ರ್ಯ ಹೋರಾಟವಾಗಿಸಿದ ಹಿರಿಮೆ ಸಿ.ಪಿ.ಐ.ನದು. ನಮ್ಮದು ಮೂಲತಃ ಸಾಮಾಜಿಕ ಬದಲಾವಣೆ ಹುಟ್ಟುಹಾಕುವ ಪಕ್ಷ, ಕೇವಲ ಅದನ್ನು ತಿದ್ದುವ, ತೇಪೆ ಹಾಕುವ ಬಯಕೆಯುಳ್ಳದ್ದಲ್ಲ. ಅದು ರಾಜಕೀಯ ಪಕ್ಷವೂ ಹೌದು. ಅದಕ್ಕಿಂತ ಮಿಗಿಲಾಗಿ ಸಾಮಾಜಿಕ ಚಳುವಳಿಯೂ ಹೌದು. ಬೂರ್ಷ್ವಾ ವ್ಯವಸ್ಥೆಯಲ್ಲಿದ್ದುಕೊಂಡೇ ಅದರ ಸಂಪೂರ್ಣ ಬದಲಾವಣೆಗೆ ಹೋರಾಡುವುದು ಇಂದಿನ ಸಂದರ್ಭದಲ್ಲಿ ಒಂದು ಐತಿಹಾಸಿಕ ಅನಿವಾರ್ಯತೆ. ಈ ಬಗ್ಗೆ ನಿರಾಸೆ ಸಲ್ಲ. ಇದ್ದುದರಲ್ಲಿ ಇರುವ ಅವಕಾಶದಲ್ಲಿ ಉತ್ತಮವಾದ ಪಕ್ಷಗಳೊಂದಿಗೆ ತಾತ್ಕಾಲಿಕ ಒಪ್ಪಂದಗಳನ್ನು ಮಾಡಿಕೊಳ್ಳುವುದು ರಾಜಕೀಯ ತಂತ್ರದ ವಿಷಯವೇ ವಿನಾ ಅದು ಸೈದ್ಧಾಂತಿಕೆಯ ರಾಜಿ ಅಲ್ಲ.

**ಹೊಸತು** : ಕಮ್ಯುನಿಸ್ಟ್ ಪಕ್ಷಗಳು ಕೆಲವು ಕಡೆ ಮಾತ್ರ ಒಂದಿಷ್ಟು ಅಧಿಕಾರ ಪಡೆಯಲು ಸಾಧ್ಯವಾಗಿ ಅಖಿಲ ಭಾರತದ ವ್ಯಾಪ್ತಿಯಲ್ಲಿ ನಗಣ್ಯವಾಗಿಲ್ಲವೇ ? ಅದೇಕೆ ಈ ಅಸಮ ಬೆಳವಣಿಗೆ ? ಎಲ್ಲೋ ಸಂಘಟನಾತ್ಮಕ ವೈಫಲ್ಯವಿದ್ದಂತೆ ತೋರುತ್ತದಲ್ಲಾ? ನಿಮ್ಮ ಉದ್ದೇಶದಲ್ಲಿ ಯಶಸ್ಸು ಗಳಿಸಿದ ಸಮಾಧಾನ ಇದೆಯೇ ?

**ಬರ್ಧನ್** : ದೇಶದ ಅನೇಕ ರಾಜ್ಯಗಳು ತಮ್ಮದೇ ವಿಶಿಷ್ಟ ರಾಷ್ಟ್ರೀಯತೆಯನ್ನು ಮಿಂಚುವಷ್ಟು ಐತಿಹಾಸಿಕವಾದ ವಿಭಿನ್ನ ಅನುಭವಗಳನ್ನು ಒಳಗೊಂಡಿದ್ದು, ವಿಭಿನ್ನ ಸಾಮಾಜಿಕ ಪರಿಸ್ಥಿತಿಯನ್ನು ಪಡೆದಿವೆ. ಹೀಗಾಗಿ ಧ್ಯೇಯನಿಷ್ಠ ರಾಜಕೀಯ ಪಕ್ಷ



# ಸೈದ್ಧಾಂತಿಕ ಭಿನ್ನಾಭಿಪ್ರಾಯಗಳು ಕರಗುವುದು ಹೋರಾಟದ ಕಣದಲ್ಲಿ

– ಎ. ಬಿ. ಬರ್ಧನ್

ಎ. ಬಿ. ಬರ್ಧನ್ ಅವರು ಇನ್ನೂ ಸಕ್ರಿಯರಾಗಿರುವ ಭಾರತದ ಒಬ್ಬ ಅತ್ಯಂತ ಹಿರಿಯ, ಮೇಧಾವಿ ಕಮ್ಯುನಿಸ್ಟ್. ಎಂಬತ್ತು ವರ್ಷಗಳ ಹಿಂದೆ ಸ್ಥಾಪನೆಯಾದ ದಿನದಿಂದ ಇಂದಿನವರೆಗೆ ತನ್ನ ಹೆಸರನ್ನೂ ಚಿಹ್ನೆಯನ್ನೂ ಅವಿಚ್ಛಿನ್ನವಾಗಿ ಉಳಿಸಿಕೊಂಡಿರುವ ಖ್ಯಾತಿಯ ಭಾರತ ಕಮ್ಯುನಿಸ್ಟ್ ಪಕ್ಷದ ಪ್ರಧಾನ ಕಾರ್ಯದರ್ಶಿಯಾಗಿ ಎರಡು ದಶಕಗಳಿಗೂ ಮಿಕ್ಕು ನಾಯಕತ್ವ ನೀಡಿರುವ ಈ ನಿಸ್ವಾರ್ಥ ಕಾರ್ಮಿಕ ನಾಯಕ ಮೊನ್ನೆ ಬೆಂಗಳೂರಿಗೆ ಪಕ್ಷದ ರಾಜ್ಯ ಮಂಡಳಿ ಆಚರಿಸಿದ ಪಕ್ಷದ ೮೦ನೇ ಹುಟ್ಟುಹಬ್ಬ ಹಾಗೂ ಅಖಿಲಭಾರತ ಬ್ಯಾಂಕ್ ನೌಕರರ ಒಕ್ಕೂಟದ ೬೦ನೇ ಹುಟ್ಟುಹಬ್ಬದಲ್ಲಿ ಪಾಲ್ಗೊಳ್ಳಲು ಮುಖ್ಯ ಅತಿಥಿಯಾಗಿ ಬಂದಿದ್ದಾಗ "ಹೊಸತು" ಅವರನ್ನು ಸಂದರ್ಶಿಸಿ ಪ್ರಚಲಿತ ಸಮಸ್ಯೆಗಳನ್ನು ಕುರಿತು ಚರ್ಚಿಸಿತು.

**(ಸಂದರ್ಶಕರು : ಡಾ॥ ಜಿ. ರಾಮಕೃಷ್ಣ, ಎಸ್. ಸುರೇಂದ್ರ, ಕೆ. ಎಸ್. ಪಾರ್ಥಸಾರಥಿ, ಕೆ. ಪಿ. ಸ್ವಾಮಿ)**



ಎಲ್ಲೆಡೆಯೂ ಒಂದೇ ರೀತಿಯ ಯಶಸ್ಸು ಗಳಿಸಲು ಸಾಧ್ಯವಿಲ್ಲ. ಆದರೂ ಸಿ.ಪಿ.ಐ.ನ ಹಾಗೂ ಇತರ ಎಡ ಪಂಥೀಯ ರಾಜಕೀಯವು ದೇಶದ ಎಲ್ಲೆಡೆ ಹರಡಿದ್ದು, ಅದು ಚುನಾಯಿತ ಸ್ಥಾನಗಳ ಸಂಖ್ಯೆಯಲ್ಲಿ ಪ್ರತಿಬಿಂಬಿಸದಿದ್ದರೂ, ಸಾಮಾಜಿಕವಾಗಿ ಅರ್ಥಪೂರ್ಣವಾಗಿ ಬೇರುಬಿಟ್ಟಿದೆ. ನಾವು ಅಷ್ಟು ದುರ್ಬಲರೇ ಆಗಿದ್ದರೆ, ದಿನ ಬೆಳಗಾದರೆ ಬೂರ್ಷ್ವಾ ಪಕ್ಷಗಳು ಅವರ ಮಾಧ್ಯಮಗಳು ನಮ್ಮ ಬಗ್ಗೆ ಏಕೆ ಹೀಗೆ ತೀವ್ರ ದಾಳಿ ನಡೆಸುತ್ತಿದ್ದುವು ? ರಾಜಕೀಯವಾಗಿ ದುರ್ಬಲವಾಗಿರುವುದಕ್ಕೆ ನಮ್ಮಲ್ಲಿ ಸಂಘಟನಾತ್ಮಕ ದೌರ್ಬಲ್ಯಗಳಿರುವುದು ನಿಜ. ಇದನ್ನು ಉತ್ತಮಪಡಿಸಿಕೊಳ್ಳಲು ಪ್ರಯತ್ನಗಳು ನಡೆಯುತ್ತಲೇ ಇವೆ.

**ಹೊಸತು :** ಜಾತಿಗಳ ಸಮಸ್ಯೆ ಕಮ್ಯುನಿಸ್ಟ್ ಪಕ್ಷದ ಬೆಳವಣಿಗೆಗೆ ಅಡ್ಡಿಯಾಗಿರುವುದು ವಾಸ್ತವ. ವರ್ಗಪ್ರಜ್ಞೆ ವ್ಯಾಪಕವಾಗಿ ಬೆಳೆಯುವವರೆಗೆ ನಿರೀಕ್ಷಿಸುತ್ತಾ ಕೂರುವುದಕ್ಕಿಂತ ದಲಿತರ ದೃಷ್ಟಿಕೋನಕ್ಕೆ ಬೆಂಬಲ ನೀಡಿ ಅವರನ್ನು ಆಕರ್ಷಿಸುವುದು ಸೂಕ್ತವಲ್ಲವೇ ?

**ಬರ್ಧನ್ :** ವರ್ಗಪ್ರಜ್ಞೆಯನ್ನು ಬೆಳೆಸುವುದು, ಉಪದೇಶಕ್ಕಿಂತ ಹೋರಾಟಗಳಲ್ಲಿ ಭಾಗವಹಿಸುವುದರಿಂದ ಆಗುವ ಪ್ರಕ್ರಿಯೆ. ಕಮ್ಯುನಿಸ್ಟ್ ಪಕ್ಷಕ್ಕೆ ಅತ್ಯಂತ ಹತ್ತಿರವಾದುದು ದಲಿತ ಪ್ರಜ್ಞೆ. ತಾತ್ಕಾಲಿಕ ಚುನಾವಣೆಗಳ ಪ್ರಯೋಜನಕ್ಕಾಗಿ ವರ್ಗಪ್ರಜ್ಞೆಯ ಹೋರಾಟವನ್ನು ಜಾತಿಪ್ರಜ್ಞೆಯ ಹೋರಾಟವಾಗಿಸುವುದು ಸರಿಯಲ್ಲ. ದಲಿತ ಪ್ರಜ್ಞೆಯಲ್ಲಿ ರೂಢ ಮೂಲ ಪ್ರಗತಿ ಪರ ಬದಲಾವಣೆಗಳು ಆಗುತ್ತಿವೆ. ಅವರ ಕೆಲವು ನಾಯಕರು ತಮ್ಮ ಹಿಡಿತ ಉಳಿಸಿಕೊಳ್ಳುವ ವ್ಯರ್ಥಪ್ರಯತ್ನವಾಗಿ ಜಾತಿವಾದಕ್ಕೆ ಒಮ್ಮೊಮ್ಮೆ ಮೊರೆಹೋಗುತ್ತಿದ್ದಾರೆ. ಉದಾಹರಣೆಗೆ ಶ್ರೀಮತಿ ಮಾಯಾವತಿ ತಮ್ಮ ಅನುಯಾಯಿಗಳನ್ನು ''ಕಮ್ಯುನಿಸ್ಟರ ಬಳಿ ಸುಳಿಯಬೇಡಿ. ಅವರು ನಿಮ್ಮ ಮನಸ್ಸನ್ನು ತಮ್ಮತ್ತ ಒಲಿಸಿಕೊಂಡುಬಿಡುತ್ತಾರೆ'' ಎಂದು ತಾಕೀತು ಮಾಡಿದ್ದುಂಟು. ಆದರೆ ಈಗ ಅವರಲ್ಲೂ ಇದರ ನಿರುಪಯುಕ್ತತೆ ಅರ್ಥವಾಗುತ್ತಿದ್ದು, ದಲಿತರ ಐಕಮತ್ಯಕ್ಕೆ ಚಾಲನೆ ದೊರೆಯುತ್ತಿದೆ. ಕಮ್ಯುನಿಸ್ಟ್ ಪಕ್ಷ ಇದನ್ನು ಸ್ವಾಗತಿಸುತ್ತದೆ. ಪಶ್ಚಿಮ ಬಂಗಾಳದಲ್ಲಿ ಎಂದೂ ಜಾತೀವಾದಕ್ಕೆ ಬಲವಿಲ್ಲ. ಕೇರಳದಲ್ಲಿ ಇನ್ನೂ ಸ್ವಲ್ಪ ಉಳಿದಿದೆ.

**ಹೊಸತು :** ಬಂಡವಾಳದ ಸ್ವರೂಪ ಜಾಗತಿಕವಾಗುತ್ತಿರುವಂತೆಯೇ, ಕಾರ್ಮಿಕವರ್ಗ ದಲ್ಲೂ ಗುಣಾತ್ಮಕ ಬದಲಾವಣೆಗಳಾಗುತ್ತಿವೆ. ಇನ್ನೆಷ್ಟು ದಿನ ಕಮ್ಯುನಿಸ್ಟ್ ಪಕ್ಷಗಳು ಕೇವಲ ಕಾರ್ಮಿಕ ಸಂಘಗಳನ್ನು ಆಧರಿಸಿ ಅಸ್ತಿತ್ವದಲ್ಲಿರಬಲ್ಲವು ?

**ಬರ್ಧನ್ :** ನಾವು ಕೇವಲ ಕಾರ್ಮಿಕ ಸಂಘಗಳನ್ನು ಅವಲಂಬಿಸಿದ್ದೇವೆ ಎನ್ನುವುದು ಮಾಧ್ಯಮಗಳು ಪ್ರಚಾರ ಮಾಡುವ, ವಾಸ್ತವವನ್ನು ಮುಚ್ಚಬೇಕಾಗಿರುವ ಪ್ರಯತ್ನ. ನಮ್ಮ ಪಕ್ಷದ ಕಾರ್ಯಕ್ರಮ ರೈತಾಪಿವರ್ಗವನ್ನೂ ಸೇರಿ ಎಲ್ಲ ವರ್ಗದ ಜನರನ್ನೂ ತಲುಪಿದೆ. ಇದರಿಂದ ಆಳುವ ವರ್ಗಕ್ಕೆ ಕಸಿವಿಸಿಯಾಗಿದೆ. ಉತ್ಪಾದನೆಯಲ್ಲಿ ತಾಂತ್ರಿಕತೆ ಸಂಕೀರ್ಣ ವಾಗುತ್ತಿದ್ದಂತೆ, ಕೈಗಾರಿಕಾ ಕಾರ್ಮಿಕ ವರ್ಗ ಶ್ರಮಜೀವಿಗಳ ಮುಂಚೂಣಿಯಲ್ಲಿರುವುದು ಅರ್ಥಪೂರ್ಣವಾದುದು. ಕೈಗಾರಿಕಾ ಕಾರ್ಮಿಕವರ್ಗವೂ ಸೇರಿ ಶ್ರಮಜೀವಿಗಳಲ್ಲಿ ರಾಜಕೀಯ ಪ್ರಜ್ಞೆ ಅಪಾರವಾಗಿ ಬೆಳೆಯುತ್ತಿದೆ. ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣಗಳ ಬೇಗೆಯಲ್ಲಿ ಶ್ರಮಜೀವಿಗಳ ಬದುಕು ದುರ್ಭರವಾಗುತ್ತಿರುವುದೇ ಈ ಬೆಳವಣಿಗೆಗೆ ಒಂದು ಪ್ರಮುಖ ಕಾರಣ.

**ಹೊಸತು :** ಚಿಂತನಶೀಲರಿಗೆ, ಪ್ರಗತಿಪರರಿಗೆ ಕಮ್ಯುನಿಸ್ಟರ ನಡುವಿನ ಒಡಕು ಅರ್ಥವಾಗುತ್ತಿಲ್ಲ. ಸಾಧಾರಣ ಜನಕ್ಕೆ ಈ ಎರಡೂ ಪಕ್ಷಗಳ ನಡುವೆ ಯಾವುದೇ ರೀತಿಯ ಭಿನ್ನತೆ ಕಂಡುಬರುತ್ತಿಲ್ಲ. ಇನ್ನೆಷ್ಟು ದಿವಸ ಕಾಯಬೇಕು ಕಮ್ಯುನಿಸ್ಟ್ ಐಕ್ಯತೆಗೆ ? ಈ ಒಡಕಿನಿಂದ ನಿಮ್ಮ ವಿರೋಧಿಗಳಿಗಷ್ಟೇ ಲಾಭವಲ್ಲವೇ ?

**ಬರ್ಧನ್ :** ಸಿ.ಪಿ.ಐ. ಯಾವಾಗಲೂ ಕಮ್ಯುನಿಸ್ಟ್ ಐಕ್ಯತೆಯನ್ನೇ ಪ್ರತಿಪಾದಿಸುತ್ತಾ ಬಂದಿದೆ. ನಮ್ಮ ನಡುವೆ ಕಾರ್ಯಕ್ರಮಗಳ ಬಗೆಗಿನ ಭಿನ್ನತೆಯೂ ಉಳಿದಿಲ್ಲ. ಎಡ ಪಕ್ಷಗಳು ಎಲ್ಲ ಮಟ್ಟದಲ್ಲೂ ಒಂದುಗೂಡಿ ಕಾರ್ಯಕ್ರಮಗಳನ್ನು ನಡೆಸುತ್ತಿದ್ದು, ಹೋರಾಟದ ಹಾದಿಯಲ್ಲಿ ಐಕ್ಯತೆಗೆ ಅಗತ್ಯವಾದ ಮನೋಭಾವ ಒಡಮೂಡುತ್ತಿದೆ. ಸೈದ್ಧಾಂತಿಕ ಭಿನ್ನಾಭಿಪ್ರಾಯಗಳು ಕರಗುವುದು ಹೋರಾಟದ ಕಣದಲ್ಲಿ. ಈಗ ಚಾರಿತ್ರಿಕ ಹೊರೆಗಳ ಬಳುವಳಿಯನ್ನು ಪಡೆಯದ ಯುವಪೀಳಿಗೆ ನಾಯಕತ್ವದಲ್ಲಿ ಬಂದಿದೆ. ಒಡಕಿನ ಪ್ರಾರಂಭಿಕ ಅವಸ್ಥೆಯಲ್ಲಿ ಸಕಾರಣವೋ ಎಂದೆನಿಸಿರಬಹುದಾದ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಕಾರಣಗಳೂ ಈಗ ಇಲ್ಲವಾಗಿವೆ. ಹೆಚ್ಚುತ್ತಿರುವ ಐಕ್ಯತೆಯನ್ನು ಕಂಡು ಕರುಬುವ ಭಯಭೀತ ಬೂರ್ಷ್ವಾ ವರ್ಗ ನಮ್ಮ ನಡುವಿನ ಅನೈಕಮತ್ಯದ ಬಗ್ಗೆ ಕಳಕಳಿ ವ್ಯಕ್ತಪಡಿಸುವುದು ಸೋಜಿಗವೆನಿಸಿದೆ ! ವಾಸ್ತವದಲ್ಲಿ ಎಡಪಂಥೀಯರು ಐಕ್ಯತೆಯತ್ತ ಸ್ಪಷ್ಟವಾಗಿ ಸಾಗುತ್ತಿದ್ದಾರೆ.

**ಹೊಸತು :** ರಾಜಕೀಯ ಪಟಲದ ಕೇಂದ್ರ ಅಥವಾ ಕೇಂದ್ರದ ಬಲಬದಿಯ ಶಕ್ತಿಗಳ ನಡುವೆ ಪ್ರಭುತ್ವವನ್ನು ಹಿಡಿಯಲು ಪರಸ್ಪರ ಹಣಾಹಣಿಯಾಗುತ್ತಿರುವಾಗ, ಕೇಂದ್ರದ ಶಕ್ತಿಗಳಿಗೆ ಎಡಪಂಥೀಯರು ಬೆಂಬಲಿಸಲು ಪ್ರಾರಂಭಿಸಿ ಸಾಕಷ್ಟು ಸಮಯವಾಯಿತು. ಇನ್ನೆಷ್ಟು ದಿವಸ ಹೀಗಿರುತ್ತೀರಿ ? ಎಡ ಪಕ್ಷಗಳೇ ಒಂದು ಶಕ್ತಿ ಕೇಂದ್ರವಾಗುವುದು ಎಂದು ? ಕೇಂದ್ರದೊಡನೆ ಕೇವಲ ಐಕಮತ್ಯ ಮಾತ್ರ ಕಂಡುಬಂದಿದೆ. ಆದರೆ ಅವರ ವಿರುದ್ಧ ಹೋರಾಟ ಕಾಣುತ್ತಲೇ ಇಲ್ಲವಲ್ಲ?

**ಬರ್ಧನ್ :** ಕೇಂದ್ರ, ಅದರ ಎಡ ಬಲಬದಿಗಳು ಎಂಬ ಪರಿಕಲ್ಪನೆ ಒಂದು ಸ್ಥಾಯೀ ಬಿಂದುವಲ್ಲ. ಅವು ನಿರಂತರ ಚಲನಶೀಲವಾದುವು. ಒಂದು ನಿರ್ದಿಷ್ಟ ಪರಿಸ್ಥಿತಿ ಮತ್ತು ಕಾಲ ಮಾನದಲ್ಲಿ, ಹೋಲಿಕೆಯಲ್ಲಿ ಪ್ರಗತಿಪರವೆಂದು ಕಂಡುಬರುವ ರಾಜಕೀಯ ಶಕ್ತಿಗಳಿಗೆ ತಾತ್ಕಾಲಿಕ ಬೆಂಬಲ ನೀಡುವುದು ಸರಿಯಾದ ರಾಜಕೀಯ ನೀತಿ. ಈ ನೀತಿಯು ಸರಿಯಾದು ದೆಂದು ಕಳೆದ ಚುನಾವಣೆಯಲ್ಲಿ ಎಡಪಕ್ಷಗಳಿಗೆ ಸಾಕಷ್ಟು ಜನಮತ ದೊರೆತದ್ದು ಸ್ಪಷ್ಟ ಪಡಿಸುತ್ತದೆ. ಎಡಪಕ್ಷಗಳಿಗೆ ನಿರ್ಣಾಯಕ ಮತ ದೊರೆತಾಗ ಅವು ಸ್ವತಂತ್ರವಾಗಿ ವರ್ತಿಸು ತ್ತವೆ. ಈ ತಾತ್ಕಾಲಿಕ ಪರಿಸ್ಥಿತಿಯತ್ತ ಬೊಟ್ಟುಮಾಡಿ ಮಾಧ್ಯಮಗಳ ಮೂಲಕ ಆಳುವ ವರ್ಗ ಪ್ರಚೋದಿಸಿದಮಾತ್ರಕ್ಕೆ ಕೇಂದ್ರೀಯ ಶಕ್ರಿಗಳಿಗೆ ನಮ್ಮ ಬೆಂಬಲ ಹಿಂತೆಗೆದುಕೊಂಡು ಅಧಿ ಕಾರವನ್ನು ಕೇಂದ್ರದಿಂದ ಬಲಪಂಥೀಯರ ಭಾಜಪದಂತ ಕೋಮುವಾದಿ ಪ್ರಗತಿವಿರೋಧಿ ಶಕ್ತಿಗಳ ಕೈಗೆ ದೂಡುವುದಕ್ಕೆ ಎಡಪಕ್ಷಗಳು ತಾವಾಗೇ ನೆರವು ನೀಡುವುದಿಲ್ಲ.

**ಹೊಸತು :** ಲ್ಯಾಟಿನ್ ಅಮೆರಿಕಾ ರಾಜ್ಯಗಳಲ್ಲಿ ಈಗ ಎಡಶಕ್ತಿಗಳು ಪ್ರಜಾಪ್ರಭುತ್ವಾತ್ಮಕವಾಗಿ ಅಧಿಕಾರಕ್ಕೆ ಬಂದಿರುವುದು ಒಂದು ವಿಶಿಷ್ಟ ಬೆಳವಣಿಗೆ. ಅವರ ಹೋರಾಟದ ವಿಧಾನಗಳು ಸಾಂಪ್ರದಾಯಿಕ ವಿಧಾನಗಳಿಗಿಂತ ವಿಭಿನ್ನವಾದುವೇ ? ಅವುಗಳ ಸ್ವರೂಪವೇನು ? ಅವು ಕೇವಲ ಅಮೆರಿಕಾ ಸಂಯುಕ್ತ ಸಂಸ್ಥಾನದ ವಿರುದ್ಧವಾದ ಹಾಗೂ ರಾಷ್ಟ್ರೀಯತೆಯನ್ನು ಮೆರೆಯುವಂಥವೋ ಅಥವಾ ಪ್ರಗತಿಪರ ಎಡಪಂಥೀಯ ಸೈದ್ಧಾಂತಿಕ ನಿಲುವನ್ನು

ಹೊಂದಿರುವಂಥವೋ ? ಭಾರತದ ಪ್ರಗತಿಪರ ಚಳುವಳಿಗಳು ಈ ಬೆಳವಣಿಗೆಗಳಿಂದ ಕಲಿಯಬೇಕಾದದ್ದು ಏನು ?

**ಬರ್ಧನ್** : ಆ ಪ್ರದೇಶದಲ್ಲಿ ಕಳೆದ ಶತಮಾನದದಿಂದಲೂ ನೂರಾರು ಹೋರಾಟಗಳು ನಡೆದಿದ್ದು, ಅವು ಈಗಷ್ಟೇ ಫಲಪ್ರದವಾಗುತ್ತಿರುವ ಸೂಚನೆಯೇ ಇಂದಿನ ಬೆಳವಣಿಗೆ. ಅವು ಆಕಸ್ಮಿಕವಾಗಿ ಉದ್ಭವಿಸಿಲ್ಲ. ಅವು ಕೇವಲ ಅಮೆರಿಕಾ ಸಂಯುಕ್ತ ಸಂಸ್ಥಾನದ ವಿರೋಧ ಮಾತ್ರವಲ್ಲ; ದೇಶೀಯತೆಯಿಂದಲೂ ಪ್ರೇರಿತವಾಗಿವೆ. ಆದರೆ ಆ ದೇಶೀಯತೆಯ ಸ್ವರೂಪವೇ ಪ್ರಜಾಪ್ರಭುತ್ವಾತ್ಮಕ ಪ್ರಗತಿಶೀಲತೆ. ಅದನ್ನು ಎಡಪಂಥೀಯವೆಂದು ಗುರುತಿಸುವುದು ಒಂದು ರಾಜಕೀಯ ವಿಶ್ಲೇಷಣಾ ವಿಧಾನ. ಅಷ್ಟೆ. ಅಲ್ಲಿಯ ಬೆಳವಣಿಗೆಯನ್ನು ಅಪಾರ ಜನಸ್ತೋಮ ಬೆಂಬಲಿಸುತ್ತಿರುವುದಿಂದಲೇ ಹಿಂದಿನಂತೆ ಇಂದು ಹೊರಗಿನಿಂದ ಅಮೆರಿಕನ್ ಸಾಮ್ರಾಜ್ಯಶಾಹಿಯ ಮಧ್ಯಪ್ರವೇಶ ದುಸ್ತರವಾಗಿರುವುದು. ಹಿಂದೆ ಪರಕೀಯರನ್ನು ಬೆಂಬಲಿಸುತ್ತಿದ್ದ ಆಂತರಿಕ ಪ್ರತಿಗಾಮಿಗಳು ಇಂದು ದುರ್ಬಲರಾಗಿದ್ದಾರೆ. ಹೊಸ ಯುಗದಲ್ಲಿ ಹೊಸ ಹೊಸ ವೈಜ್ಞಾನಿಕ ತಾಂತ್ರಿಕ ಬೆಳವಣಿಗೆಗಳ ಕಾಲದಲ್ಲಿ ಮಾರ್ಕ್ಸ್‌ವಾದೀ ಹೋರಾಟಗಳು ಹೊಸ ವಿಧಾನವನ್ನು ಬೆಳೆಸಿಕೊಳ್ಳುತ್ತವೆ. ಅದು ಎಂದೂ ನಿರಂತರ, ಸೃಜನಶೀಲ. ನಾವಾದ್ದರೂ ಇಂದು ಭಾರತದಲ್ಲಿನ ಆಂತರಿಕ ಪ್ರಜಾಪ್ರಭುತ್ವದ ಬೆಳವಣಿಗೆ ಕ್ರಮವನ್ನು ಅನುಸರಿಸಿ ಹೋರಾಟದ ಸ್ವರೂಪಗಳನ್ನು ನಿರ್ಮಿಸಿಕೊಳ್ಳಬೇಕು. ದಕ್ಷಿಣ ಅಮೆರಿಕಾ ರಾಜ್ಯಗಳು ಪರಸ್ಪರ ಕಾದಾಡುವುದನ್ನು ನಿಲ್ಲಿಸಿ, ಹೊರಗಿನ ಶತ್ರುಗಳ ವಿರುದ್ಧ ಒಕ್ಕೂಟ ರಚಿಸಿಕೊಳ್ಳಲು ಮುಂದಾಗಿರುವುದು ಒಳ್ಳೆಯ ಬೆಳವಣಿಗೆ. ಭಾರತದಲ್ಲಿ ಪ್ರಗತಿಪರ ಶಕ್ತಿಗಳು ಪ್ರಜಾಪ್ರಭುತ್ವಾತ್ಮಕ ಮಾರ್ಗದಲ್ಲಿ ಅಧಿಕಾರಕ್ಕೆ ಬರುವ ಪರಿಸ್ಥಿತಿ ಬಂದಾಗ ಪ್ರತಿಗಾಮಿಗಳು ತಡೆಯೊಡ್ಡಿದರೆ ಆಗ ನಮ್ಮ ಹೋರಾಟದ ಸ್ವರೂಪವೂ ಬದಲಾಗಬೇಕಾಗುತ್ತದೆ.

**ಹೊಸತು** : ನೀವು ಕಟ್ಟಿರುವ ಕಾರ್ಮಿಕ ಸಂಘಗಳ ಸದಸ್ಯರು ನಿಮ್ಮ ಪಕ್ಷದ ಪರ ಮತ ನೀಡುತ್ತಿರುವಂತೆ ತೋರುವುದಿಲ್ಲ. ಅವರ ರಾಜಕೀಯ ಪ್ರಜ್ಞೆಯನ್ನು ವೃದ್ಧಿಪಡಿಸುವುದನ್ನು ನಿರ್ಲಕ್ಷಿಸಿ ಆರ್ಥಿಕ ಬೇಡಿಕೆಗಳಿಗಾಗಿಯೇ ಆದ್ಯತೆ ನೀವು ನೀಡಿದಿರೋ ಎಂಬ ಸಂದೇಹ. ಕೇವಲ ಸಂಘಟಿತ ಕೈಗಾರಿಕಾ ವಲಯದ ಬೆಂಬಲದ ಮೇಲೆ ನಿಂತ ನಿಮ್ಮ ಪಕ್ಷಕ್ಕೆ ಭವಿಷ್ಯವಿದೆಯೇ ?

**ಬರ್ಧನ್** : ಮೊದಲನೆಯದಾಗಿ, ನಾವು ಕೇವಲ ಕೈಗಾರಿಕಾ ಸಂಘಟಿತ ವಲಯದ ಆಧಾರದ ಮೇಲೆ ನಿಂತಿಲ್ಲ. ಅದು ನಮ್ಮ ವಿರೋಧಿಗಳು ಮಾಡುತ್ತಿರುವ ಅಪಪ್ರಚಾರ. ಸಮಾಜದ ಎಲ್ಲ ಸ್ತರದಲ್ಲೂ, ಎಲ್ಲ ಪ್ರದೇಶಗಳಲ್ಲೂ ನಾವು ಕಾರ್ಯತತ್ಪರರಾಗಿದ್ದೇವೆ. ಹೌದು, ರಾಜಕೀಯ ಪ್ರಜ್ಞೆ ಸಾಕಷ್ಟು ಬೆಳೆದಿಲ್ಲ. ಕಾರಣ ನಮ್ಮ ಆಂತರಿಕ ಸಂಘಟನಾ ವಿಧಾನದ ಕೊರತೆಯೂ ಇರಬಹುದು. ಆದರೆ ಮುಖ್ಯವಾಗಿ ನಮ್ಮ ದೇಶದಲ್ಲಿ, ವಿವಿಧ ಭಾಗಗಳಲ್ಲಿ ವಿವಿಧ ರೀತಿಯ ಜಾತೀಯತೆ, ಮತಧರ್ಮ, ಮೂಲಭೂತವಾದ, ಕೋಮುವಾದ, ಪಾಳೆಯಗಾರಿಕೆ, ಗೌಡಿಕೆಗಳ ಪ್ರಜ್ಞೆಯ ಪ್ರಭಾವ ವಿರುವುದರಿಂದ ಈ ಹಿಂದುಳಿಕೆಯನ್ನು ಸರಿಪಡಿಸುವ ಕೆಲಸ ಸುಲಭವಲ್ಲ. ನಿರಂತರ ಚಳುವಳಿಗಳು, ಹೋರಾಟಗಳು ಮತ್ತು ಪ್ರಚಾರಗಳು ಇದನ್ನು ಸರಿಪಡಿಸಬೇಕು. ಈ ದಿಶೆಯಲ್ಲಿ ಇನ್ನೂ ಹೆಚ್ಚಿನ ಕೆಲಸವಾಗಬೇಕಿದೆ. ಈ ಸಲದ ಚುನಾವಣೆಯ ಫಲಿತಾಂಶವು ಸಕಾರಾತ್ಮಕ ಬದಲಾವಣೆಗಳು ನಿಧಾನವಾದರೂ ಸ್ಪಷ್ಟವಾಗಿ ಆಗುತ್ತಿವೆ ಎಂಬ ಭರವಸೆ ಉಂಟುಮಾಡಿವೆ.

ಸುದ್ದಿಚಿತ್ರ



**ತುಮಕೂರಿನಲ್ಲಿ 'ಹೊಸತು' ಓದುಗ-ಬರಹಗಾರರ ಸಂವಾದ**

ತುಮಕೂರು ವಿಜ್ಞಾನ ಕೇಂದ್ರ ಮತ್ತು ಶಾಂತಿ ಹಾಗೂ ಸೌಹಾರ್ದತಾ ಸಂಘಟನೆಗಳ ಆಶ್ರಯದಲ್ಲಿ ೧೯-೨-೨೦೦೬ರಂದು ನಡೆದ ಜಿಲ್ಲಾ ಸಮಾವೇಶ ಕಾರ್ಯಕ್ರಮದಲ್ಲಿ ಹೊಸತು ಓದುಗರು ಹಾಗೂ ಬರಹಗಾರರು ಉತ್ಸಾಹದಿಂದ ಭಾಗವಹಿಸಿದರು. ಶ್ರೀ ಕೆ. ದೊರೈರಾಜ್ ಸಮಾರಂಭ ಉದ್ಘಾಟಿಸಿದರು. ಡಾ|| ಜಿ. ರಾಮಕೃಷ್ಣ ಪ್ರಾಸ್ತಾವಿಕ ಭಾಷಣ ಮಾಡಿದರು. ಮುಖ್ಯ ಅತಿಥಿಗಳಾಗಿ ಶ್ರೀ ಸಿ. ಯತಿರಾಜು, ಶ್ರೀ ಸಿ. ವಿಶ್ವನಾಥ್ ಭಾಗವಹಿಸಿದ್ದರು. ಶ್ರೀ ಎಂ. ಬಸವಯ್ಯ ಅಧ್ಯಕ್ಷತೆ ವಹಿಸಿದ್ದರು. ಪ್ರೊ|| ಎಚ್. ಜಿ. ಸಣ್ಣಗುಡ್ಡಯ್ಯ ನವರ ಅಧ್ಯಕ್ಷತೆಯಲ್ಲಿ ನಡೆದ ಸಂವಾದ ಕಾರ್ಯಕ್ರಮದಲ್ಲಿ ಹಲವು ಗಣ್ಯರು ಪತ್ರಿಕೆಯ ಕುರಿತು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು. ತರುವಾಯ ಸಾಂಸ್ಕೃತಿಕ ಕಾರ್ಯಕ್ರಮ ಮತ್ತು ಕವಿಗೋಷ್ಠಿಗಳು ಜರುಗಿದವು.

**ಹೊಸತು** : ಇಷ್ಟೊಂದು ಭ್ರಷ್ಟಾಚಾರದ ವ್ಯವಸ್ಥೆಯಲ್ಲಿ ಉದ್ಯೋಗ ಭರವಸೆ ಕಾಯಿದೆ ಜನರನ್ನು ತಲಪುತ್ತದೆಯೇ ?

**ಬರ್ಧನ್** : ಈ ಯೋಜನೆಯನ್ನು ಇಂದು ಆಡಳಿತವರ್ಗ ಮನಸಾರೆ ಒಪ್ಪಿಲ್ಲ. ಅದನ್ನು ಒತ್ತಾಯಿಸಿ ಕಾರ್ಯರೂಪಕ್ಕೆ ತರುವುದು ನಮ್ಮೆಲ್ಲರ ಜವಾಬ್ದಾರಿ. ನಮ್ಮ ಪಕ್ಷದ ವಿವಿಧ ಸಂಘಟನೆಗಳು ಈ ದಿಶೆಯಲ್ಲಿ ಕಾರ್ಯತತ್ಪರವಾಗಬೇಕು.

**ಹೊಸತು** : ಜಾಗತೀಕರಣ, ಖಾಸಗೀಕರಣ, ಉದಾರೀಕರಣಗಳ ವಿರುದ್ಧ ನೀವು ಮಾತನಾಡುವಾಗಲೆಲ್ಲ ಸಾಮ್ರಾಜ್ಯಶಾಹಿ ಎಂಬ ವಿಶೇಷಣವನ್ನು ಅವುಗಳ ಹಿಂದೆ ಸೇರಿಸುತ್ತೀರಿ. ಹಾಗಾದರೆ ಸಾಮ್ರಾಜ್ಯಶಾಹಿ ಅಲ್ಲದ ಇಂಥದೇ ಪ್ರಕ್ರಿಯೆ ಇದ್ದರೆ ಅದರ ಸ್ವರೂಪವೇನು ? ಚೀನಾದ ಉದಾಹರಣೆಯನ್ನು ಪದೇ ಪದೇ ನೀಡಿ ಎಡಪಕ್ಷಗಳಿಗೆ ಮುಜುಗರ ಮಾಡುತ್ತಿದ್ದಾರಲ್ಲವೇ ? ಎಲ್ಲ ವಿಧದ ವಿದೇಶೀ ಬಂಡವಾಳವನ್ನೂ ವಿರೋಧಿಸಲಾದೀತೆ ?

**ಬರ್ಧನ್** : ವಿಶ್ವ ಆರ್ಥಿಕತೆಯ ಪರಸ್ಪರ ಅವಲಂಬಿತ ಸ್ವರೂಪವನ್ನು, ಹಾಗೂ ಯಾವ ಪರಿಸ್ಥಿತಿಯಲ್ಲಿ ಮುಕ್ತ ಮಾರುಕಟ್ಟೆ ಸಾಧ್ಯವೆಂಬುದನ್ನು ಪ್ರಪ್ರಥಮವಾಗಿ ವಿವರಿಸಿದವರೇ ಮಾರ್ಕ್ಸ್‌ವಾದಿಗಳು. ಕಮ್ಯುನಿಸ್ಟ್ ಮ್ಯಾನಿಫೆಸ್ಟೋ ಸೇರಿದಂತೆ ಅವರ ಬರಹಗಳಲ್ಲಿ ಈ ವಿಚಾರ ಪದೇ ಪದೇ ಸಿಗುತ್ತದೆ. ಲೆನಿನ್ನರ ''ಬಂಡವಾಳ ಅತ್ಯುಚ್ಚ ಮಟ್ಟಕ್ಕೆ ಬೆಳೆದಾಗ ಅದು ಸಾಮ್ರಾಜ್ಯಶಾಹಿ'' ಎಂಬ ಕೃತಿಯಲ್ಲಿ ಇದನ್ನು ವಿಶದವಾಗಿ ಚರ್ಚಿಸಿದ್ದಾರೆ. ಅಂದರೆ, ಜಾಗತೀಕರಣವೆಂಬುದು ಹೊಸ ಅನ್ವೇಷಣೆಯೇನೂ ಅಲ್ಲ. ಅಸಮಾನವಾಗಿ ಬೆಳೆದಿರುವ ಆರ್ಥಿಕ ವ್ಯವಸ್ಥೆಯಲ್ಲಿ ದುರ್ಬಲ ವ್ಯವಸ್ಥೆಯೊಂದು ಸಬಲ ವ್ಯವಸ್ಥೆಯ ವಿರುದ್ಧ ಈ ನೀತಿಗಳ ಆಧಾರಿತ ಮುಕ್ತ ಮಾರುಕಟ್ಟೆಯಲ್ಲಿ ಸ್ಪರ್ಧಿಸಲಾರದೇ ಅವುಗಳ ಅಡಿಯಾಳಾಗಿಬಿಡುತ್ತದೆ. ಅಸಮಾನರ ನಡುವೆ ಸ್ಪರ್ಧೆ ಸಲ್ಲದು. ಇಂದು ಸಬಲವೆನಿಸುವ ಅರ್ಥ ವ್ಯವಸ್ಥೆಗಳು ಎರಡು ಶತಮಾನಕ್ಕೂ ಮೀರಿ ತಮ್ಮ ಆಂತರಿಕ ಮಾರುಕಟ್ಟೆಯನ್ನು ರಕ್ಷಿಸಿಕೊಂಡು ಬೆಳೆದಂಥವು. ವಸಾಹತುಗಳನ್ನು ಸೂರೆ ಹೊಡೆದು ಆ ರಾಷ್ಟ್ರಗಳು ಬಂಡವಾಳ ಮಾಡಿಕೊಂಡವು. ಇಂದೂ ಅವರು ಅತಿ ದುಬಾರಿಯಾದ ಉತ್ಪಾದನಾ ವಿಧಾನವನ್ನು ಅನುಸರಿಸುವ ತಮ್ಮ ಕೃಷಿಕ್ಷೇತ್ರವನ್ನು, ಆಂತರಿಕವಾಗಿ ಸೂಕ್ಷ್ಮವೆನಿಸುವ ಇನ್ನೂ ಕೆಲವು ಕ್ಷೇತ್ರಗಳಿಗೆ ಸಬ್ಸಿಡಿ ನೀಡುತ್ತಾ, ರಕ್ಷಿಸಿಕೊಳ್ಳುತ್ತಾ ನಮಗೆ ಮಾತ್ರ ಮಾರುಕಟ್ಟೆಯನ್ನು ಮುಕ್ತವಾಗಿಸಿ ಎಂದು ಹೇಳುತ್ತಾರೆ. ಇಂದಿಗೂ ಅಮೆರಿಕಾದ ಟೆಲಿಕಾಮ್ ಕ್ಷೇತ್ರಕ್ಕೆ ಹೊರಗಿನವರು ಪ್ರವೇಶಿಸಲು ಆಗುವುದಿಲ್ಲ. ಯೂರೋಪಿನಲ್ಲಿ ಇಂದಿಗೂ ಟೆಲಿಕಾಂ ಸೇರಿದಂತೆ ಹಲವು ಪ್ರಬಲವಾದ ಸಾರ್ವಜನಿಕ ಕ್ಷೇತ್ರಗಳಿರುವುದನ್ನು ಗಮನಿಸಬಹುದು. ವಿದೇಶೀ ಏಕಸ್ವಾಮ್ಯ ಬಂಡವಾಳದೊಡನೆ ನಂಟು ಬೆಳೆಸಿಕೊಂಡ ದೇಶೀ ಬಂಡವಾಳಿಗರು ಮಾತ್ರ ಈ ಮುಕ್ತ ಮಾರುಕಟ್ಟೆಯ ಅನಿರ್ಬಂಧಿತ ಬೆಳವಣಿಗೆಯನ್ನು ಬಯಸುತ್ತಾರೆ. ವಿದೇಶೀ ಬಂಡವಾಳ ನಮ್ಮಲ್ಲಿಲ್ಲದ ತಂತ್ರಜ್ಞಾನವನ್ನು ತರುವುದಾದರೆ, ಇಲ್ಲಿ ಉದ್ಯೋಗವನ್ನು ಸೃಷ್ಟಿಸುವುದಾದರೆ, ಹೊಸ ಉದ್ದಿಮೆಗಳನ್ನು ಬೆಳೆಸುವುದಾದರೆ, ಈಗಾಗಲೇ ಇರುವ ಉದ್ಯಮಗಳಿಗೆ ಮಾರಕವಾಗದಿದ್ದರೆ, ನಮ್ಮ ಯಾವುದೇ ಸಾರ್ವಭೌಮತ್ವಕ್ಕೆ ಧಕ್ಕೆ ತರದಿದ್ದರೆ ಅಂಥವಕ್ಕೆ ನಮ್ಮ ಸ್ವಾಗತವಿದೆ. ದಶಕಗಳ ಕಾಲ ಯೋಜನಾಬದ್ಧ ಆರ್ಥಿಕ ನೀತಿಯನ್ನು ಅನುಸರಿಸಿ ದೇಶದ ಆಂತರಿಕ ಉಳಿತಾಯವನ್ನು ಹೆಚ್ಚಿಸಿ, ಅದನ್ನೇ ಬಂಡವಾಳವಾಗಿಸಿ ಆರ್ಥಿಕವಾಗಿ ಬಲಿಷ್ಠವಾದ ಮೇಲೆ ಚೀನಾ ಸ್ವಲ್ಪ ಸ್ವಲ್ಪವಾಗಿ ತನ್ನದೇ ಕರಾರುಗಳನ್ನು ಒಡ್ಡಿ ವಿದೇಶಿ ಬಂಡವಾಳಕ್ಕೆ ತೆರೆದುಕೊಂಡಿದೆ. ಹೀಗೆ ಹರಿದುಬರುತ್ತಿರುವ ಬಂಡವಾಳದಲ್ಲಿ ಅನಿವಾಸಿ ಚೀನೀಯರದ್ದೇ ಹೆಚ್ಚಿನ ಪಾಲು ಎಂಬುದು ಗಮನಾರ್ಹ. ನಮ್ಮದು ಕೇವಲ ವಿರೋಧಕ್ಕಾಗಿ

ವಿರೋಧವಲ್ಲ ಎಂಬುದು ಇದರಿಂದ ಸ್ಪಷ್ಟವಾಗಬೇಕು.

**ಹೊಸತು :** ಚಿಲ್ಲರೆ ವ್ಯಾಪಾರ ಕ್ಷೇತ್ರದಲ್ಲಿ ವಿದೇಶೀ ಬಂಡವಾಳದ ಪ್ರವೇಶ ಕುರಿತು ನೀವೇನು ಹೇಳುತ್ತೀರಿ ?



**ಬರ್ಧನ್ :** ಚಿಲ್ಲರೆ ವ್ಯಾಪಾರದಲ್ಲಿ ವಿದೇಶಿ ಬಂಡವಾಳ ಹೂಡಿಕೆಯ ವಿರುದ್ಧದ ಹೋರಾಟ ಜನಸಾಮಾನ್ಯರಿಂದಲೇ ಮೂಡಿಬರಬೇಕು. ನಾವೊಬ್ಬರೇ ವಿರೋಧಿಸಿದರೆ ಸಾಲದು. ಚಿಲ್ಲರೆ ವ್ಯಾಪಾರಿಗಳು ನಮ್ಮ ಪಕ್ಷವನ್ನು ಸಂಪರ್ಕಿಸಿದ್ದರು. ಅವರಿಗೆ ಒಂದೆಡೆ ಸೇರಿ ಇದರಿಂದ ಉದ್ಭವಿಸುವ ಸಮಸ್ಯೆಗಳನ್ನು ಚರ್ಚಿಸಿ, ಸರಕಾರಕ್ಕೆ ಮನವಿ ಸಲ್ಲಿಸಬೇಕೆಂದು ಸಲಹೆ ನೀಡಿದ್ದೇವೆ. ನಾವು ಅವರನ್ನು ಬೆಂಬಲಿಸುತ್ತೇವೆ. ವಿದೇಶೀ ಮಾರ್ಟುಗಳನ್ನು ಉನ್ನತ ಮತ್ತು ಮಧ್ಯಮವರ್ಗದವರು ಬಯಸುತ್ತಾರೆಂದು ಹೇಳಲಾಗಿದೆ. ಆದರೆ ಈ ಮಾರ್ಟುಗಳು ಕೆಲಕಾಲದಲ್ಲೇ ಧಾರಣೆಯ ಮೇಲೆ ಹಿಡಿತ ಸಾಧಿಸಿ, ನಗರಕ್ಕೆ ಬರುವ ಗ್ರಾಮೀಣ ಪ್ರದೇಶದ ಸರಕುಗಳ ಉತ್ಪಾದನೆ ಮತ್ತು ವಿತರಣೆಗಳನ್ನು ರೈತರ ಹಿತಾಸಕ್ತಿಗೆ ಮಾರಕವಾಗಿ ನಿಯಂತ್ರಿಸುವ ಸಾಧ್ಯತೆಗಳಿವೆ. ಇತ್ತೀಚೆಗೆ ಮಹಾರಾಷ್ಟ್ರದಲ್ಲಿ ಸಾವಿರಾರು ಗ್ರಾಮಪಂಚಾಯ್ತಿಗಳು ಖಾಸಗೀಕರಣದ ವಿರುದ್ಧ ಪ್ರತಿಭಟಿಸಲು ಮುಂದಾದದ್ದನ್ನು ಗಮನಿಸಿದರೆ, ಸಂಘಟಿತ ವರ್ಗ ಇಂತಹ ಪ್ರಶ್ನೆಗಳು ಉದ್ಭವಿಸಿದಾಗ ಜನಸಾಮಾನ್ಯರೊಡನೆ ಭುಜಕ್ಕೆ ಭುಜ ಕೊಟ್ಟು ನಿಲ್ಲಬೇಕಾದ ಅಗತ್ಯವಿದೆ.

**ಹೊಸತು :** ಮಾರ್ಕ್ಸ್‌ವಾದವು ವೈಜ್ಞಾನಿಕವಾದುದು ಎಂದಾಗ ಅದನ್ನು ಒಬ್ಬೊಬ್ಬರು ಒಂದೊಂದು ವಿಧದಲ್ಲಿ ಅರ್ಥೈಸುತ್ತಲೇ ಹಲವಾರು ಎಡಪಕ್ಷಗಳಾಗಿರುವುದು ಎಷ್ಟು ಸರಿ ? ನಕ್ಸಲೀಯರೂ ಮಾರ್ಕ್ಸ್‌ವಾದಿಗಳೇ ಆಗಿರುವಾಗ ನಿಮ್ಮ ಪ್ರತಿಕ್ರಿಯೆ ಏನು ?

**ಬರ್ಧನ್:** ನಕ್ಸಲೀಯರನ್ನು ಭಯೋತ್ಪಾದಕರೆಂದು ಕರೆಯುವುದನ್ನು ನಾವು ಒಪ್ಪುವುದಿಲ್ಲ. ಅವರು ಎತ್ತಿರುವ ಭೂ ಸುಧಾರಣೆಯಂತಹ ವಿಷಯಗಳು ಮೂಲಭೂತ ಪ್ರಶ್ನೆಗಳು. ಅವುಗಳ ಪರಿಹಾರವಾಗುವುದು ಅಗತ್ಯ. ಇಂದಿನ ಬೂರ್ಜ್ವಾ ಪ್ರಜಾಪ್ರಭುತ್ವ ವ್ಯವಸ್ಥೆಯ ಒಳಗೇ ಎಲ್ಲ ಸಮಸ್ಯೆಗಳೂ ಪರಿಹಾರವಾಗುವುದು ಎಂಬ ಭ್ರಮೆ ಜನಸಮೂಹದಲ್ಲಿದೆ. ಅನೇಕ ಪ್ರಗತಿಪರ ಚಳುವಳಿಗಳ ಫಲವಾಗಿ ಕೆಲವೊಂದು ಸಮಸ್ಯೆಗಳು ಸ್ವಲ್ಪಮಟ್ಟಿಗೆ ಪರಿಹಾರವಾದಂತೆ ಕಾಣುವುದೇ ಈ ಭ್ರಮೆಗೆ ಕಾರಣ. ಆದರೆ ಈ ವ್ಯವಸ್ಥೆಯಲ್ಲೇ ಎಲ್ಲಾ ಸಮಸ್ಯೆಗಳು ಪರಿಹಾರವಾಗುವುದಿಲ್ಲ ಅದಕ್ಕೆ ವ್ಯವಸ್ಥೆಯ ರೂಢಮೂಲ ಬದಲಾವಣೆಯಾಗಬೇಕು ಎಂದು ಜನತೆಗೆ ಅನ್ನಿಸುವವರೆಗೂ, ವ್ಯವಸ್ಥೆಯೊಳಗೇ ಕೆಲಸ ಮಾಡಬೇಕಿದೆ. ಹಿಂದೆಂದೂ ಇರದಷ್ಟು ಶಸ್ತ್ರಾಸ್ತ್ರಗಳನ್ನು ಪಡೆದಿರುವ ಪ್ರಭುತ್ವ ಇಂದು ಪ್ರತಿಹಿಂಸೆಯಿಂದ ಜಗ್ಗದು. ಆದರೆ ಎಂಥ ಪ್ರಭುತ್ವವೂ ವ್ಯಾಪಕ ಜನಸಮೂಹದ ಪ್ರಬಲ ಚಳುವಳಿಗೆ, ಅದು ಅಹಿಂಸಾತ್ಮಕವಾಗಿದ್ದರೂ ಮಣಿಯಬೇಕಾಗುತ್ತದೆ. ಮಾವೋವಾದಿ ಪಕ್ಷಗಳು ಇತ್ತೀಚೆಗೆ ರಾಜಕೀಯ ಪಕ್ಷವನ್ನು ಸಂಘಟಿಸುವುದರ ಮೂಲಕ ಈ ಅನಿವಾರ್ಯತೆಯನ್ನು ಗ್ರಹಿಸಿದಂತಿದೆ. ಸಿದ್ಧಾಂತವು ವೈಜ್ಞಾನಿಕವೇ ಆದರೂ ಅದರ ಸಾಮಾಜಿಕ, ರಾಜಕೀಯ ಅನ್ವಯ ಆಯಾಯ ಪ್ರದೇಶದ, ಕ್ಷೇತ್ರದ, ಚಾರಿತ್ರಿಕ-ಸಾಮಾಜಿಕ ಸಂದರ್ಭವನ್ನು ಅನುಸರಿಸುವುದರಿಂದ, ತಾಂತ್ರಿಕವಾಗಿ ದೇಶದ ರಾಜಕಾರಣದಲ್ಲಿ ಹಲವು ಪಕ್ಷಗಳು ಹುಟ್ಟಿಕೊಳ್ಳುವುದು ಸಹಜ. ಆದರೂ ಎಲ್ಲ ಎಡ ಪಕ್ಷಗಳೂ ಈಗ ಐಕ್ಯತೆಯಿಂದ ಹೋರಾಡಬೇಕಾದ ಕಾಲ ಸನ್ನಿಹಿತವಾಗಿದೆ. ಹಾಗೆ ಆಗುತ್ತಿರುವ ಸೂಚನೆಗಳೂ ಸಾಕಷ್ಟಿವೆ.

**ಹೊಸತು :** ಉತ್ತರ ಹಿಂದೂಸ್ತಾನದ - ಅದರಲ್ಲೂ ಹಿಂದೀ ರಾಜ್ಯಗಳು ಕಡು ಬಡತನದ ರಾಜ್ಯಗಳಾಗಿದ್ದು ಅಲ್ಲಿ ನೀವು ಬೆಳೆಯಲು ಏಕೆ ಸಾಧ್ಯವಾಗಿಲ್ಲ ?

**ಬರ್ಧನ್ :** ಉತ್ತರದ ರಾಜ್ಯಗಳಲ್ಲಿ ಕಮ್ಯುನಿಸ್ಟ್ ಚಳುವಳಿಯು ಆಳವಾಗಿ ಬೇರೂರಲು ಸಾಧ್ಯವಾಗಿಲ್ಲ, ನಿಜ. ಇದಕ್ಕೆ ಹಲವಾರು ಕಾರಣಗಳಿವೆ. ಅಲ್ಲಿನ ಜನಜೀವನದಲ್ಲಿ ಸಾಂಪ್ರದಾಯಿಕತೆ ಮತ್ತು ಜಾತೀಯತೆಗಳು ಆಳವಾಗಿ ಬೇರೂರಿವೆ. ಐತಿಹಾಸಿಕವಾಗಿಯೂ ಹೇಳಿಕೊಳ್ಳುವಂತಹ ಸಾಮಾಜಿಕ ಚಳುವಳಿಗಳು ವ್ಯಾಪಕವಾಗಿ ಅಲ್ಲಿ ನಡೆದಿಲ್ಲ. ಒಬ್ಬ ಕಬೀರನೋ ಮಗದೊಬ್ಬ ವಿಚಾರವಾದಿಯೋ ಇದ್ದಿರಬಹುದು, ಅಷ್ಟೆ. ಅದೇ ಪಶ್ಚಿಮ ಬಂಗಾಳದಲ್ಲಿ ಜಾತೀಯತೆಯ ನೆಲೆ ಅನೇಕ ಸಾಮಾಜಿಕ ಚಳುವಳಿಗಳಿಂದಾಗಿ ಸೊರಗಿ ಹೋಗಿದೆ. ತಮಿಳುನಾಡಿನಲ್ಲೂ ಇಂಥ ಬೆಳವಣಿಗೆಯನ್ನು ಗಮನಿಸಬಹುದು. ಕೇರಳದಲ್ಲಿ ಜಾತಿ ಸಮಸ್ಯೆ ಅಲ್ಲಲ್ಲೇ ಉಳಿದುಕೊಂಡಿದೆ. ಇವೆಲ್ಲಾ ಎಡಪಂಥೀಯ ಬೆಳವಣಿಗೆಯ ಮೇಲೆ ಪ್ರಭಾವ ಬೀರುವುದು ಸಹಜವೇ.

**ಹೊಸತು :** ಹಲವು ರಾಜ್ಯಗಳ ಒಕ್ಕೂಟವಾದ ಈ ದೇಶದಲ್ಲಿ ಒಂದೇ ರಾಷ್ಟ್ರೀಯ ಪಕ್ಷದ ಪ್ರಾಂತೀಯ ಘಟಕಗಳು ಹಲವು ರಾಜ್ಯಗಳಿಗೆ ಪರಸ್ಪರ ಹಿತಾಸಕ್ತಿಗಳಿಗೆ ಸಂಬಂಧಿಸಿದ ನದೀ ವಿವಾದದಂಥ ವಿಷಯದಲ್ಲಿ ಬೇರೆ ಬೇರೆ ನಿಲುವು ತಾಳುತ್ತಿರುವುದು ಸರಿಯೇ ? ಬೂರ್ಜ್ವಾ ಪಕ್ಷಗಳು ಏನಾದರೂ ಮಾಡಲಿ, ವಿಶ್ವಭ್ರಾತೃತ್ವ ಮಾತನಾಡುವ ಕಮ್ಯುನಿಸ್ಟ್ ಪಕ್ಷದ ರಾಜ್ಯ ಘಟಕಗಳು ಪರಸ್ಪರ ವಿರೋಧಿ ನಿಲುವು ತಾಳುವುದು ಎಷ್ಟು ಸಮಂಜಸ ?

**ಬರ್ಧನ್ :** ಭಾರತದ ಒಕ್ಕೂಟದ ರಾಜ್ಯಗಳು ಪ್ರತ್ಯೇಕವಾಗಿ ಒಂದೊಂದೂ ಒಂದು ರಾಷ್ಟ್ರವೇ ಎಂಬಷ್ಟು ದೊಡ್ಡವು. ರಾಜ್ಯ, ರಾಜ್ಯಗಳ ನಡುವೆ ವಿವಾದಗಳು ಅಮೆರಿಕಾ ಸಂಯುಕ್ತ ಸಂಸ್ಥಾನದಲ್ಲೂ ಇವೆ. ಅಂಥ ಸಂದರ್ಭದಲ್ಲಿ ರಾಜ್ಯ ಘಟಕಗಳು ತಮ್ಮ ರಾಜ್ಯದ ಪ್ರಜೆಗಳ ಹಿತಾಸಕ್ತಿಯನ್ನು ಪ್ರತಿನಿಧಿಸುವುದು ಪ್ರಜಾಪ್ರಭುತ್ವದ ಲಕ್ಷಣವೇ. ನದೀ ವಿವಾದದಂಥ ಸಮಸ್ಯೆಗಳನ್ನು ಕೊಂಡು ಕೊಟ್ಟು ರಾಜಿ ಮಾಡಿಕೊಂಡು ಪರಿಹರಿಸುವುದಕ್ಕೆ ಈ ವಿವಿಧ ನಿಲುವುಗಳು ಪ್ರಜಾಪ್ರಭುತ್ವಾತ್ಮಕವಾಗಿ ಸಹಾಯವಾಗುತ್ತವೆ. ಈ ಕಾರಣದಿಂದ ಸಿ.ಪಿ.ಐ.ನ ರಾಜ್ಯ ಘಟಕಗಳ ನಡುವಿನ ಭ್ರಾತೃತ್ವಕ್ಕೆ ಯಾವುದೇ ಧಕ್ಕೆಯೂ ಬಂದಿಲ್ಲ.

**ಹೊಸತು :** ಕಾರ್ಮಿಕ ಸಂಘಗಳು ತಮ್ಮದಲ್ಲದ ಸೋದರ ಸಂಘಗಳ ನೆರವಿಗೆ ಅಥವಾ ನೇರವಾಗಿ ಸ್ವಂತ ಹಿತಾಸಕ್ತಿಯಿಲ್ಲದ ರಾಷ್ಟ್ರೀಯ ಅಂತರರಾಷ್ಟ್ರೀಯ ವಿಷಯಗಳನ್ನು ಕುರಿತು ಒಟ್ಟಾರೆ ಪ್ರದರ್ಶನ ಮುಷ್ಕರ ಮಾಡುವ ಪರಿಪಾಟ ಎಂದಾದರೂ ಬಂದೀತೆ ?

**ಬರ್ಧನ್ :** ಜಾಗತೀಕರಣದ ಪರಿಣಾಮವಾಗಿ ಕಾರ್ಮಿಕರ, ದಲಿತರ, ಶ್ರಮಿಕರ ಜೀವನ ಹೀಗೆಯೇ ದುರ್ಭರವಾಗುತ್ತಿದ್ದರೆ, ಎಲ್ಲ ಕೈಗಾರಿಕಾ ಸಂಘಗಳೂ ರೈತ ಚಳುವಳಿಗಳೂ ಒಂದಾಗಿ ಪ್ರತಿಭಟಿಸಬೇಕಾದ ಸಂದರ್ಭ ಬರುತ್ತದೆ. ಅಂದು ಆಳುವ ಪಕ್ಷವು ಬುದ್ಧಿಹೀನ ನೀತಿಯಿಂದ ವಿದೇಶಿ ಬಂಡವಾಳವನ್ನು ಬರಮಾಡಿಕೊಂಡದ್ದನ್ನು ವಿಷಾದಿಸಬೇಕಾಗುತ್ತದೆ. ಕಾರಣ ಆಗ ಅವರ ಅಧಿಕಾರಕ್ಕೆ ಸಂಚಕಾರ ಬರುತ್ತದೆ.

**ಹೊಸತು :** ಸಂಘಟನೆಯ ವಿಧಾನವಾಗಿ ಸೈದ್ಧಾಂತಿಕ ವಿಷಯಗಳನ್ನು ಕುರಿತು ಈ ದೇಶದ ಅಕ್ಷರ ತಿಳಿಯದ ಬಡಜನತೆಗೆ, ಅದರಲ್ಲೂ ಪರಂಪರಾಗತವಾದ ಮತಧರ್ಮ, ಜಾತಿ ಇವುಗಳ ಹಿಡಿತದಿಂದ ಹೊರಬರಲಾರದಂಥವರಿಗೆ ಪಾಠ ಹೇಳುವುದು ಎಷ್ಟು ಸಮಂಜಸ ?

**ಬರ್ಧನ್ :** ಮೊದಲನೆಯದಾಗಿ, ಅಕ್ಷರಕಲಿಕೆ ತನ್ನಿಂದ ತಾನೆ ಜ್ಞಾನವಾಗುವುದಿಲ್ಲ. ನಮ್ಮ ಜನರ ಪ್ರಜ್ಞೆಯನ್ನು ಸೆರೆಹಿಡಿದಿಟ್ಟಿರುವ ಪೌರಾಣಿಕ, ಜಾನಪದ ಕಥೆಗಳು, ಅವುಗಳನ್ನು ಆಧರಿಸಿದ ಕಲಾಪ್ರಕಾರಗಳು ಒಂದಿಷ್ಟು ಸಾಮಾನ್ಯ ಜ್ಞಾನವನ್ನು ಈಗಾಗಲೇ ನೀಡಿವೆ. ವೈದಿಕ ಧರ್ಮಗಳ ದಬ್ಬಾಳಿಕೆಯ ವಿರುದ್ಧ ಬಂಡೆದ್ದ ಭಕ್ತಿ ಪಂಥದ ಜನಪ್ರಿಯತೆ ಇದನ್ನು ಸೂಚಿಸುತ್ತದೆ. ಸಾಮಾಜಿಕ ಶೋಷಣೆಯ ಸ್ವರೂಪವನ್ನು ಈ ಮಾರ್ಗವು ಚೆನ್ನಾಗಿ ಮನದಟ್ಟು ಮಾಡಿಕೊಟ್ಟಿದೆ. ಯಾವುದೇ ಪ್ರಚಾರವೂ ಈಗಾಗಲೇ ಸಮಾಜದೊಳಗಿರುವ ಇಂತಹ ಸಾಂಸ್ಕೃತಿಕ ಸೆಲೆಗಳನ್ನು ಧಾರಾಳವಾಗಿ ಬಳಸಿಕೊಳ್ಳಬೇಕು. ಮಾವೋವಾದಿ ಸಂಘಟನೆಯಾದ ಜನನಾಟ್ಯ ಮಂಡಳಿ, ಜನಪದ ಶೈಲಿಯಲ್ಲಿ ಹಾಡುಗಳನ್ನು ಹಾಡುತ್ತಾ, ಬೀದಿನಾಟಕಗಳನ್ನು ಜನಸಂದಣಿಯ ಮಧ್ಯೆ ಆಡುತ್ತಾ ಪ್ರಯೋಗಿಸಿರುವುದು ಈ ನಿಟ್ಟಿನಲ್ಲಿ ಒಂದು ಉದಾಹರಣೆ. ಮಾರ್ಕ್ಸ್‌ವಾದದ ತಿರುಳು ಸಾರ್ವತ್ರಿಕವಾಗಿ ಎಲ್ಲ ದೇಶಗಳಲ್ಲೂ, ಎಲ್ಲ ಸಮಾಜದಲ್ಲೂ ಅನ್ವಯವಾಗುವಂಥದು, ದೊರಕುವಂಥದು. ಅದಕ್ಕೆ ದೇಶೀ ಭಾಷೆ, ಸೊಗಡು ಸಾಧ್ಯ. ಜನತೆಗೆ ಮಾರ್ಕ್ಸ್‌ವಾದ ಹೇಳುವಾಗ ಅಂಬೇಡ್ಕರ್, ಮಹಾತ್ಮ ಫುಲೆ ಮುಂತಾದವರ ಕೊಡುಗೆಯನ್ನು ವಿವರಿಸಬೇಕು. ಮಾರ್ಕ್ಸ್‌ವಾದ ಪರಕೀಯವೆಂದು ಬಣ್ಣಿಸುವವರಿಗೆ ಮನುಷ್ಯ ಸಮಾಜದ ಅವಿಭಾಜ್ಯತೆಯ ಸ್ವರೂಪದ ಗ್ರಹಿಕೆಯಿಲ್ಲ. ನಮ್ಮ ಪಕ್ಷ ಇಪ್ಟಾ ಮತ್ತು ಪ್ರಗತಿಪರ ಲೇಖಕರ ಸಂಘಗಳ ಮೂಲಕ ದೇಶೀಯ ಸೊಗಡಿನಲ್ಲಿ ಮಾರ್ಕ್ಸ್‌ವಾದೀಯ ಸಾಂಸ್ಕೃತಿಕ ಚಳುವಳಿಗಳನ್ನು ವ್ಯಾಪಕವಾಗಿ ನಡೆಸಿದೆ. ಈಗ ಮತ್ತೊಮ್ಮೆ ಈ ರೀತಿಯ ಪ್ರಚಾರವನ್ನು ಕೈಗೊಳ್ಳುವುದು ತ್ವರಿತವಾಗಿ ಆಗಬೇಕಿದೆ. ಶೋಷಣೆಯ ವಿರುದ್ಧದ ಸೈದ್ಧಾಂತಿಕ ತತ್ವಗಳ ಗ್ರಹಿಕೆ ಅನುಭವಗಮ್ಯವೇ ವಿನಾ ಅದು ಕೇವಲ ಪುಸ್ತಕದ ಓದಿನಿಂದ ದೊರಕುವಂಥದಲ್ಲ. ಓದು ಈ ಅನುಭವಗಳಿಗೆ ರೂಪವಿತ್ತು, ದನಿ ಕೊಡುತ್ತದೆ. ಅನೇಕ ಅನಕ್ಷರಸ್ಥರು, ಅತ್ಯಂತ ಕೆಳಸ್ತರದ ಕಾರ್ಮಿಕರು, ಕೂಲಿಗಾರರು, ರೈತರು, ತಮ್ಮ ಜಾತಿ, ಮತಧರ್ಮ, ಕೋಮು ಮುಂತಾದ ಎಲ್ಲ ಮಿತಿಗಳನ್ನೂ ಮೀರಿ ಕ್ರಾಂತಿಕಾರಿ ಕಮ್ಯುನಿಸ್ಟರಾಗಿರುವುದನ್ನು ನಾನು ಕಂಡಿದ್ದೇನೆ. ಹಾಗೆಯೇ ಸಂಪತ್ತಿನ ಸುಪ್ಪತ್ತಿಗೆಯಲ್ಲಿ ಬೆಳೆದವರೂ, ಉನ್ನತ ಜಾತಿ, ವರ್ಗದವರೂ, ತಮ್ಮ ಬದುಕಿನ ಕಡುತಿರುವಿನಲ್ಲಿ ಸಮತಾವಾದಿಗಳಾಗಿ ಪರಿವರ್ತಿತರಾಗಿರುವುದೂ ವಾಸ್ತವವೇ. ಹೋರಾಟದಲ್ಲಿ ತೊಡಗಿದವರಿಗೆ ಸಿದ್ಧಾಂತದ ಪಾಠ ಅರ್ಥವಾಗುತ್ತದೆ. ಅಂತಹ ಪಾಠವಿಧಾನವನ್ನು ಅದಕ್ಕೆ ತಕ್ಕಂತೆ ರಚಿಸಬೇಕಷ್ಟೆ.

■ ಲೇಖನ ಸಿದ್ಧಪಡಿಸಿದವರು : ಕೆ. ಎಸ್. ಪಾರ್ಥಸಾರಥಿ

"ಅತಿ ಆಸಕ್ತಿಕರವೂ ಕಠಿಣವೂ ಆದ ಆಧುನಿಕ ಸಾಹಿತ್ಯರೂಪಗಳಲ್ಲಿ ಜಾಹಿರಾತೂ ಒಂದು."

– ಆಲ್ಡಸ್ ಹಕ್ಸ್ಲಿ



ಶಾಬ್ದಿಕ ಕಲೆಗಳಲ್ಲಿ ವಿಶ್ವಾದ್ಯಂತ ಅತಿ ಪ್ರತಿಷ್ಠಿತವೆಂದು ಕಾವ್ಯ ಅಂಗೀಕೃತವಾಗಿರುವಾಗ, ವಾಣಿಜ್ಯದ ಪರಿಚಾರಿಕೆಯಷ್ಟೇ ಆಗಿರುವ, ಒಂದು ಸ್ವತಂತ್ರ ಕಲೆ ಕೂಡ ಅಲ್ಲದ ಜಾಹಿರಾತನ್ನು ಕಾವ್ಯದ ಮಟ್ಟಕ್ಕೇರಿಸಿ ನೋಡಿದರೆ ಮಡಿವಂತರು ಬೆಚ್ಚಿಬೀಳಬಹುದು. ಅರ್ಧ ಸತ್ಯ, ಮೋಸ ಹಾಗೂ ನೇರ ದಗಾಗಳಿಂದ ಕೂಡಿದ, ಜನರ ಅಹಮಿಕೆಗೆ, ಅಂತರ್ಯದ ಭಯಕ್ಕೆ, ಬೆಡಗಿಗೆ ಹಾಗೂ ಒಣಪ್ರತಿಷ್ಠೆಗೆ ಪೋಷಣೆ ಕೊಡುತ್ತಾ, ಓಲೈಸುತ್ತಾ, ಮರುಳು ಮಾಡುತ್ತಾ ಮಾಧ್ಯಮಗಳ ಮೂಲಕ ಪುಸಲಾಯಿಸುತ್ತಾ ಹಣ ದೋಚುವ ಕೀಳು ಅಭಿರುಚಿಯಿಂದ ಕೂಡಿರುವ ಜಾಹಿರಾತು ಕಾವ್ಯವಾಗುವುದಾದರೂ ಹೇಗೆ ಎಂಬ ಪ್ರಶ್ನೆ ಅಂತಹವರಿಗೆ ಏಳುವುದು ಸಹಜವಾದುದೇ.

ಅತ್ಯುತ್ತಮ ಕಾವ್ಯವನ್ನು ಸಂಪೂರ್ಣವಾಗಿ ಮೆಚ್ಚುವ ಸಾಮರ್ಥ್ಯವಿರುವವರು ಕೇವಲ ಕೆಲವರು ಮಾತ್ರ. ಅನೇಕರಿಗೆ ಉತ್ತಮ ಕಾವ್ಯಗಳು ಅರ್ಥವಾಗುವುದೇ ಇಲ್ಲ. ಆದರೆ ಒಂದು ಉತ್ತಮ ಜಾಹಿರಾತನ್ನು ಅಸಂಖ್ಯಾತ ಜನರು ಕೇಳಿ, ನೋಡಿ, ಚಿಂತಿಸಿ, ನಕ್ಕು ನಲಿದು ನಟಿಸುತ್ತಾರೆ. ಆ ಕಾವ್ಯಗಳ ಮೋಡಿ ಎಷ್ಟೆಂದರೆ ಅವನ್ನು ಆಲೈಸಿದ ಲಕ್ಷಾಂತರ ಜನರಿಗೆ ಒಮ್ಮೆಯಾದರೂ ಅವು ವರ್ಣಿಸುತ್ತಿರುವ ವಸ್ತುಗಳನ್ನು ಕೊಂಡು ಬಳಸಲು ಹಾತೊರೆಯುವಂತೆ, ಕಾರ್ಯೋನ್ಮುಖವಾಗುವಂತೆ ಪ್ರಚೋದನೆಯಾಗುತ್ತದೆ. ಜನರಿಗೆ ಕಾವ್ಯವೆಂದರೆ ಅದೇನೋ ವಿಶೇಷವಾಗಿದ್ದು, ಶಾಲೆಗಳಲ್ಲಿ ಅಧ್ಯಯನ ಮಾಡಿ, ಬಿಡುವಿನಿಂದ ಕೂಡಿದ ಸುಸಂಸ್ಕೃತರು ಮಾತ್ರ ಆನಂದಿಸಲು ಸಾಧ್ಯವಾದ, ಗಂಭೀರವಾದ, ವಿಶೇಷ ಸಂದರ್ಭಗಳಲ್ಲಿ ಮಾತ್ರ ಓದಬಹುದಾದ, ಸಾಮಾನ್ಯರ ಕೈಗೆಟುಕದ ವಿಷಯವೆಂದಾಗಿಬಿಟ್ಟಿದೆ; ಆದರೆ ಜಾಹಿರಾತು ದೈನಂದಿನ ಜೀವನದ ಒಂದು ಅಂಗ.

ಜಾಹಿರಾತಿನ ಮೂಲ ಉದ್ದೇಶ ನೂತನ ಉತ್ಪನ್ನಗಳ ಬಗ್ಗೆ ಆವಿಷ್ಕಾರಗಳ ಬಗ್ಗೆ ಗ್ರಾಹಕನಿಗೆ ಅವಶ್ಯ ಮಾಹಿತಿಯನ್ನು ಒದಗಿಸುವುದು. ಈ ದೃಷ್ಟಿಯಲ್ಲಿ ಇದು ಬಹಳ ಉಪಯುಕ್ತ; ಹಾಗಾಗಿ ನಾವು ಅಂತಹ ಮಾಹಿತಿ ಪಡೆಯಲು

# ಜಾಹಿರಾತು ಎಂಬ ಕಾವ್ಯಪ್ರಕಾರ

ಕಾವ್ಯ ಮತ್ತು ಜಾಹಿರಾತುಗಳೆರಡೂ ತಮ್ಮ ಪ್ರೇಕ್ಷಕನ ಕಲ್ಪನೆಗಳನ್ನು ಪ್ರವೇಶಿಸುತ್ತಾ ಅವನ ನಡವಳಿಕೆಯ ಮೇಲೆ ಪ್ರಭಾವ ಬೀರುತ್ತಾ ಒಂದು ರೀತಿಯ ಆದರ್ಶವನ್ನು ರೂಪಿಸುತ್ತಾ ಇರುತ್ತವೆ. ಆಸ್ಕರ್ ವೈಲ್ಡ್ ಹೇಳುವಂತೆ ಜೀವನ ಕಲೆಯ ಅನುಕರಣೆ ಎಂದಾದರೆ, ಎಲ್ಲಿಯವರೆಗೆ ಈ ಕಾವ್ಯ, ಜಾಹಿರಾತುಗಳೆರಡೂ ಅನುಕರಣೆಗೆ ಆಶ್ರಯವಾಗುತ್ತವೋ ಅಲ್ಲಿಯವರೆಗೆ ಅವು ಸೃಜನಶೀಲವೇ.

■

ಡಾ॥ ಕೆ. ಪೂರ್ಣ ಮಂಗಳಾ

ಸಂತೋಷಪಡುತ್ತೇವೆ. ಆದರೆ ಬಹುಪಾಲು ಜಾಹಿರಾತುಗಳು ಕೇವಲ ಗ್ರಾಹಕನ ಮನವೊಲಿಸುವ ತಂತ್ರಗಳತ್ತ ಮಾತ್ರ ಗಮನಹರಿಸುವುದರಿಂದ ಅಂಥಾ ಮಾಹಿತಿ ಪೂರ್ಣವೇನಲ್ಲ. ಮಾರಾಟ ಮಾಡಬೇಕಾದ ವಸ್ತುಗಳನ್ನು ಕಾವ್ಯಮಯವಾಗಿಸಿ ತನ್ಮೂಲಕ ವೈಭವೀಕರಿಸಿ ಆರೋಗ್ಯ, ಐಶ್ವರ್ಯ, ಸೌಂದರ್ಯ, ಫ್ಯಾಷನ್, ಜನಪ್ರಿಯತೆ, ನೆಮ್ಮದಿ ಇತ್ಯಾದಿ ಎಲ್ಲರೂ ಬಯಸುವ ಗುಣಗಳ ಹೆಸರನ್ನಿತ್ತು ಆಯಾ ವ್ಯಾಪಾರ ಮುದ್ರೆಗಳ ಬಗ್ಗೆ ನಮ್ಮಲ್ಲಿ ಒಂದು ನಿಲುವು ಏರ್ಪಡುವಂತೆ ಮಾಡುತ್ತವೆ.

ಹೀಗಿದ್ದರೂ ಕಾವ್ಯ ಮತ್ತು ಜಾಹಿರಾತುಗಳಲ್ಲಿ ಸಾಮಾನ್ಯ ಅಂಶಗಳಿವೆ. ಮೇಲ್ನೋಟಕ್ಕೆ ಕಾವ್ಯದಂತೆ ಜಾಹಿರಾತಿನಲ್ಲೂ ಅತಿ ವಿಸ್ತಾರವಾಗಿ ಪ್ರಾಸ ಲಯಗಳು, ಭಾವನಾತ್ಮಕ ಮೌಲ್ಯಗಳಿಗಾಗಿ ಆಯ್ಕೆಮಾಡಿದ ಪದಗಳು ಬಳಕೆಯಾಗುತ್ತವೆ. ಉದಾಹರಣೆಗೆ : ಚಿನ್ನಿಸ್ ಮಸಾಲಾ – 'ತಟ್ಟೆಯಾಗುತ್ತೆ ಖಾಲಿ ಮನವಾಗುತ್ತೆ ಜಾಲಿ', 'ಹಮಾಮ್ ಇದ್ದಲ್ಲಿ ಭಯ ಇನ್ನೆಲ್ಲಿ?' ಇತ್ಯಾದಿ.

ಅತ್ಯುತ್ತಮ ಕಾವ್ಯಗಳು ಧ್ವನಿಯಿಂದ, ಸಂದಿಗ್ಧಾರ್ಥಗಳಿಂದ ಕೂಡಿರುತ್ತವೆ ಎಂದಾದರೆ, ಒಂದೇ ಬಾರಿಗೆ ಎರಡು ಮೂರು ಅಥವಾ ಇನ್ನೂ ಹೆಚ್ಚು ಅರ್ಥಗಳನ್ನು ಕೊಡಬಲ್ಲ ಕಾವ್ಯಗಳು ಅತಿ ಶ್ರೀಮಂತ ಕಾವ್ಯಗಳೆನಿಸುತ್ತವೆ. ಎಷ್ಟೇ ಕೆಳಮಟ್ಟದಲ್ಲಾದರೂ ಜಾಹಿರಾತೂ ಕೂಡ ಈ ಸಂದಿಗ್ಧತೆಯನ್ನು ಬಳಸಿಕೊಂಡು ಪದಗಳ ಮೇಲೆ ಆಟವಾಡುತ್ತವೆ. ಉದಾಹರಣೆಗೆ : Hyundai Getz ಕಾರಿನ ಜಾಹಿರಾತಿನಲ್ಲಿ 'Rousing power, Getz your pulse racing even before you step inside one' ಎಂಬ ಹೇಳಿಕೆ ಇದೆ.

ಕಾವ್ಯ ಹಾಗೂ ಜಾಹಿರಾತುಗಳೆರಡೂ ಪ್ರತಿನಿತ್ಯದ ಅನುಭವದಲ್ಲಿ ದೊರೆಯುವ ದತ್ತಾಂಶಗಳಿಗೆ ಅರ್ಥಕೊಡಲು, ಅನುಭವದ ವಸ್ತುಗಳನ್ನು ಅವುಗಳಿಗಿಂತ ತೀರ ಹೊರತಾದ ಒಂದು ಸಂಕೇತದಂತೆ ಮಾಡಲು ಹೆಣಗುತ್ತವೆ. ಕವಿಯೊಬ್ಬನಿಗೆ ಮರಳಿ ಬರುವ ಯುಗಾದಿ, ವಸಂತದ ಆಗಮನದ, ಹೊಸ ವರುಷದ ಸೂಚಕವಾಗಿ ಅಷ್ಟಕ್ಕೇ ಉಳಿಯದೇ ನಲ್ಲನಲ್ಲೆಯರ ಪ್ರೇಮ ಪ್ರಣಯಗಳ, ಯೌವನದ ಆ ಮಧುರ ಕ್ಷಣಗಳ ನೆನಪು ತರಿಸಿ ಕಾವ್ಯ ಲಹರಿಯಲ್ಲಿ ತೇಲಿಸಿಬಿಡುತ್ತದೆ.

ಹಾಗೆಯೇ ಜಾಹಿರಾತು ಬರೆಯುವವ ಸಾಬೂನಿನ ತುಂಡೊಂದನ್ನು ಅಷ್ಟೇ ಆಗಿರಲು ಬಿಡದೇ ಅದಕ್ಕೆ ಸಾಂಸಾರಿಕ ಸುಖದ ಸಂಕೇತ, ಶ್ರೀಮಂತಿಕೆಯ ಸೊಗಸಿನ ಕುರುಹು, ಪುರುಷತ್ವದ ಸಂಕೇತ, ಅಥವಾ ಆರೋಗ್ಯ, ಸೌಂದರ್ಯ, ಚಿರಯೌವನದ ಪ್ರತೀಕಗಳನ್ನೆಲ್ಲಾ ತುಂಬಿಬಿಡುತ್ತಾನೆ. ಟೂತ್‌ಪೇಸ್ಟಿನಿಂದ ಟೈರ್‌ವರೆಗೆ, ಕಂಪ್ಯೂಟರ್‌ನಿಂದ ಕೋಲಾವರೆಗೆ

ಬಳಕೆದಾರರ ಸಾಮಾನುಗಳನ್ನೆಲ್ಲಾ ಕಾವ್ಯಮಯವಾಗಿಸುವುದು ಆ ಬರಹಗಾರನ ಕೆಲಸ.

ಬೇರೆಲ್ಲಾ ಸಾಹಿತ್ಯವನ್ನು ಆನಂದಿಸುವಾಗ ಹೇಗೋ ಹಾಗೇ ಇಲ್ಲೂ ಬಳಕೆದಾರ ಜಾಹಿರಾತಿನ ಪಾತ್ರಗಳಲ್ಲಿ ತನ್ನನ್ನು ತಾನೇ ಗುರುತಿಸಿಕೊಂಡು ಅನುಭವಿಸುತ್ತಾನೆ. ಪೋಷಕಾಂಶಭರಿತ ಪೇಯವೊಂದನ್ನು ಕುಡಿದು ಗೆಳೆಯರಿಗಿಂತ ಎತ್ತರ ಬೆಳೆದ ಬಾಲಕ, ಕ್ರೀಮ್ ಹಚ್ಚಿ ಗೌರವರ್ಣ ಪಡೆದು ಎಲ್ಲರನ್ನು ಬೆರಗುಗೊಳಿಸುವ ನವ ವಧು, ಆರೋಗ್ಯಕರ ಅಡುಗೆ ಎಣ್ಣೆ ಬಳಸಿ ರುಚಿಕರ ತಿನಿಸುಗಳನ್ನು ತಯಾರಿಸಿ ಮನೆಮಂದಿಯೆಲ್ಲರ ಮೆಚ್ಚುಗೆಗಳಿಸುವ ಸೊಸೆ, ಸಂತೋಷದಿಂದ ಒಟ್ಟಾಗಿ ಊಟಮಾಡುತ್ತಿರುವ ಸಂಸಾರ, ಸಾಬೂನೊಂದನ್ನು ಹಚ್ಚಿ ಮೊಡವೆ ನಿವಾರಿಸಿಕೊಂಡು ಆಡಿಕೊಳ್ಳುತ್ತಿದ್ದ ಗೆಳತಿಯರನ್ನು ತಬ್ಬಿಬ್ಬುಗೊಳಿಸಿದ ಯುವತಿ... ಇತ್ಯಾದಿ.

ಮಹಾನ್ ಕವಿಗಳ ಕಾವ್ಯಗಳಲ್ಲಿನ ಪಾತ್ರಗಳಲ್ಲಿ ಎಲ್ಲರೂ ತಮ್ಮನ್ನು ತಾವು ಕಂಡುಕೊಳ್ಳುವುದು ಅಷ್ಟು ಸುಲಭವಲ್ಲ. ಅಲ್ಲೆಲ್ಲಾ ಸೂಕ್ಷ್ಮವಾಗಿ ಗಮನಿಸಿ, ಪರಿಶ್ರಮದಿಂದ ಕಲ್ಪಿಸಿಕೊಳ್ಳುವ ಅವಶ್ಯಕತೆ ಇದೆ. ಅದೇ ಜಾಹಿರಾತುದಾರರು ಬಳಸುವ ಸುಂದರವಾದ, ಒಳ್ಳೆ ವೇಷಭೂಷಣ ಧರಿಸಿದ, ಸಂತೋಷ ಚಿಮ್ಮುವ, ಕಾಂತಿಯಿಂದ ಹೊಳೆಯುವ ಪಾತ್ರಗಳಂತೆ ನಾವಾಗಲು ನಮ್ಮಲ್ಲನೇಕರು ಬಯಸುತ್ತಾರೆ. ಹಾಗಾಗಿ ಗುರುತಿಸಿಕೊಳ್ಳುವಿಕೆ ಸುಲಭ. ಜೊತೆಗೆ, ಆನಂದದಾಯಕ ಕೂಡ. ಉದಾಹರಣೆಗೆ : ಅಂಬೆಗಾಲಿಕ್ಕುತ್ತಿದ್ದ ಎಳೆ ಕಂದ ಬೇಬಿ ಆಯಿಲ್‌ವೊಂದನ್ನು ಹಚ್ಚಿದ್ದಕ್ಕೆ ಕಾಲಿಗೆ ಬಲ ಬಂದು ಎದ್ದು ನಿಂತು ಹೆಜ್ಜೆಯಿಡುವುದನ್ನು ನೋಡುತ್ತಾ ಸಂತಸ ಪಡುವ ತಾಯಿಯಂತೆ, ಹಾಗೇ ಕರುಳು ಬಳ್ಳಿಯಿಂದ ಮೊದಲು ತಾಯಿಗಂಟಿದ್ದ ಮಗುವಾಗಿದ್ದು, ಕ್ರಮೇಣ ಬೆಳೆಯುತ್ತಾ ಬಂದು ಈಗ ವಿದೇಶದಲ್ಲಿದ್ದರೂ ದೂರವಾಣಿಯ ಸಂಪರ್ಕದಿಂದ ಬಯಸಿದಾಗ ಅಮ್ಮನ ಕರೆಗೆ ಓಗೊಡುವ ಮಗನ ತಾಯಿಯಂತೆ ತಾನೂ ಆಗಲು ಯಾವ ಗೃಹಿಣಿ ತಾನೇ ಬಯಸುವುದಿಲ್ಲ? ಜಾಹಿರಾತುಗಳ ಪ್ರಕಾರ ಆನಂದ ಸದಾಕಾಲ ಕೈಗೆಟುಕುವಂತೆ ಇರುತ್ತದೆ.

ಕಾವ್ಯ ಮತ್ತು ಜಾಹಿರಾತುಗಳೆರಡೂ ತಮ್ಮ ಪ್ರೇಕ್ಷಕನ ಕಲ್ಪನೆಗಳನ್ನು ಪ್ರವೇಶಿಸುತ್ತಾ ಅವನ ನಡವಳಿಕೆಯ ಮೇಲೆ ಪ್ರಭಾವ ಬೀರುತ್ತಾ ಒಂದು ರೀತಿಯ ಆದರ್ಶವನ್ನು ರೂಪಿಸುತ್ತಾ ಇರುತ್ತವೆ. ಆಸ್ಕರ್ ವೈಲ್ಡ್ ಹೇಳುವಂತೆ ಜೀವನ ಕಲೆಯ ಅನುಕರಣೆ ಎಂದಾದರೆ, ಎಲ್ಲಿಯವರೆಗೆ ಈ ಕಾವ್ಯ, ಜಾಹಿರಾತುಗಳೆರಡೂ ಅನುಕರಣೆಗೆ ಆಶ್ರಯವಾಗುತ್ತವೋ ಅಲ್ಲಿಯವರೆಗೆ ಅವು ಸೃಜನಶೀಲವೇ.

ಜೀವನ ಮತ್ತು ಅದಕ್ಕೆ ಸೇರಿದ ಎಲ್ಲಕ್ಕೂ ಕಾಲ್ಪನಿಕ, ಸಾಂಕೇತಿಕ ಅಥವಾ ಮಾದರಿಯ ಆಯಾಮ ಕೊಡುವ ಈ ಪದಮಾಂತ್ರಿಕತೆಗೆ ಕಾವ್ಯವೆಂದು ಕರೆಯುವುದಾದರೆ, ಜಾಹಿರಾತು ಪ್ರಾಯೋಜಿತ ಕಾವ್ಯ, ಇನ್ನೊಂದು ಅಪ್ರಾಯೋಜಿತ ಕಾವ್ಯ. ಬಳಕೆದಾರನ ಉತ್ಪನ್ನಗಳ ಈ ಕಾವ್ಯವನ್ನು ನಾವು ಪರಿಗಣಿಸಿದಾಗ ನಮ್ಮ ಈ ಕಾಲದಲ್ಲೂ ಕಾವ್ಯ ರಚನೆಗೆ ಕೊರತೆಯೇನಿಲ್ಲ. ಅಷ್ಟೇ ಅಲ್ಲ ಇತಿಹಾಸದಲ್ಲಿ ಇನ್ನಾವ ಕಾಲಕ್ಕಿಂತಲೂ ಈಗ ಕಾವ್ಯಗಳ ಬಗ್ಗೆ ನಮ್ಮ ಪ್ರವೇಶ ಹೆಚ್ಚಾಗಿದೆ ಎಂದು ಮನಗಾಣುತ್ತೇವೆ. ಒಂದು ಸಾಬೂನಿನ ಬಗ್ಗೆಯೋ, ಪಾನೀಯದ ಕುರಿತಾಗಿಯೋ, ಇಲ್ಲ, ಇನ್ನಾವುದೋ ವಸ್ತುವಿನ ಬಗ್ಗೆ ಒಂದು ಚುಟುಕವನ್ನು ಕೇಳದೇ ಹತ್ತು-ಹದಿನೈದು ನಿಮಿಷ ರೇಡಿಯೋ ಆಲೈಸುವುದಾಗಲೀ ಟಿ.ವಿ. ನೋಡುವುದಾಗಲೀ ಇಂದು ಅಸಾಧ್ಯವಾಗಿದೆ.

ಮಮ್ಮಟ ಹೇಳಿದ ಕಾವ್ಯಪ್ರಯೋಜನಗಳಲ್ಲಿ ಯಶಸ್ಸು, ಹಣಗಳಿಕೆ ಮತ್ತು ಕಾಂತಾ ಸಂಹಿತೆ ಬಳಸಿ ಮನವೊಲಿಸುವಿಕೆಗಳನ್ನು ಪರಿಗಣಿಸಿದರೆ, ಬೇರೆಲ್ಲ ಕಾವ್ಯಗಳಿಗಿಂತ ಜಾಹಿರಾತಿನ

## ಸಾದರ ಸ್ವೀಕಾರ

**ಇದು ನಮ್ಮ ಕರ್ನಾಟಕ** (ಹೊಸತು ವಾಚಿಕೆ)
ಸಂ. : ರಾ. ನಂ. ಚಂದ್ರಶೇಖರ
**ಪುಟ : ೧೭೬** **ಬೆಲೆ : ರೂ. ೭೫**

**ಪ್ರಚಲಿತ ವಿದ್ಯಮಾನ** (ಹೊಸತು ವಾಚಿಕೆ)
ಸಂ. : ಸಿ. ಆರ್. ಕೃಷ್ಣರಾವ್
**ಪುಟ : ೧೭೬** **ಬೆಲೆ : ರೂ. ೭೫**

**ಇತಿಹಾಸದ ಪರಾಮರ್ಶೆ** (ಹೊಸತು ವಾಚಿಕೆ)
ಸಂ. : ಡಾ|| ಎಚ್. ಎಸ್. ಗೋಪಾಲ ರಾವ್
**ಪುಟ : ೧೪೪** **ಬೆಲೆ : ರೂ. ೭೫**

**ಸಾಹಿತ್ಯ ಸಂವಾದ** (ಹೊಸತು ವಾಚಿಕೆ)
ಸಂ. : ಡಾ|| ಎಚ್. ಎಸ್. ರಾಘವೇಂದ್ರ ರಾವ್
**ಪುಟ : ೧೯೨** **ಬೆಲೆ : ರೂ. ೭೫**

**ಶಿಕ್ಷಣ ಮತ್ತು ಸಂಸ್ಕೃತಿ** (ಹೊಸತು ವಾಚಿಕೆ)
ಸಂ. : ಪ್ರೊ|| ಬಿ. ವಿ. ವೀರಭದ್ರಪ್ಪ
**ಪುಟ : ೧೬೦** **ಬೆಲೆ : ರೂ. ೭೫**

ಮೇಲಿನ ಐದು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಪರ್ಯಾಲೋಚನ** (ಲೇಖನ ಸಂಕಲನ) ಸಿ.ಪಿ.ಕೆ.
**ಪುಟ : ೧೨೩** **ಬೆಲೆ : ರೂ. ೭೫**
**ಸಂವಹನ**, ೧೨/೧ಎ, ಈವ್ನಿಂಗ್ ಬಜಾರ್ ಹಿಂಭಾಗ, ಶಿವರಾಂಪೇಟೆ, ಮೈಸೂರು - ೫೭೦ ೦೦೧

**ತಾಯಿ** (ಕತೆಗಳು) ಕನ್ನಡಕ್ಕೆ : ಸಿ.ಪಿ.ಕೆ.
**ಪುಟ : ೮೦** **ಬೆಲೆ : ರೂ. ೬೦**
**ಚಿತ್ರಭಾನು ಪ್ರಕಾಶನ**, ೨೨೬೫/೧೯, 'ಭಾರತಿ' ೪ನೆಯ ತಿರುವು, ವಿನಾಯಕನಗರ, ಮೈಸೂರು - ೫೭೦ ೦೧೨

**'ಶ್ರೀ' ಸಾಹಿತ್ಯ ಸಿರಿ** (ಲೇಖನಗಳು) ಸಿ.ಪಿ.ಕೆ.
**ಪುಟ : ೬೪** **ಬೆಲೆ : ರೂ. ೪೦**

**ಗೋವಿಂದ ಪೈ : ಎರಡು ನೋಟ** ಸಿ.ಪಿ.ಕೆ.
**ಪುಟ : ೩೬** **ಬೆಲೆ : ರೂ. ೩೦**

**ತೀ.ನಂ. ಶ್ರೀ : ತ್ರಿಮುಖ** (ಲೇಖನಗಳು) ಸಿ.ಪಿ.ಕೆ.
**ಪುಟ : ೫೬** **ಬೆಲೆ : ರೂ. ೪೦**

**ಮಾಸ್ತಿಕೃತಿ ಚತುರ್ಮುಖ** ಸಿ.ಪಿ.ಕೆ.
**ಪುಟ : ೮೪** **ಬೆಲೆ : ರೂ. ೪೦**

**ಜೈನ ಸಾಹಿತ್ಯ : ಕೆಲವು ನೋಟಗಳು** (ಲೇಖನಗಳು) ಸಿ.ಪಿ.ಕೆ.
**ಪುಟ : ೧೩೬** **ಬೆಲೆ : ರೂ. ೭೦**

ಮೇಲಿನ ಐದು ಪುಸ್ತಕಗಳ ಪ್ರಕಾಶಕರು
**ಚೇತನ ಬುಕ್ ಹೌಸ್**, ರೇಣುಕಾಚಾರ್ಯ ದೇವಸ್ಥಾನದ ರಸ್ತೆ, ಲಕ್ಷ್ಮಿ ಟಾಕೀಸ್ ಹಿಂಭಾಗ, ಮೈಸೂರು - ೫೭೦ ೦೨೪

**ಕನ್ನಡ ಬರಹವನ್ನು ಸರಿಪಡಿಸೋಣ !** (ಲೇಖನ ಸಂಗ್ರಹ)
ಡಿ. ಎನ್. ಶಂಕರ ಭಟ್
**ಪುಟ : ೨೪೮** **ಬೆಲೆ : ರೂ. ೧೨೦**
**ಭಾಷಾ ಪ್ರಕಾಶನ**, ನಂ.೪೦೨, ರೂಪಾನಗರ, ಮೈಸೂರು-೨೬

**ನೂರಾರು ಕಂಬದ ಮಂಟಪ** (ವಚನಗಳು)
ಗುರುಮೂರ್ತಿ ಪೆಂಡಕೂರು
**ಪುಟ : ೧೪೧** **ಬೆಲೆ : ರೂ. ೫೦**

**ಹಗರಿ ಬೊಮ್ಮನಹಳ್ಳಿ** (ತಾಲೂಕು ದರ್ಶನ)
ಪರಮೇಶ್ವರಯ್ಯ ಸೊಪ್ಪಿಮಠ
**ಪುಟ : ೧೦೨+೮** **ಬೆಲೆ : ರೂ. ೪೦**

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಯುವಕರ ಸಂಘ**, ರಾಮನಗರ, ಹಗರಿಬೊಮ್ಮನಹಳ್ಳಿ -೫೮೩ ೨೧೨, ಬಳ್ಳಾರಿ ಜಿಲ್ಲೆ

**ಲಂಗರು** (ಕಥಾ ಸಂಕಲನ) ಕೆ. ವಿ. ಉಭಯಭಾರತಿ
**ಪುಟ : ೧೬೦** **ಬೆಲೆ : ರೂ. ೮೦**
**ಹೇಮಂತ ಸಾಹಿತ್ಯ**, ೯೨೭-ಸಿ, ೪ನೇ ಇ-ವಿಭಾಗ, ೧೧-ಎ ಮುಖ್ಯರಸ್ತೆ, ರಾಜಾಜಿನಗರ, ಬೆಂಗಳೂರು - ೧೦

**ಸಮಾಜ ವಿಜ್ಞಾನ ಲೇಖನ ದರ್ಶಕ** (ಅರ್ಧವಾರ್ಷಿಕ)
ದರ್ಶಕರು : ಡಾ|| ಎಸ್. ಆರ್. ಗುಂಜಾಳ
**ಪುಟ : ೨೪**
**ಭಾರತೀಯ ಸಮಾಜವಿಜ್ಞಾನ ಸಂಶೋಧನ ಮಂಡಳಿ**, ದಕ್ಷಿಣ ಪ್ರಾಂತೀಯ ಕೇಂದ್ರ, ಉಸ್ಮಾನಿಯಾ ವಿಶ್ವವಿದ್ಯಾಲಯ, ಗ್ರಂಥಾಲಯ ಬಿಲ್ಡಿಂಗ್, ಹೈದರಾಬಾದ್ - ೫೦೦ ೦೦೭

**ಅಂಕುರ** (ಕವನ ಸಂಕಲನ) ಪ್ರ. ಸಂ. : ಎಚ್. ಪಂಪಯ್ಯಶೆಟ್ಟಿ
**ಪುಟ : ೮೮** **ಬೆಲೆ : ರೂ. ೫೦**
**'ವೈಶ್ಯವಾರ್ತಾ'** ಶಿವರಂಜಿನಿ, ನಂ. ೬-೧-೫೮, ತಿಮ್ಮಾಪುರಪೇಟೆ, ರಾಯಚೂರು - ೫೮೪ ೧೦೩

**ಸೂರ್ಯನಿಗೆ ಸಾವಿಲ್ಲ** (ಕವನ ಸಂಕಲನ)
ಶಂಕರ ಮುತ್ತಣ್ಣವರ
**ಪುಟ : ೭೨** **ಬೆಲೆ : ರೂ. ೪೫**

**ಕತ್ತಲೆಗೂ ಕಣ್ಣು** (ಕವನ ಸಂಕಲನ) ಶಂಕರ ಮುತ್ತಣ್ಣವರ
**ಪುಟ : ೬೮** **ಬೆಲೆ : ರೂ. ೪೫**

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ರಾಮಕೃಷ್ಣ ಪ್ರಕಾಶನ**, ಅಂಚೆ :ಗಲಗಲಿ, ಯಡಹಳ್ಳಿ - ೫೮೭ ೧೧೨

**ಸುಳಿಗಳು** (ಕವನ ಸಂಕಲನ)
ವಿ.ಎಚ್. ವೀರಣ್ಣ ಮಂಡಾಳಕರ್
**ಪುಟ : ೧೧೦** **ಬೆಲೆ : ರೂ. ೪೦**
**ಹುವಫ್ಲೋರ್ ಪ್ರಕಾಶನ**, ಮಂಠಾಳ, ಬಸವಕಲ್ಯಾಣ ತಾಲೂಕು, ಬೀದರ ಜಿಲ್ಲೆ

**ಮಂಜು ಮುಸುಕಿದ ಕಣಿವೆಗಳಲ್ಲಿ** (ಪ್ರವಾಸ ಲೇಖನಗಳು)
ಮುನಿಯಾಲ್ ಗಣೇಶ್ ಶೆಣೈ
**ಪುಟ : ೮೮** **ಬೆಲೆ : ರೂ. ೩೦**

**ಜತ್ರೋಫಾ** ಮುನಿಯಾಲ್ ಗಣೇಶ್ ಶೆಣೈ
**ಪುಟ : ೪೮** **ಬೆಲೆ : ರೂ. ೧೫**

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಪುಸ್ತಕ ನಿಧಿ**, ಗಾವಳಿ ಶಾಲೆ ಹತ್ತಿರ, ಅಂಚೆ : ಹಳ್ನಾಡಿ- ಅರ್ಕಾಡಿ, ಕುಂದಾಪುರ - ೫೭೬ ೨೧೦

**ಕನ್ನಡ ಕಿಸೆಗನ್ನಡಿ** (ಕಿರು ಪುಸ್ತಕ)
ಸಂ. : ರಾ.ನಂ. ಚಂದ್ರಶೇಖರ
**ಪುಟ : ೪೮** **ಬೆಲೆ : ರೂ. [illegible]**
**ಕನ್ನಡ ಗೆಳೆಯರ ಬಳಗ**, ನಂ. ೬., ರಾಘವೇಂದ್ರ ಕಾಂಪ್ಲೆಕ್ಸ್ ೨ನೇ ತಿರುವು, ಸಿ.ಕೆ.ಸಿ. ಗಾರ್ಡನ್, ಬೆಂಗಳೂರು - ೨೬

ಕಾವ್ಯಕ್ಕೇ ಹಿಂದೆಂದಿಗಿಂತಲೂ ಅತಿ ಹೆಚ್ಚು ಪ್ರಯೋಜನವಿರುವುದು ಗಮನಕ್ಕೆ ಬರುತ್ತದೆ.

ಈ ಕಾವ್ಯವು ಪ್ರಾಯೋಜಿತವೆಂದ ಮಾತ್ರಕ್ಕೆ ಕೆಳಮಟ್ಟದ್ದಾಗಿರಬೇಕೆಂದೇನೂ ಇಲ್ಲ, ಏಕೆಂದರೆ, ಹಿಂದಿನ ರಾಜರ ಆಸ್ಥಾನಗಳಲ್ಲಿ ಶ್ರೀಮಂತರ ಭವನಗಳಲ್ಲಿ ಇರುತ್ತಿದ್ದ ಕವಿಗಳೂ ಪ್ರಾಯೋಜಿತ ಕವಿಗಳೇ. ಆ ಕವಿಗಳು ಆಸ್ಥಾನಗಳಲ್ಲೇ ಉಳಿದುಕೊಳ್ಳಲು ಹಣಪಡೆದು, ಆಯಾ ಸಂದರ್ಭಕ್ಕೆ ತಕ್ಕಂತೆ ತಮ್ಮ ಆಶ್ರಯದಾತನ, ಆತನ ಆಳ್ವಿಕೆಯ ಸ್ತುತಿ ಮಾಡುವ ಕಾವ್ಯಗಳನ್ನು ರಚಿಸುತ್ತಿದ್ದರು. ಅಲ್ಲೂ ಉತ್ತಮ ಕವಿಗಳು ಆ ಮುಖಸ್ತುತಿಯ ಮಟ್ಟವನ್ನು ಮೀರಿ, ತಮ್ಮ ಕಾಲದ, ರಾಷ್ಟ್ರದ ಉನ್ನತ ಆದರ್ಶಗಳನ್ನು ವ್ಯಕ್ತಪಡಿಸುತ್ತಿದ್ದುದೂ ಉಂಟು. ಭಾಸ, ಕಾಳಿದಾಸಾದಿ ಕವಿಗಳು ಆಸ್ಥಾನ ಕವಿಗಳೇ ಆಗಿದ್ದರೂ ತಮ್ಮ ಕಾಲದ ಅತ್ಯುನ್ನತ ಮೌಲ್ಯಗಳನ್ನು ಪ್ರತಿಪಾದಿಸುವ ಕೃತಿಗಳನ್ನು ರಚಿಸಿ ಅಮರರಾಗಿದ್ದಾರೆ.

ಅಪ್ರಾಯೋಜಿತ ಸಾಂಪ್ರದಾಯಿಕ ಕಾವ್ಯದಲ್ಲಿ ಒಂದು ವಿಶೇಷ ತೊಡಕು ಇದೆ. ಬೇರಾವ ಲಾಭವೂ ಇಲ್ಲದೇ ತನ್ನ ತೃಪ್ತಿಗೆಂದು ಕವಿ ಬರೆದ ಕಾವ್ಯ ಎಂತಹ ಕೀಳುಮಟ್ಟದ್ದಾಗಿದ್ದರೂ ಆಗಿರಬಹುದು. ಈ ರೀತಿ ಹೆಚ್ಚು ಕಾವ್ಯಗಳು ಹೊರಬರುತ್ತಾ ಕಾವ್ಯಗಳ ಗುಣಮಟ್ಟವೇ ದುಃಸ್ಥಿತಿಗೆ ತಲುಪುವ ಸಾಧ್ಯತೆಗಳು ಹೆಚ್ಚು. ಬಹುಪಾಲು ಜನ ಕೇಳುವುದೆಲ್ಲ ಬಳಕೆದಾರನ ಉತ್ಪನ್ನಗಳ ಪ್ರಾಯೋಜಿತ ಕಾವ್ಯವೆಂದಾಗಿರುವ ಇಂದಿನ ಈ ಪರಿಸರದಲ್ಲಿ, ಕಾವ್ಯದ ಭಾಷೆ ನಿರಂತರವಾಗಿ ಮತ್ತು ನಿರ್ದಾಕ್ಷಿಣ್ಯವಾಗಿ ಮಾರಾಟದ ಉದ್ದೇಶಕ್ಕಾಗಿಯೇ ಬಳಸಲ್ಪಡುತ್ತಿದ್ದು ಯಾರಾದರೂ ಏನನ್ನಾದರೂ ಉತ್ಸಾಹದಿಂದ ಹೇಳುತ್ತಿದ್ದಾರೆ ಎಂದರೆ ಅವರೇನು ಮಾರಾಟ ಮಾಡುತ್ತಿದ್ದಾರೆ ಎಂದು ಕೇಳುವಂತಾದರೆ ಆಶ್ಚರ್ಯವಿಲ್ಲ. ಸುಂದರ ನಿಸರ್ಗ ತಾಣವೆಂದು ಒಂದು ಜಾಗವನ್ನು ವರ್ಣಿಸಿದರೆ ಅದು ಪ್ರವಾಸೋದ್ಯಮ ಇಲಾಖೆಯ ಜಾಹಿರಾತು ಎಂದೋ, ಯುವತಿಯೊಬ್ಬಳ ಸೌಂದರ್ಯ ವರ್ಣಿಸಿದರೆ ತನ್ಮೂಲಕ ಅವರು ಯಾವುದೋ ಸೌಂದರ್ಯವರ್ಧಕದ ಮಾರಾಟ ಮಾಡುತ್ತಿದ್ದಾರೆಂದೋ ಭಾವಿಸಲು ಅವಕಾಶವಿದೆ.

ಜಾಹಿರಾತು ಕ್ರಮೇಣ ತನ್ನ ಈ ಸಾಂಕೇತಿಕತೆಗಾಗಿ ಸಾಂಸಾರಿಕ ಪ್ರೀತಿ ನೆಮ್ಮದಿ, ಯೌವನದ ಆಕರ್ಷಣೆಗಳು, ತಾಯಿಯ ವಾತ್ಸಲ್ಯಗಳನ್ನಷ್ಟೇ ಅಲ್ಲದೆ ದೇಶಭಕ್ತಿ, ಧಾರ್ಮಿಕ ಶ್ರದ್ಧೆ, ಹಬ್ಬ ಹರಿದಿನಗಳ ಆಚರಣೆಯನ್ನೆಲ್ಲಾ ಆವರಿಸಿಕೊಳ್ಳುತ್ತಿದೆ. (ಅಕ್ಷಯ ತೃತೀಯಾ ಎಂಬ ದಿನದಂದು ಪೂಜೆ, ಹಬ್ಬವನ್ನು ಬಹುಕಾಲದಿಂದ ಹಲವರು ಆಚರಿಸುತ್ತಿದ್ದರೂ ಇತ್ತೀಚಿನ ವರ್ಷಗಳಲ್ಲಿ ಆ ಹಬ್ಬಕ್ಕೆ ಸುವರ್ಣಾಭರಣದ ಖರೀದಿಯೊಂದಿಗೆ ತಾಳೆ ಹಾಕಿದ್ದಾರೆ.)

ಇದರೊಂದಿಗೆ ಈ ಜಾಹಿರಾತೆಂಬ ಶ್ರೀಮಂತ ಉದ್ದಿಮೆಯೊಡನೆ ಅಪ್ರಾಯೋಜಿತ ಕಾವ್ಯ ಗುದ್ದಾಡುವುದು ಅಷ್ಟೇನೂ ಸುಲಭವಲ್ಲ. ದೈನಂದಿನ ಜೀವನದ ಎಲ್ಲ ಸಾಂಕೇತಿಕತೆಯನ್ನು, ಅದರಲ್ಲೂ ವಿಶೇಷತಃ ಹರುಷೋಲ್ಲಾಸಗಳಂತಹ ಧನಾತ್ಮಕ ಸಂಕೇತಗಳನ್ನೆಲ್ಲ ನುಂಗಿ ಹಾಕಿ ಅದಕ್ಕೆಲ್ಲಾ ಬರೀ ಮಾರಾಟದ ವಾಸನೆ ತುಂಬಿರುವ ಜಾಹಿರಾತಿಗಿಂತ ಬೇರೆಯಾಗಿ ಕಾಣುವ ಹಂಬಲದಲ್ಲಿ, ಅಪ್ರಾಯೋಜಿತ ಕಾವ್ಯ ಬರೀ ಋಣಾತ್ಮಕ ಭಾವನೆಗಳಾದ ಹತಾಶೆ, ಭ್ರಮನಿರಸನ, ಅಪನಂಬಿಕೆಗಳ ಬಗ್ಗೆಯೇ ಕಾಳಜಿ ವಹಿಸಿದಂತೆ ಕಂಡರೆ ಆಶ್ಚರ್ಯ ಪಡಬೇಕಾಗಿಲ್ಲ. ಮೊದಲೇ ಸಾಂಪ್ರದಾಯಿಕ ಕವಿಗಳ ಕಾವ್ಯಗಳು ಅಸ್ಪಷ್ಟ ಸಾಂಕೇತಿಕತೆಯಿಂದ ತುಂಬಿದ್ದು ಅರ್ಥಮಾಡಿಕೊಳ್ಳುವುದು ಕಷ್ಟ, ಇದರೊಂದಿಗೆ ಕಾವ್ಯವು ದುಗುಡ ದುಮ್ಮಾನಗಳಿಂದಲೂ ತುಂಬಿದರೆ ಒದುಗ ಕನಸುಗಳನ್ನು ಮಾರುವ ವಾಣಿಜ್ಯೋದ್ದಿಮೆಯ ಕಾವ್ಯಕ್ಕೆ ಒಲಿಯುವುದರಲ್ಲಿ ಅಚ್ಚರಿಯೇನು ? ಹೊಸ ಹೊಸ ನಮೂನೆ ಕಾರುಗಳು, ಅಮೃತಶಿಲೆಯ ನೆಲದಲ್ಲಿ ರತ್ನಗಂಬಳಿ ಹಾಸಿದ ಭವ್ಯ ಬಂಗಲೆಗಳಂತಹ ನೇರವಾಗಿ ಕೈಗೆಟುಕದ ಅದ್ದೂರಿಗಳನ್ನು ಸಾಲಸೌಲಭ್ಯ, ಸುಲಭ ಕಂತಿನಲ್ಲಿ ಹಣ ಪಾವತಿಯೇ ಮುಂತಾದ ಆಶ್ವಾಸನೆಗಳೊಂದಿಗೆ ಕೈಬೀಸಿ ಕರೆಯುತ್ತಾ ಆಜೀವಪರ್ಯಂತ ನಿರಂತರ ಆರ್ಥಿಕ ಆತಂಕದ ಸುಳಿಗೆಳೆಯುವ ಈ ಜಾಹಿರಾತಿನ ಮೋಡಿ ಸಾರ್ವಜನಿಕರನ್ನು ಅತಿವೇಗದಲ್ಲಿ ಆವರಿಸುತ್ತಿದೆ.

ಕವಿಗಳು ವಿಶ್ವದ ಅನಂಗೀಕೃತ ಶಾಸಕರು ಎಂದು ಶೆಲ್ಲಿ ಹೇಳುತ್ತಾನೆ. ಅಂತಹ ಶಾಸಕರಿಗೆ ಹೊಸ ಹೊಸ ಭಾವನೆಗಳನ್ನು ನಮ್ಮಲ್ಲಿ ಹುಟ್ಟುಹಾಕಿ ಬದಲಾಗುವ ಪ್ರಪಂಚಕ್ಕೆ ಹೊಂದಾಣಿಕೆ ಮಾಡಿಕೊಳ್ಳಲು ನಮಗೆ ಸಹಾಯ ಮಾಡಬೇಕಾದ ಜವಾಬ್ದಾರಿಯೂ ಇದೆ. ಜಾಹಿರಾತಿನ ಕಾವ್ಯವೂ ನಮಗೆಲ್ಲ ಹೊಸ ಆವಿಷ್ಕಾರಗಳನ್ನು ಸುಖ ಸಾಧನಗಳನ್ನು ಪರಿಚಯಿಸುತ್ತಾ ಭಾಗಶಃವಾದರೂ ಈ ಕಾರ್ಯ ನಿರ್ವಹಿಸುತ್ತದೆ. ನಮ್ಮ ಅಭಿಪ್ರಾಯಗಳೇನೇ ಇದ್ದರೂ ಜಾಹಿರಾತು ನಮ್ಮ ಈ ಆಧುನಿಕಯುಗದ ಅನಿವಾರ್ಯ ಕಾವ್ಯ ಪ್ರಕಾರ.

**ಡಾ॥ ಕೆ. ಪೂರ್ಣ ಮಂಗಳಾ**
೨೩, ಪ್ರಣವ, ೧೩ನೇ ಬ್ಲಾಕ್, ಎಸ್. ಬಿ. ಎಂ. ಕಾಲೋನಿ,
ಶ್ರೀರಾಮಪುರ ೨ನೇ ಹಂತ, ಮೈಸೂರು - ೫೭೦ ೦೨೩

## ಎಲ್ಲಾ ಬಿಟ್ಟು

ಕೆಲವೊಮ್ಮೆ
ಮೈಮೇಲಿರುವುದ ಕಿತ್ತೊಗೆದು
ದೂರ ದೂರ ಗೊತ್ತಿಲ್ಲದೆಡೆ
ಓಡಿಬಿಡೋಣ ಎನಿಸುತ್ತದೆ

ಏಗಲಾಗದೆ ಬಾಗಲಾಗದೆ
ನವದ್ವಾರಗಳನು ಮುಚ್ಚಿ
ಮೌನ ಕಣಿವೆಯೊಳು ಮೌನವಾಗಿ
ಸತ್ಯದೊಳು ಬೆತ್ತಲೆಯಾಗಿ
ನಡೆದು ಬಿಡೋಣ ಎನಿಸುತ್ತದೆ

ಹತ್ತನೆಯ ದ್ವಾರವೊಂದು ಹುಡುಕಿ
ಉಟ್ಟಬಟ್ಟೆಯ ತೋರಣ
ಬಾಗಿಲಿಗೆ ಕಟ್ಟಿ
ಎಲ್ಲೆಗಳ ದಾಟಿ
ಸೂರ್ಯನಡಿಯಲಿ ಸ್ತಬ್ಧವಾಗಿ
ಅಂಬರದೊಂದಿಗೆ
ದಿಗಂಬರಳಾಗಿ ನಿಲ್ಲಬೇಕೆನಿಸುತ್ತದೆ !



**ಡಾ॥ ಶೈಲಜಾ ಕೆ. ಆರ್.**
೩ನೇ ಮುಖ್ಯರಸ್ತೆ, ಕೆ. ಆರ್. ಎಕ್ಸ್‌ಟೆನ್ಷನ್, ತಿಪಟೂರು - ೫೭೭ ೨೦೨,
ತುಮಕೂರು ಜಿಲ್ಲೆ

# ಒಂದು ಶುದ್ಧ ಸಂತೋಷ

ಭಾರತೀ ಕಾಸರಗೋಡು

> ಪ್ರತಿಭೆಯುಳ್ಳ ವ್ಯಕ್ತಿ ನಮ್ಮಲ್ಲಿಂದು ಬದುಕುವುದೇ ಕಷ್ಟವಾಗಿದೆ. ಪ್ರತಿಭೆಯೊಂದಿಗೆ ಸ್ವಾಭಿಮಾನವೂ ಇದ್ದರೆ ತುಂಬ ಕಷ್ಟ. ಈ ಸಂಗಮ ಮಹಿಳೆಯಾಗಿಬಿಟ್ಟರೆ ಇನ್ನೂ ಕಷ್ಟ. ಇವೆಲ್ಲದರೊಂದಿಗೆ ಒಂದಿಷ್ಟು ಪ್ರಸನ್ನರೂಪವೂ ತೋರಿದರೆ ಸಮಸ್ಯೆಗಳು ಜಾಸ್ತಿ. ಅನೇಕಾನೇಕ ಹಲ್ಲುಗಳ ನಡುವೆ ಇರುವ ಒಂದೇ ಮೆತ್ತನ ನಾಲಿಗೆಯಂತೆ ಜಾಗರೂಕನಾಗಿ ಪ್ರವರ್ತಿಸಬೇಕು. ಇಂಥ ಗಟ್ಟಿಗಿತ್ತಿಯರಲ್ಲಿ ಸತ್ಯವತಿ ಕೂಡ ಒಬ್ಬರು. ತನ್ನಷ್ಟಕ್ಕೆ ಧೀರವಾಗಿ ಬಾಳುತ್ತಿದ್ದಾರೆ. ತನ್ನ ಸಾಧನೆಗಳಲ್ಲಿ ಮುಳುಗಿದ್ದಾರೆ.

**ಸೆ**ರೆ ಹಿಡಿದು ಬಿಟ್ಟರಪ್ಪ ಸತ್ಯವತಿ !

ಒಂದೆರಡು ಹಾಡು ಕೇಳಿ ಹೋಗೋಣವೆಂದು ಕೂತವಳು ಕೇಳುತ್ತಾ ಕೇಳುತ್ತಾ ನನ್ನನ್ನೇ ಮರೆತು ಕಛೇರಿ ಕಡೆಯ ವರೆಗೂ ಅಲುಗಾಡದೆ ಕೂತುಬಿಟ್ಟೆ. ಅದು ನಾನು ಕೂತದ್ದಲ್ಲ: ಸತ್ಯವತಿ ಕಟ್ಟಿಹಾಕಿದ್ದು!

ಅವತ್ತು ಆಕೆ ಹರಿಸಿದ್ದು ಅದೆಂಥ ಸ್ನಿಗ್ಧ ಸುಂದರ ಗಾನಧಾರೆ! ಮಿತವಾದ ಅಲಂಕಾರದಲ್ಲಿ ಚೊಕ್ಕವಾಗಿ ನಗುನಗುತ್ತ ಕೂತು, ಆಪ್ಯಾಯಮಾನವಾಗಿ ಶ್ರುತಿಗೆ ಕೊರಲು ಸೇರಿಸಿ, ಮಾರ್ದವವಾಗಿ ಹಾಡತೊಡಗಿದ್ದೇ ತಡ, ಏಕಾಏಕಿ ಒಂದು ಅತಿ ದಿವ್ಯ ಪ್ರಶಾಂತ ಭಾವ ಮನಸ್ಸನ್ನು ತುಂಬಿಬಿಟ್ಟಿತು. ಕಳವಳಗಳು ಹಾರಿಹೋದವು. ಮನೆಯಲ್ಲಿದ್ದ 'ತುಂಬ ಕೆಲಸ' ಮರೆತುಹೋಯಿತು. ಮುಂಬರಲಿರುವ ಮಧುರ ಉಲಿತಗಳಿಗೆ, ಗೆಜ್ಜೆ ಕುಣಿತಗಳಿಗೆ, ರಾಗಭಾವಗಳ ರಮಣೀಯ ಶಬ್ದಚಿತ್ರಗಳಿಗೆ ಮನಸ್ಸು ಸಡಗರದಿಂದ ಕಾದುಕುಳಿತಿತ್ತು.

ಸತ್ಯವತಿ ನಿರಾಶೆಗೊಳಿಸಲಿಲ್ಲ. ತನ್ನ ಅತ್ಯುತ್ತಮವನ್ನು ನಮಗಂದು ಕೊಡಬೇಕೆಂದು ಆಕೆ ತೀರ್ಮಾನಿಸಿದ್ದರೋ ಏನೋ! ಆಕೆಯ ಶ್ರದ್ಧೆಗೆ ಸಭೆ ಮೂಕವಾಯಿತು. ಸಂಗೀತದ ಮುಂದೆ ನಾವು ತೋರಬಹುದಾದದ್ದು ಅಷ್ಟೇ ತಾನೇ! ಸಂತೋಷದೊಂದು ಅರಳುಗಣ್ಣು, ಒಂದು ಮುಗ್ಧ ಮೌನ. ಅಷ್ಟೇ! ಈ ಮುಗ್ಧತೆ, ಈ ಮೌನ ಕಲಾವಿದರನ್ನು ಉತ್ತೇಜಿಸುತ್ತದೆ. ಒಡಲಾಳದಿಂದ ಅತ್ಯುತ್ಕೃಷ್ಟವನ್ನು ತೆಗೆದು ತೆಗೆದು ಕೊಡುತ್ತಾರೆ. ಅವರು ಮಾಡಿಕೊಂಡು ಬಂದಿರುವ ಕಛೇರಿ ಸಿದ್ಧತೆಗಿಂತ ಮಿಗಿಲಾಗಿ ಕಳೆಗಟ್ಟಿಬಿಡುತ್ತದೆ ಅವರ ಕಲಾಭಿವ್ಯಕ್ತಿ.

ಅವತ್ತೂ ಹಾಗೇ: ಸತ್ಯವತಿ ಸಂಗೀತ ಅಷ್ಟೊಂದು ಭೇಷಕ್ಕಾಗಿತ್ತು. ಕನ್ನಡ ನೆಲದ ಮತ್ತೊಬ್ಬ ಹಾಡುಹಕ್ಕಿ ಎಂ. ಎಸ್. ಶೀಲಾ ಆಯೋಜಿಸಿದ್ದ ಕಾರ್ಯಕ್ರಮ ಅದು. ವರ್ಣದಿಂದ ಹಿಡಿದು ತಿಲ್ಲಾನದವರೆಗೆ ದೇವಿಕೃತಿಗಳನ್ನೇ ಹಾಡಬೇಕೆಂದು ಗೆಳತಿಗೆ ಆಕೆ ಹೇಳಿದ್ದರಂತೆ. ಈ ಕೋರಿಕೆಯನ್ನು ಸತ್ಯವತಿ ಪ್ರಬುದ್ಧವಾಗಿ ನೆರವೇರಿಸಿದರು. ಕೃತಿಗಳ ಆಯ್ಕೆಯಲ್ಲಿ ರಸಿಕತೆ ಎದ್ದುಕಾಣುತ್ತಿತ್ತು. ಮುತ್ತಯ್ಯ ಭಾಗವತರು, ದೀಕ್ಷಿತರು, ಶ್ಯಾಮಾ ಶಾಸ್ತ್ರಿಗಳು, ಸದಾಶಿವ



ರಾಯರನ್ನು ಸತ್ಯವತಿ ತಮ್ಮ ಸಮರ್ಥ ಗಾನಪ್ರತಿಭೆಯಿಂದ ಮತ್ತೊಮ್ಮೆ ವೇದಿಕೆಯ ಮೇಲೆ ಕಾಣಿಸಿಟ್ಟರು.

ಅವತ್ತಿನ ಸತ್ಯವತಿಯ ಹಾಡು ನಿಜವಾಗಿ ಒಂದು ನಾದ ಪೂಜೆ. ಪೂಜೆಯ ವೈಖರಿ ನಮ್ಮೆಲ್ಲರ ಸಂತೋಷ. ಅದೆಷ್ಟು ಆರ್ದ್ರವಾಗಿ ಕರೆದುಬಿಟ್ಟರಪ್ಪ ಜಗನ್ಮಾತೆಯನ್ನು! ಆ ಗಾನವಿಲಾಸಗಳಿಗೆ, ಭಕ್ತಿಯ ಆರ್ತತೆಗೆ, ರಾಗದ ಅಲಂಕಾರಗಳಿಗೆ, ''ವೇಗಮೆ ಬೋವು'' ಎಂಬ ಗಟ್ಟಿಗತನಕ್ಕೆ ಒಂದೊಮ್ಮೆ ದೇವಿ ಮರುಳಾಗಿ ತನ್ನ ದಿವ್ಯ ದುಕೂಲಗಳನ್ನೂ ರತ್ನಕಂಚುಕವನ್ನೂ ಅರ್ತಿಯಿಂದ ಹೊಳೆಯಿಸುತ್ತ ಸುಹಾಸಳಾಗಿ ಅಲ್ಲೆಲ್ಲಾದರೂ ಸುಳಿದು ಬಿಟ್ಟಳೋ ಅನ್ನುವ ಭ್ರಮೆ ಬಂತು ನನಗೆ. ಸತ್ಯವತಿ ಮಾತಾಡಿಸಿದ್ದು, ಮೃದು ಮಧುರ ತರಂಗಗಳನ್ನು ತೇಲಿಬಿಟ್ಟದ್ದು ವಸಂತ, ಸಿಂಧು ಕನ್ನಡ, ಕಲ್ಯಾಣಿ, ಲಲಿತ, ಸುರುಟಿ ರಾಗಗಳಲ್ಲಿ. ಒಂದೊಂದರಲ್ಲೂ ಗಾಯಕಿಯದು ವಿಶಿಷ್ಟಭಾವ, ವಿಶಿಷ್ಟ ಅನುಭವ. ಆ ಪರವಶತೆ, ಹೃದಯದ ಹಿಗ್ಗು ಆಕೆಯ ಮುಖದ ಮೇಲೆ ನಿಚ್ಚಳವಾಗಿ ತೋರುತ್ತಿದ್ದವು. ಅವು ಸಭಿಕರ ಮುಖಗಳ ಮೇಲೂ ಅಲ್ಲಿಂದಲ್ಲೇ ಪ್ರತಿಫಲಿತವಾಗುತ್ತಿದ್ದವು.

ನಮ್ಮ ವಾಗ್ಗೇಯಕಾರರು ಅದೆಷ್ಟು ಸಹೃದಯರು! ದೇವಿಯ ಬಗ್ಗೆ ತುಂಬ ಒಳ್ಳೆಯ ಪರಿಕಲ್ಪನೆಗಳು ಅವರಿಗೆ. ಯಾಕೆಂದರೆ ಅವರೆಲ್ಲರ ಅಮ್ಮ ತಂಗಿ ಮಗಳು ಮಡದಿ ಹೆಣ್ಣೇ ತಾನೇ? ಹೆಣ್ತನದ ಮುಗ್ಧ ಲಾವಣ್ಯ ಭಾವಗಳನ್ನು, ಮೂರು ಲೋಕಗಳನ್ನೂ ಬೆಳಗಿಸಿಬಿಡಬಲ್ಲ ಕಣ್ಗಳ ಪ್ರಶಾಂತ ಭಾವವನ್ನು, ಆ ಧೀರತ್ವವನ್ನು ಹತ್ತಿರದಿಂದ ನೋಡಿದ್ದಾರೆ. ಸಹಜವಾಗೇ ಅದನ್ನವರು ಅಕ್ಕರೆಯಿಂದ ತಮ್ಮ ಆರಾಧ್ಯ ದೇವತೆಗೆ ಆರೋಪಿಸಿಬಿಡುತ್ತಾರೆ. ''ಶುಭಂಕರಿ ಪರಾತ್ಪರಿ ಭಕ್ತವಶಂಕರಿ'' ''ಶಿವನಾಯಕಿ ನರದಾಯಕಿ'' ಎಂದು ಪ್ರೀತಿಯಿಂದ ಕರೆಯುತ್ತಾರೆ. ''ಶುಭಂಕರಿ ಪರಾತ್ಪರಿ ಭಕ್ತವಶಂಕರಿ'' ಅನ್ನುವುದು ಹೆಮ್ಮೆ! ಈ ಗಾನವಿನೋದಿನಿಯ 'ಕಟಾಕ್ಷ ವೀಕ್ಷಣಾಮೃತ ಪ್ರೋಕ್ಷಣ' ಅವರಿಗೆ ತ್ವರಿತವಾಗಿ ಬೇಕಂತೆ!

ಇದೆಂಥ ಮುಗ್ಧಭಕ್ತಿ! ದೈವದ ಬಗೆಗಿನ ನಿಷ್ಕಳಂಕ ನಂಬಿಕೆ! ಮನಸ್ಸು ಬೆರಗಾಗುತ್ತದೆ. ಎಲ್ಲೋ ದೂರದಲ್ಲಿ ಒಂದಿಷ್ಟು ಅಸೂಯೆ ಕೂಡ!

ಮಾತಾಗಲಿ, ಹಾಡಾಗಲಿ ಸತ್ಯವತಿಯವರದು ಸಂತೋಷಗೊಳಿಸುವಂಥ ಸ್ಫುಟವಾದ ಉಚ್ಚಾರಣೆ. ಮಾಧುರ್ಯದೊಂದಿಗೆ ಖಾಚಿತ್ಯವೂ ಅಲ್ಲಿದೆ. ಮಾಡಿದ ಸಾಧನೆ ಕಂಠದಲ್ಲಿ ತಿದ್ದಿತೋರುವ ಹದ ಇದೆ. ಅವರ ಗಾಯನಕ್ಕಂತೂ ಅವರೊಳಗಿನ ಸಂಸ್ಕೃತ ಮೇಷ್ಟ್ರು ಸಹಾಯ ಮಾಡುತ್ತಲೇ ಇರುತ್ತಾರೆ.

ವಿದ್ವಾನ್ ಆರ್. ಕೆ. ಶ್ರೀಕಂಠನ್ ಅವರ ಸಾರ್ಥಕ ಶಿಷ್ಯೆ ಈಕೆ. ಗುರುವಿನ ಶಿಸ್ತು ಶ್ರದ್ಧೆ ದರ್ಪಗಳನ್ನು ವಿನಯವಾಗಿ ಸಾಧಿಸಿಕೊಂಡಿದ್ದಾರೆ. ಗಮನಿಸಿ ನೋಡಿ : ಶಿಷ್ಯೆಯ ಧ್ವನಿಯಲ್ಲಿ ಆರ್. ಕೆ. ಎಸ್. ಮತ್ತೆ ಮತ್ತೆ ಉಸ್ತುವಾರಿ ನಡೆಸುತ್ತಾರೆ!

ಸತ್ಯವತಿ ಸಂಗೀತದಲ್ಲಿ ಒಂದು ವೈಶಿಷ್ಟ್ಯ ಇದೆ. ಪ್ರತಿಯೊಬ್ಬರಿಗೂ ಈಕೆ ನಮಗಾಗಿಯೇ ಹಾಡುತ್ತಿದ್ದಾರೆ ಅನ್ನುವ ಅನನ್ಯಭಾವ ಉಂಟಾಗುತ್ತದೆ. ಈ ಭಾವ ಸ್ಫುರಣದ ಕಾರಣ ಗಾಯಕಿಯ ತಾದಾತ್ಮ್ಯ. ಕಲಾವಿದರು ಮೊದಲು ತಮಗಾಗಿ ಹಾಡಿಕೊಳ್ಳಬೇಕು. ಆ ಸವಿ, ಆ ಮಿಡಿತ, ಆ ಲಹರಿಗಳನ್ನು ತಮಗಾಗಿ ಅನುಭವಿಸಬೇಕು. ಆಗ ಸಹಜವಾಗಿ ಅದು ಇನ್ನೊಬ್ಬರದೂ ಆಗುತ್ತದೆ. ಇದೇನೇ ಕಲಾವಿದ-ರಸಿಕರ ನಡುವಿನ ಯಶಸ್ವಿ ಸಾಮರಸ್ಯ.

ಸತ್ಯವತಿಯವರ ಆಕಾರ ಸಾಧನೆ ತುಂಬ

೪೩ ನೇ ಪುಟಕ್ಕೆ



ಡಾ|| ರುದ್ರಯ್ಯ ವಿ. ಗದಗ

# ಸರ್ವರೋಗ ನಿವಾರಕ ದಿವ್ಯೌಷಧ

ಶನಿವಾರ ಗದಗ ನಗರದ ಸಂತೆ. ಅಂದು ತರಕಾರಿ ಮಾರ್ಕೆಟ್ ಸಂತೆಗೆ ಬಂದ ಊರ, ಪರಊರ ಜನರಿಂದ ಗಿಜಿಗುಟ್ಟಿರುತ್ತದೆ. ಗದಗ ಸುತ್ತಮುತ್ತ ಇರುವ ಹತ್ತಾರು ಹಳ್ಳಿಜನರು ತಮ್ಮ ತೋಟದಲ್ಲಿ ಬೆಳೆದ ತರತರದ ತರಕಾರಿ, ಹಣ್ಣು-ಹಂಪಲ, ಸೊಪ್ಪುಗಳನ್ನು ಬೆಳಗಾಗುತ್ತಲೇ ಮಾರ್ಕೆಟಿಗೆ ತರುತ್ತಾರೆ. ಅಂದು ಸಿಗುವ ಎಲ್ಲಾ ಕಾಯಿಪಲ್ಯೆಗಳು ತುಂಬಾ ತಾಜಾ ಇರುವುದಷ್ಟೇ ಅಲ್ಲ, ಬೆಲೆ ಕೂಡಾ ಕಮ್ಮಿ ಇರುವುದು ಸಂತೆ ದಿನದ ವಿಶೇಷ. ಅದಕ್ಕೆ ನಾನು ಪ್ರತಿ ಶನಿವಾರ ತಪ್ಪದೇ ಸಂತೆಗೆ ಹೋಗಿ ಒಂದು ವಾರಕ್ಕಾಗುವಷ್ಟು ತರಕಾರಿ, ಹಣ್ಣು ತರುವುದನ್ನು ರೂಢಿಸಿಕೊಂಡಿದ್ದೇನೆ.

ಅದು ಮೇ ತಿಂಗಳ ಸಮಯ. ಬೆಳಗಾದರೆ ಸಾಕು ಉರಿ ಬಿಸಿಲು. ಮಹಾ ಧಗೆ. ಮೈ ಒದ್ದೆಯಾಗುವಷ್ಟು ಬಸಿಯುತ್ತಿರುವ ಬೆವರು. ಹೊರಗೆ ಓಡಾಡಲು ಮನಸ್ಸು ಒಪ್ಪುತ್ತಿಲ್ಲ. ಆದರೆ ಅಂದು ಶನಿವಾರ. ಸಂತೆಗೆ ಹೋಗದೆ ವಿಧಿಯಿಲ್ಲ. ನಾನು ಹತ್ತುಗಂಟೆ ಸಿಟಿ ಬಸ್ಸಿನಲ್ಲಿ ಮಾರ್ಕೆಟಿಗೆ ಹೋದೆ.

ನಾನು ಮೊದಲಿಗೆ ಪೇಟೆ ಬೀದೀನೆಲ್ಲಾ ಒಮ್ಮೆ ಸುತ್ತಾಡಿ, ಎಲ್ಲೆಲ್ಲಿ ಯಾವ ಯಾವ ಒಳ್ಳೇ ತರಕಾರಿ ಅಗ್ಗದಲ್ಲಿ ಸಿಗುವದೆಂಬುದನ್ನು ಅಂದಾಜಿಸಿದೆ. ಆಮೇಲೆ ನನಗಿಷ್ಟವಾದ ಕಾಯಿಪಲ್ಯೆ, ಹಣ್ಣು ಕೊಂಡುಕೊಂಡೆ. ಬಳಿಕ ಮನೆಗೆ ವಾಪಸ್ ಹೋಗಲು ಸಿಟಿ ಬಸ್ಸು ನಿಲ್ದಾಣಕ್ಕೆ ಹೋದೆ.

ರಸ್ತೆಗಂಟಿಕೊಂಡಿರುವ ಬೇವಿನ ಕಟ್ಟೆಯೇ ಸಿಟಿ ಬಸ್ಸಿಗೆ ಕಾಯುವ ಪ್ರಯಾಣಿಕರಿಗೆ ತಾಣ. ನಾನು ಕಟ್ಟೆ ಮೇಲೆ ತರಕಾರಿಚೀಲ ಮಡಗಿ, ವಿಶಾಲವಾದ ಬೇವಿನಮರದ ತಂಪು ನೆರಳಲ್ಲಿ, ಗಾಳಿಗೆ ಮೈಯೊಡ್ಡಿ ಹಾಯಾಗಿ ಕುಳಿತೆ. ಹಾಗೆ ನನ್ನ ದೃಷ್ಟಿ ಸುತ್ತ-ಮುತ್ತ ಹರಿದಾಡಿತು. ಆಗ ಕಣ್ಣಿಗೆ ಬಿದ್ದದ್ದು ಯಾವುದೋ ವಸ್ತುವಿನ ಮಾರಾಟದಲ್ಲಿ ಕಳೆದುಹೋಗಿದ್ದ ಮುದುಕನ ಅಪರೂಪ ದೃಶ್ಯ. ಅದು ನನ್ನ ಲಕ್ಷ್ಯವನ್ನು ಸೆರೆಹಿಡಿದಿತ್ತು. ನನ್ನ ಕಣ್ಣುಗಳು ಆ ದೃಶ್ಯದಿಂದ ಕೀಳಲು ನಿರಾಕರಿಸಿದ್ದವು. ನಾನು ಸ್ವಲ್ಪ ಕುತ್ತಿಗೆ ಹೊರಳಿಸಿ ಮುದುಕನ ಕಾರ್ಯವೈಖರಿಯನ್ನು ಆಸಕ್ತಿಯಿಂದ ವೀಕ್ಷಿಸತೊಡಗಿದೆ.

ಮಟಮಟ ಮಧ್ಯಾಹ್ನದ ಹೊತ್ತು. ಆ ಮುದುಕ ರಸ್ತೆ ಪಕ್ಕ ಬೇವಿನ ಮರದ ತಂಪಾದ ನೆರಳಲ್ಲಿ ಕುಳಿತಿದ್ದ. ತನ್ನೆದುರು ಒಂದು ಹಳೆ ಚಾಪಿ ಹಾಸಿ, ಅದರ ಮೇಲೆ ಒಂದು ರಾಶಿ ಖಾಲಿ ಬಾಟಲಿಗಳನ್ನು ಹರವಿದ್ದ. ಆತನ ಎಡಪಕ್ಕದಲ್ಲಿ ಐದು ಲೀಟರಿನ ಎರಡು ಗಾಜಿನ ಬಾಟಲಿಗಳು, ಬಲಪಕ್ಕದಲ್ಲಿ ಒಂದು ಗಾಜಿನ ತೊಟ್ಟಿ ಇದ್ದವು. ಒಂದು ಬಾಟಲಿನಲ್ಲಿ ಹಳದಿಬಣ್ಣದ ತೆಳ್ಳಗಿನ ತೈಲವಿದ್ದರೆ, ಮತ್ತೊಂದರಲ್ಲಿ ಅದೇ ಬಣ್ಣದ ಗಟ್ಟಿ ತೈಲವಿತ್ತು. ಗಾಜಿನ ತೊಟ್ಟಿಯ ಅರ್ಧಭಾಗ ಬೇರೊಂದು ತೈಲ ತುಂಬಿತ್ತು. ಯಾವುದೋ ಸತ್ತ ಪ್ರಾಣಿಯೊಂದು ಆ ತೈಲದಲ್ಲಿ ತೇಲಾಡುತ್ತಿತ್ತು.

ಅಚ್ಚರಿ ಮೂಡಿಸುವ ಸಂಗತಿ ಎಂದರೆ ರಾಶಿ ಜನ ಮುದುಕನಿಗೆ ಮುಗಿಬಿದ್ದಿದ್ದರು. ಅವರಲ್ಲಿ ಹೆಚ್ಚಿನವರು ಸಂತೆಗೆ ಬಂದ ಹಳ್ಳಿ ಜನರು. ಅವರೆಲ್ಲಾ ಕಣ್ಣು, ಬಾಯಿ ಊರಗಲ ತೆರೆದಿಟ್ಟು ಮುದುಕನ ಮಾತುಗಳನ್ನು ಕೇಳುತ್ತ ಮೋಡಿಗೊಳಗಾದವರಂತೆ ನಿಂತಿದ್ದರು.

''ನೆರೆದಿರುವ ಮಹಾ ಜನರಲ್ಲಿ ನನ್ನದೊಂದು ವಿಜ್ಞಾಪನೆ. ಯಾರೂ ಮಧ್ಯೆ ಬಾಯಿಹಾಕದೆ ನಾನು ಹೇಳುವುದನ್ನು ಕೊಂಚ ಗಮನವಿಟ್ಟು ಆಲಿಸಬೇಕು. ಈ ಗಾಜಿನ ಬಾಟಲಿನಲ್ಲಿ ಇರುವುದು ನೀವು ಎಣಿಸಿದಂತೆ ಅದೇನು ಸಾಮಾನ್ಯ ತೈಲವಲ್ಲ, ದೇಹದ ಸಕಲ ಅಂಗಾಂಗ ಸಮಸ್ಯೆಗಳಿಗೆ ಶೀಘ್ರ ಸಮಾಧಾನ ನೀಡುವ ದಿವ್ಯೌಷಧ. ಕಾಡಿನಿಂದ ಹೆಕ್ಕಿ ತಂದ ಕೆಲವೊಂದು ವನಸ್ಪತಿ ಹಾಗೂ ಉಡದ ನೆಣದಿಂದ ನನ್ನ ಕೈಯಾರೆ ತಯಾರಿಸಿದ ಅದ್ಭುತ ತೈಲ. ತಲತಲಾಂತರದಿಂದ ಈ ತೈಲ ತಯಾರಿಸುವುದು ನಮ್ಮ ವಂಶದವರ ಕುಲ ಕಸುಬು. ನಾನು ಕೈಹಾಕಿದ ಈ ತೈಲದ ದಂಧೆ ಇವತ್ತಿನವರೆಗೂ ಸೋಲನ್ನು ಅನುಭವಿಸಿಲ್ಲ.'' ಮುದುಕ ತನ್ನ ಕಂಚಿನ ಕಂಠದ ಸಿರುದನಿಯಲ್ಲಿ, ಸ್ಫುಟವಾಗಿ, ಜನರ ಮನತಟ್ಟುವಂತೆ, ಪಟಪಟನೆ ಅರಳು ಸಿಡಿದಂತೆ ಔಷಧದ ಗುಣಗಾನ ಬಾಯ್ತುಂಬ ಮಾಡುತ್ತಿದ್ದ. ತನ್ನ ಮಾಂತ್ರಿಕ ಮಾತುಗಳಿಂದ ಜನರಿಗೆ ಮಂಕುಬೂದಿ ಎರಚುವಲ್ಲಿ ಯಶಸ್ವಿಯಾಗಿದ್ದ.

''ಯಾವ ನೋವಿಗೆ ಈ ತೈಲವನ್ನು ಉಪಯೋಗಿಸಬಹುದು ?'' ಗುಂಪಿನಲ್ಲಿದ್ದ ವ್ಯಕ್ತಿಯೊಬ್ಬ ಪ್ರಶ್ನೆ ಒಗೆದ.

''ಯಾವ ನೋವೆಂದು ಹೇಳಲಿ ತಮ್ಮಾ? ಕೀಲುನೋವು, ಕುತ್ತಿಗೆನೋವು, ಬೆನ್ನುನೋವು, ಮೊಣಕೈ-ಮೊಣಕಾಲು ನೋವು, ಸೊಂಟನೋವು, ತಲೆಸಿಡಿತ, ನರಸಿಡಿತ, ಅಂಗಾಲಿನ ಉರಿ ಹೀಗೆ ಹತ್ತು ಹಲವಾರು ಅಂಗಾಂಗಗಳ ನೋವಿನ ತೊಂದರೆಗಳನ್ನು ಒಂದು ವಾರದಲ್ಲಿ ಗುಣಪಡಿಸುವ 'ಜೀವ ಸಂಜೀವಿನಿ'. ನೀವು ಈ ತೈಲ ಕೊಳ್ಳಲು ಹಿಂದು-ಮುಂದು ಯೋಚಿಸಬೇಕಾಗಿಲ್ಲ, ಭಯ, ಆತಂಕಪಡಬೇಕಾಗಿಲ್ಲ. ನಿಶ್ಚಿಂತೆಯಿಂದ ಈ ತೈಲವನ್ನು ಉಪಯೋಗಿಸಬಹುದು. ಈ ತೈಲದಿಂದ ಯಾವುದೇ ಅಡ್ಡ ಪರಿಣಾಮಗಳಿಲ್ಲದಿರುವುದು ಅದರ ವಿಶೇಷ ಗುಣ.'' ಮುದುಕ ಜನರನ್ನು ಆಟ್ಟಕ್ಕೇರಿಸಿದ.

''ಈ ತೈಲನ್ ಹ್ಯಾಂಗ ಉಪಯೋಗಿಸಬೇಕು ಎಂಬುದನ್ನು ಒಂಚೂರು ಬಿಡಿಸಿ ಹೇಳ್ತೀರಾ ?'' ಮತ್ತೊಬ್ಬ ವ್ಯಕ್ತಿ ವಿವರಣೆ ಕೇಳಿದ.

''ಅದೇನು ಭಾಳ ಸುಲಭದ ಕೆಲಸ ಬಿಡಿ. ಎಲ್ಲೆಲ್ಲಿ ನೋವಿದೆಯೋ ಅಲ್ಲೆಲ್ಲಾ ತೈಲ ಸವರಿ, ಚೆನ್ನಾಗಿ ಉಜ್ಜಿ, ಅರ್ಧ ಗಂಟೆ ಹಾಗೇ ಬಿಡಬೇಕು. ಬಳಿಕ ಅದರ ಮೇಲೆ ಒಂದು ಕೊಡಪಾನ ಸುಡು ನೀರು ಹೊಯ್‌ಕೋಬೇಕು. ಹೀಗೆ ಮುಂಜಾನೆ ಹಾಗೂ ಸಂಜೆ ಎರಡು ಹೊತ್ತು, ಸತತ ಒಂದು ವಾರ ಉಪಚಾರ ಮಾಡಿದರೆ ಮುಗಿಯಿತು, ಎಂಥ ನೋವಿದ್ದರೂ ಮಾಯವಾಗುತ್ತೆ. ಮತ್ತೆಂದೂ ಅದರ ಬಗ್ಗೆ ತಲೆ ಕೆಡಿಸಿಕೊಳ್ಳುವ ಪ್ರಮೇಯ ಬರುವುದಿಲ್ಲ.'' ಮುದುಕ ತೈಲ ಉಪಯೋಗಿಸುವ ಕ್ರಮ ವಿವರಿಸಿ, ಜನರಲ್ಲಿ ಭರವಸೆ ತುಂಬಿದ, ಜನರು ಉಬ್ಬಿದ ಬಲೂನಿನಂತಾದರು.

ಸ್ವಲ್ಪ ಸಮಯದ ನಂತರ ಮಾತು ಮುಂದುವರೆಸಿದ : ''ಹತ್ತು ದಿನಗಳಲ್ಲಿ ನಿಮ್ಮ ಸಮಸ್ಯೆಗೆ ಪರಿಹಾರ ಸಿಗದಿದ್ದರೆ, ನೀವು ಕೊಟ್ಟ ರೊಕ್ಕ ವಾಪಸ್ ಮಾಡ್ತೀನಿ. ಅಂಥ ಪ್ರಸಂಗ ಬರುವ ಸಂಭವ ಇಲ್ಲ ಅಂತಾ ನಾನು ನಿಮಗೆ ನಕ್ಕಿ ಗ್ಯಾರಂಟಿ ಕೊಡ್ತೀನಿ.

''ಇನ್ನೊಂದು ವಿಚಾರ. ಒಂದು ವೇಳೆ ನೀವು ನೋವಿನ ಸಮಸ್ಯೆಗೆ ತಜ್ಞ ವೈದ್ಯರಲ್ಲಿಗೆ ಹೋದರೆ ನೀವೇ ಲೆಕ್ಕಹಾಕಿ ನೋಡ್ರಿ. ಅದೆಷ್ಟು ದುಡ್ಡು ಸುರಿಬೇಕು. ದುಡ್ಡುಹೋದರೂ ನಿಮಗೆ ಸಿಗುವ ಪರಿಹಾರ ಅಷ್ಟರಲ್ಲೇ ಇದೆ.

''ನೀವು ನನ್ನ ತೈಲ ಒಂದು ಸಲ ಉಪಯೋಗಿಸಿ ನೋಡ್ರಿ. ಆವಾಗ ನಿಮಗೇ ಗೊತ್ತಾಗುತ್ತೆ ತೈಲದ ಅಗಾಧ ಶಕ್ತಿ.'' ತನ್ನ ಅಸಾಧಾರಣ ವಾಕ್‌ಚಾತುರ್ಯದಿಂದ ಜನರನ್ನು ಮರಳುಮಾಡಿ, ಅವರ ಮನದಲ್ಲಿ ತೈಲದ ಬಗ್ಗೆ ಒಳ್ಳೆ ಭಾವನೆ ಮೂಡಿಸಿ, ಅದನ್ನು ಕೊಳ್ಳುವ ಆಶೆ ಬಿತ್ತಿ ಬೆಳೆಸಿದ.

''ಅಂದಾಗ ಈ ತೈಲದ ಬೆಲೆ ಎಷ್ಟು?'' ಕೊಂಡುಕೊಳ್ಳಲು ತುದಿಗಾಲ ಮೇಲೆ ನಿಂತಾತನೊಬ್ಬ ವಿಚಾರಿಸಿದ.

''ಅದನ್ನು ಕೇಳಿದರೆ ಎಷ್ಟೊಂದು ಸೋವಿ ಅಂತೀರಾ. ಸಣ್ಣ ಬಾಟಲಿಗೆ ಹತ್ತು ರೂಪಾಯಿ, ದೊಡ್ಡದಕ್ಕೆ ಇಪ್ಪತ್ತು ರೂಪಾಯಿ ಮಾತ್ರ. ಹ್ಞಾಂ ಇದರಲ್ಲಿ ಒಂದು ವಿಶೇಷ ಕೊಡುಗೆ ಇದೆ. ಎರಡು ದೊಡ್ಡ ಬಾಟಲಿ ತೈಲ ಖರೀದಿಸಿದವರಿಗೆ ಒಂದು ಸಣ್ಣ ಬಾಟಲಿ ಉಚಿತ. ಕಡೆಮಾತು. ನನ್ನ ಬಿಟ್ರೆ... ಈ ತೈಲ ಬೇರೆಲ್ಲೂ ಸಿಗೂದಿಲ್ಲ.'' ಗಾಳಿಯಲ್ಲಿ ಒಂದು ಭಯದ ಪಟಾಕಿ ಸಿಡಿಸಿದ.

ಕೂಡಲೇ ಜನರು ತೈಲ ಕೊಂಡುಕೊಳ್ಳುವಲ್ಲಿ ವಿಶೇಷ ಉತ್ಸುಕತೆ ತೋರಿಸಿದರು. ಕೆಲವರಂತೂ ನಿಂತ ಸ್ಥಳದಲ್ಲೇ ಮುದುಕನಿಗೆ ಕೈಕಾಲು ಒಪ್ಪಿಸಿ, ಉಚಿತವಾಗಿ ತೈಲದ ಉಪಚಾರ ಮಾಡಿಸಿಕೊಂಡ ಬಳಿಕ, ಒಂದು ಬಾಟಲಿ ಕೊಂಡೊಯ್ದರು. ಊರಿನ ಬಸ್ಸು ಹಿಡಿಯುವ ಆತುರದಲ್ಲಿದ್ದವರು ಒಂದೊಂದು ದೊಡ್ಡ ಬಾಟಲಿ ಒಯ್ದರು. ಹೀಗೆ ಸಂತೆ ಮುಗಿಸಿ ಮನೆಗೆ ವಾಪಸ್ ಹೋಗುತ್ತಿರುವವರು, ಕೈಯಲ್ಲಿ ಒಂದು ಬಾಟಲಿ ಹಿಡಿದುಕೊಂಡು ಹೋಗುವ ದೃಶ್ಯ ನನ್ನ ಕಣ್ಣ ಮುಂದೆ ಇನ್ನೂ ಕಟ್ಟಿದಂತಿದೆ.

ಹಳೆ ಮಂದಿ ಸರಿದುಹೋಗಿ ಹೊಸ ಮಂದಿ ಬಂದುನಿಂತಾಗ ಮುದುಕ ಮೊದಲು ಹೇಳಿದ್ದ ಪಾಠವನ್ನೇ ಪುನರುಚ್ಚರಿಸುತ್ತಿದ್ದ. ತೈಲ ಕೊಳ್ಳುವವರ ಸಂಖ್ಯೆ ಏರುತ್ತಾ ಹೋಯ್ತು. ಹೀಗಿರುವಾಗ ಏಕಾಏಕಿ ಅಲ್ಲೊಂದು ಕುತೂಹಲಕಾರಿ ಘಟನೆ ನಡೆದು, ತೈಲ ವ್ಯಾಪಾರ ಹೊಸ ತಿರುವು ಪಡೆಯಿತು.

ನಾಗಾವಿ ತಾಂಡಾದ ಲಮಾಣಿ ಹೆಂಗಸೊಬ್ಬಳು ತನ್ನ ಮಗಳೊಂದಿಗೆ ಬೇವಿನ ಕಟ್ಟಿ ಬಳಿ ಬಸ್ಸಿನಿಂದ ಇಳಿದಳು. ಮೊದಲ ನೋಟದಲ್ಲೇ ಅವಳೊಬ್ಬಳು ಸುಂದರಿ ಹೆಂಗಸು ಎನ್ನುವುದರಲ್ಲಿ ಎರಡು ಮಾತಿಲ್ಲ. ಲಮಾಣಿ ಸಾಂಪ್ರದಾಯಿಕ ಬಣ್ಣಬಣ್ಣದ ನಿರಿಗೆಗಳ ಲಂಗ, ಕನ್ನಡಿ ಚೂರುಗಳಿಂದ ಚಿತ್ತಾರ ಬಿಡಿಸಿದ ತೆರೆದ ಬೆನ್ನಿನ ಕುಬುಸದಲ್ಲಿ ಮಿಂಚುತ್ತಿದ್ದಳು. ಎತ್ತರದ ನಿಲುವು, ನೀಳಕಾಯ, ದುಂಡುಮುಖ, ಮುಟ್ಟಿದರೆ ಮಾಸುವಂಥ ಬಣ್ಣ, ಆಕರ್ಷಕ ಮೈಕಟ್ಟಿನ ದಿಟ್ಟ ಹೆಂಗಸು. ವಯಸ್ಸು ಅಜಮಾಸು ಮೂವತ್ತರ ಅಂಚಿನಲ್ಲಿರಬಹುದು.

ಮುದುಕನಿಗೆ ಮುಗಿಬಿದ್ದ ಜನರ ಗುಂಪು ನೋಡಿ ಅವಳಲ್ಲಿ ಕುತೂಹಲ ಮೂಡಿತು. ಅವಳು ಗಾಜಿನ ತೊಟ್ಟಿ ಪಕ್ಕ ಕುಕ್ಕರಿಸಿ, ಅದರಲ್ಲಿ ತೇಲುತ್ತಿದ್ದ ಪ್ರಾಣಿಯನ್ನೇ ಎವೆಯಿಕ್ಕದೆ ನೋಡಿ, ಕಣ್ಣಿಗೂ, ಮನಸ್ಸಿಗೂ ಗಾಢವಾಗಿ ತುಂಬಿಕೊಂಡಳು.

''ಏ ಮುದುಕಾ, ಗಾಜಿನ ತೊಟ್ಟಿಯಲ್ಲಿ ತೇಲ್ತಾ ಇರುವ ಪ್ರಾಣಿ ಹೆಸರೇನಯ್ಯ ?'' ಗತ್ತಿನಿಂದ ಮುದುಕನಿಗೆ ಸವಾಲು ಎಸೆದಳು.

''ಯಾಕೆ ? ನಿಂಗೇನು ಕಣ್ಣುಕುರುಡೇ ? ಅದು ಕಾಡಿನಿಂದ ತಂದ ಉಡ. ಅದರ ನೆಣದಿಂದಲೇ ಈ ನೋವಿನ ತೈಲ ತಯಾರಿಸಿದ್ದು. ಹೋಗ್ಲಿ ಬಿಡು. ನಿನ್ನಂಥ ಮಂದಮತಿಗೇನು ಗೊತ್ತು ಉಡದ ಮಹತ್ವ.'' ಮುದುಕ ವ್ಯಂಗ್ಯವಾಗಿ ಕುಟುಕಿದ.

ಲಮಾಣಿ ಹೆಂಗಸು ಅವನ ಕೊಂಕು ನುಡಿಗೆ ಕೊರಗಲಿಲ್ಲ. ಆ ಪ್ರಾಣಿ ಯಾವುದೆಂದು ಅವಳಿಗೆ ಗೊತ್ತು. ಆದರೂ ಒಂದಷ್ಟು ಸಾಹಸ ಮಾಡಿ ಖಾತ್ರಿ ಮಾಡಿಕೊಳ್ಳುವ ಇಚ್ಛೆ. ಪಕ್ಕದಲ್ಲಿ ಬಿದ್ದಿದ್ದ ಪುಟ್ಟ ಕಡ್ಡಿ ಎತ್ತಿಕೊಂಡು, ಅದರ ಸಹಾಯದಿಂದ ಪ್ರಾಣಿ ಮೇಲೆತ್ತಿ ನೋಡಲು ಕೈ ಉದ್ದಕ್ಕೆ ಚಾಚಿ ಹವಣಿಸಿದಳು.

ಅದನ್ನು ನೋಡಿದ ಮುದುಕನಿಗೆ ಅಸಾಧ್ಯ ಕೋಪ ಬಂತು. ಮುಂದಕ್ಕೆ ಚಾಚಿದ್ದ ಅವಳ ಕೈಯನ್ನು ತಟ್ಟನೆ ಹಿಂದಕ್ಕೆ ತಳ್ಳಿದ.

''ಲೇ ಬಜಾರಿ, ಇನ್ನೊಂದು ಸರ್ತಿ ಹೀಗೆ ಮಾಡಿದರೆ ನಾನು ಸುಮ್ಮನಿರುವುದಿಲ್ಲ, ನಿನಗೊಂದು ಗತಿ ಕಾಣಿಸಿಯೇಬಿಡ್ತೀನಿ ಹುಷಾರ್ !'' ಮುದುಕ ಗರಂ ಆಗಿ ಅಬ್ಬರಿಸಿದ. ಅವಳನ್ನು ಬೆದರಿಸಿ ದೂರ ಸಾಗಹಾಕಲು ಸಾಹಸ ಮಾಡಿದ. ಅದು ಅವಳ ಮೇಲೆ ಪುಡಿಗಾಸಿನ ಪ್ರಭಾವ ಬೀರದೇ ಹೋದದ್ದು ಮುದುಕನ ಕರ್ಮ.

ಲಮಾಣಿ ಹೆಂಗಸಿಗೆ ಹೇಗಾದರೂ ಸೈ ಪ್ರಾಣಿಯ ಪರೀಕ್ಷೆ ಮಾಡೇ ತೀರಬೇಕೆಂಬ ಹಠ. ಭಂಡ ಧೈರ್ಯ ಮಾಡಿ, ಮಿಂಚಿನ ವೇಗದಲ್ಲಿ ಕೈಚಾಚಿ, ಪ್ರಾಣಿ ಮೇಲೆತ್ತಿ ನೋಡೇ ಬಿಟ್ಟಳು. ಅದೇನೆಂದು ಅವಳಿಗೆ ಅರ್ಥವಾಯ್ತು. ಅದನ್ನು ನೋಡಿ ಮುದುಕನ ತಾಳ್ಮೆ ಮೀರಿತು. ಅವಳನ್ನು ಉದ್ದಕ್ಕೆ ಸೀಳಿಹಾಕುವಷ್ಟು ಸಿಟ್ಟು ಬಂತು. ತಲೆ ಗಟ್ಟಿಸಿಕೊಂಡ. ಸಟ್ಟನೆ ಅವಳ ಕೈಗೊಂದು ಬಲವಾದ ಪೆಟ್ಟುಹಾಕಿದ. ರಭಸದಿಂದ ಹಿಂದಕ್ಕೆ ದಬ್ಬಿದ.

''ಲೇ ಗಯ್ಯಾಳಿ, ಇಷ್ಟೊತ್ತು ನಾನು ಹೇಳಿದ್ದು ನಿನ್ನ ಕಿವಿಗೆ ಬೀಳಲಿಲ್ವಾ ? ಬೆಂಬಿಡದ ಬೇತಾಳನಂತೆ ನೀನು ಯಾಕೆ ನನ್ನ ಬೆನ್ನು ಹತ್ತಿರುವಿ ? ವಿನಾಕಾರಣ ತರ್ಲೆಮಾಡಿ ನನ್ನ ದಂಧೆಗೆ ತೊಡರುಗಾಲು ಹಾಕಲು ನಿನಗೇನು ಬಂದಿದೆ ಕೇಡು ? ಪದೇ ಪದೇ ಹೀಂಗೆಲ್ಲಾ ತೊಂದರೆ ಕೋಡೋದು ನನಗೆ ಇಷ್ಟ ಆಗೂದಿಲ್ಲ. ಸುಮ್ಮನೆ ತಲಿ ಬಿಸಿ ಮಾಡಬ್ಯಾಡ. ಬೇಕೆಂದರೆ ಕೇಳು. ಒಂದು ಬಿಟ್ಟು ಎರಡು ದೊಡ್ಡ ಬಾಟಲಿ ತೈಲ ನಿನಗೆ ಪುಕಸಾಟೆ ಕೊಟ್ಟುಬಿಡ್ತೀನಿ. ಅದನ್ನು ತಗೊಂಡು ಗಪ್ಪಚುಪ್ಪಾಗಿ ಜಾಗ ಖಾಲಿ ಮಾಡಬೇಕು ಅಷ್ಟೆ.'' ಅವಳಿಗೆ ಲಂಚದ ಆಮಿಷ ಒಡ್ಡಿ, ಒಂದಷ್ಟು ಹೊಂದಾಣಿಕೆ ಮಾಡಿಕೊಂಡು, ಅವಳನ್ನು ದೂರ ಅಟ್ಟಲು ಪ್ರಯಾಸಪಟ್ಟ.

''ಥೂ ! ದರಿದ್ರಗೆಟ್ಟವನೆ. ನಾನು ಕಂಡೀನಿ ಸಾಕಷ್ಟು ಉಡ. ನೀನು ಮಾಡೋದೆಲ್ಲಾ ಬರೀ ನಾಟ್ಕ. ನನ್ನಲ್ಲಿ ನಿನ್ನ ಬೇಳೆ ಬೇಯೂದಿಲ್ಲ. ಈಗ ನೋಡು ಎಲ್ಲರೆದುರು ನಿನ್ನ ಬಣ್ಣ ಹ್ಯಾಂಗ ಬಯಲು ಮಾಡ್ತೀನಿ. ಅದನ್ನು ಎದುರಿಸಲು ನಿನ್ನ ಎದೆಯನ್ನು ಗಟ್ಟಿಯಾಗಿ ಹಿಡಿದಿಟ್ಟಿಕೋ'' ಎಂದು ಲಮಾಣಿ ಹೆಂಗಸು ಫೂತ್ಕರಿಸಿದಳು. ಕೆಲಕಾಲ ಮೌನ ಆವರಿಸಿತು.

ಸ್ವಲ್ಪ ಸಮಯದ ನಂತರ ಮುಂದುವರೆಸಿದಳು : ''ಗಾಜಿನ ತೊಟ್ಟಿಯಲ್ಲಿರುವುದು ನಿಜಕ್ಕೂ ಸತ್ತ ಓತಿಕಾಟ ! ನೀನು ಮಾರುತ್ತಿರುವ ದಿವ್ಯೌಷಧ ಅದೊಂದು ಜುಜಬಿ ತೈಲ ! ಹೌದು. ಇದು ಸತ್ಯ ! ಈ ಮಾತನ್ನು ನಿನ್ನ ಧೋತ್ರದ ಚುಂಗಿನಲ್ಲಿ ಗಟ್ಟಿಯಾಗಿ ಗಂಟುಹಾಕಿಕೋ ಬಡ್ಡೀ ನನ್ ಮಗನೆ'' ಎಂದು ಗುಟುರುಹಾಕಿದಳು ಲಮಾಣಿ ಹೆಂಗಸು.

ಅವಳು ಜನರ ಮುಂದೆ ತೆರೆದಿಟ್ಟ ತೈಲರಹಸ್ಯ ಮುದುಕನಿಗೆ ನುಂಗಲಾರದ ತುತ್ತಾಯಿತು. ಕಕ್ಕಾಬಿಕ್ಕಿಯಾಗಿ ಮುಖ ಕಪ್ಪಿಟ್ಟಿತು. ರೆಕ್ಕೆ ಮುರಿದ ಹಕ್ಕಿಯಂತೆ ಒದ್ದಾಡಿದ. ಅಪರಾಧಿ ಪ್ರಜ್ಞೆ ತಲೆ ಎತ್ತಿದರೂ ಕೂಡಲೇ ಶಾಕ್‌ನಿಂದ ಚೇತರಿಸಿಕೊಂಡ.

''ಲೇ ಬಿನ್ನಾಣಗಿತ್ತಿ. ಅದೇನೇ ಇರಲಿ. ಅದನ್ನು ಕಟ್ಟಿಕೊಂಡು ನಿನಗೇನಾಗ ಬೇಕು ? ಅದನ್ನು ಕೇಳಾಕ ನೀನ್ಯಾವಳ್ಳೆ ? ಸಾವಿರ ಸಲ ಎಚ್ಚರಿಕೆ ಕೊಟ್ಟರೂ ಕೇರೇ ಮಾಡದ ಗಂಡುಬೀರಿ. ಒಳ್ಳೇ ಮಾತಿನಲ್ಲಿ ಹೇಳ್ತೀನಿ. ನೀನು ಈಗಿಂದೀಗಲೇ ಇಲ್ಲಿಂದ ಹೊರಟುಹೋಗು. ಇಲ್ಲಾಂದ್ರ ನಾನೇನು ಮಾಡ್ತೀನಿ ಅನ್ನೋದು ನನಗೇ ಗೊತ್ತಿಲ್ಲ'' ಎಂದು ಬುಸುಗುಟ್ಟಿದ. ಬೆದರಿಸಿ ಅವಳ ಬಾಯಿ ಮುಚ್ಚಿಸಲು ಪ್ರಯತ್ನಿಸಿದ. ಅದು ಪ್ರಯಾಸದಾಯಕವೆನಿಸಿದಾಗ ವಿಧಿಯಿಲ್ಲದೆ ಕದನವಿರಾಮ ಘೋಷಿಸಿದ.

ಲಮಾಣಿ ಹೆಂಗಸಿನ ಸಂಗಡ ಬಂದಿದ್ದ ಅವಳ ಮಗಳು ಅವರೀರ್ವರ ಮಾತಿನ ಚಕಮಕಿ ಆಲಿಸುತ್ತ ಇಲ್ಲೀತನಕ ಚಕಾರವೆತ್ತದೆ ನಿಂತಿದ್ದಳು. ಅವರೀರ್ವರ ತಿಕ್ಕಾಟ ಹೀಗೆ ಮುಂದುವರೆದರೆ ಇನ್ನೇನಾದರೂ ಘೋರ ಸಂಭವಿಸೀತೆಂದು ಅವಳಿಗೆ ಆತಂಕ ಮೂಡಿಸಿತು. ಅವರೀರ್ವರ ಮಧ್ಯೆ ಅವಳ ಪ್ರವೇಶ ಅನಿವಾರ್ಯ ಅನ್ನಿಸಿತು.

''ಏನ್ ಬೇ ಯವ್ವಾ. ನಿನಗೆ ದೆವ್ವ-ಗಿವ್ವ ಏನಾರ ಅಮರಿಕೊಂಡಿದೆ ಏನು ? ಅಲ್ಲ ಆ ಮುದುಕನ ಸಂಗಡ ನೀನ್ಯಾಕ ಕಾಲಕೆರೆದು, ಮೈಮೇಲೆ ಬಿದ್ದು ಜಗಳ ಹೊಡೆದಾಟಕ್ಕೆ ನಿಂತಿರುವಿ ? ಅವನು ತನ್ನ ಹೊಟ್ಟೆಪಾಡಿಗೆ ತೈಲದ ವ್ಯಾಪಾರವನ್ನು ಕಸುಬಾಗಿ ಮಾಡಿಕೊಂಡಿರುವನು. ಅವನ ಹೊಟ್ಟೆಮ್ಯಾಲೆ ನೀನು ಬರೆ ಹಾಕಾಕ ಹೊಂಟೀಯಲ್ಲ ಅದು ಒಪ್ಪತಕ್ಕ ಕೆಲಸ ಅಲ್ಲ ತಗಿ. ಅವನಿಗೂ, ನಮಗೂ ಯಾವುದೇ ಸಂಬಂಧವಿಲ್ಲ, ಸಾಟಿಯಿಲ್ಲ ಅವನ ಗೊಡವಿ ನಮಗ್ಯಾಕ ಬೇಕು ಹೇಳು ? ನಾವು ಬಂದ ಕೆಲ್ಸ ಬೇಗನೆ ಮುಗಿಸಿ, ಲಗೂನ ಮನೆ ಸೇರಿದರಾಯ್ತು. ಇಲ್ಲದ ರಗಳೆ ನಮಗ್ಯಾಕ ಬೇಕು ?'' ಎಂದು ತಾಯಿಗೆ ಬಿಡಿಸಿ ಹೇಳಿದಳು. ಮಗಳ ಆಗ್ರಹಕ್ಕೆ ಅವಳ ಹಠ ಸೋತಿತು. ಅಲ್ಲಿಗೆ ಗುಡುಗು ಮಿಂಚುಗಳ ಆಟ ಮುಗಿದಿತ್ತು. ಬಳಿಕ ತಾಯಿಯ ರಟ್ಟೆಹಿಡಿದು ಎಳೆದುಕೊಂಡು ಹೊರಟಳು.

ನನ್ನನ್ನು ನೋಡಿದ ಲಮಾಣಿ ಹೆಂಗಸಿಗೆ ಏನು ಅನ್ನಿಸಿತೋ ? ಬಹುಶಃ ನನ್ನ ಬಳಿ ಯಾವುದೋ ಗಹನವಾದ ವಿಷಯ ಹಂಚಿಕೊಳ್ಳುವ ಆಶೆ ಅವಳ ಮನದಲ್ಲಿ ಮೂಡಿರಬೇಕು.



# ಅವನು... ಅವಳು ಮತ್ತು ಮದುವೆ !

ಬಿಸಿಲೋ ಬಿಸಿಲೆಂಬ ಮನೆಯ ಮಾಡಿನ ಮೇಲೆ
ಹುಣಿಮಿ ಚಂದಿರ ಕುಳಿತು ಬೆವರಿಳಿಸುವಾಗ

ಗಾಳಿ ನಿಂತ ಹಾಳು ಹಳೆ ಕೋಣೆಯೊಳಗೆ
ಬೆರಕಿ ಹುಡುಗಿ ಬೆಳಕಂತಿಲಿಯುತಾಳೆ।

ನಾಳೆ ತನಗೊಂದು ಮದುವೆ ಎಂಬುದ ಮರೆತು
ಅವಕೊಟ್ಟ ನವಿಲಗರಿ ತೆರೆಯುತಾಳೆ।

ನಲ್ಲ ಬಂದಾನೆಂದು, ರೆಕ್ಕೆ ತಂದಾನೆಂದು
ಬೆರಳಿನಲಿ ರಂಗೋಲಿ ಬರೆಯುತಾಳೆ।

ಕಿಡಕಿಯಲಿ ಕಣ್ಣಿಟ್ಟು ಮೋಡದಲಿ ಮನಸಿಟ್ಟು
ಇರುಳ ಸೆರಗನು ಸುತ್ತಿ ಹಾಡುತಾಳೆ।

ಮತ್ತೊಂದು ಮುಂಜಾನೆ...
ನಲ್ಲ ಕೈ ಸಿಗಲಿಲ್ಲ!
ಅವನ ಪರಿಮಳ ಕಿರಣ ನಿಲ್ಲಲಿಲ್ಲ!
ಅಷ್ಟೇ ಸಾಕವಳಿಗೆ ಮತ್ತೆ ದಡ ಸೇರಲು!
ಬಯಲೊಳಗೆ ಬಯಲಾಗಿ ಬಂದು ದಿಬ್ಬಣ ಸೇರಿ
ಹರಿಷಿಣ ಕುಂಕುಮ ಹಚ್ಚಿ, ಆರತಿಗಣ್ಣಿತ್ತಿ
ತಣ್ಣಗೆ ತಾಳಿಹಿಡಿದ ಹುಡುಗನ ಕೊರಳ ಮುಟ್ಟಲು!

ಶಿವಕುಮಾರ್ ಕಂಪ್ಲಿ
ಕೇರಾಫ್ ಸಿ. ಸೋಮಶೇಖರಪ್ಪ, ಪೋಸ್ಟ್ ಮಾಸ್ಟರ್, ೧ನೇ ವಾರ್ಡ್
ಆಜಾದ್‌ನಗರ, ಕೂಡ್ಲಿಗಿ - ಅಂಚೆ, ತಾಲೂಕ್, ಬಳ್ಳಾರಿ ಜಿಲ್ಲೆ - ೫೮೩ ೧೩೫

''ಬನ್ನಿ. ಏನ್ ವಿಷಯ ?'' ಎಂದು ನಾನು ವಿಚಾರಿಸಿದೆ. ಅವಳು ನನ್ನೆಡೆ ತಿರುಗಿ ನಿಂತು ನಿರರ್ಗಳವಾಗಿ ಮಾತಾಡತೊಡಗಿದಳು.

''ಸಾರ್. ನೀವು ಇಲ್ಲಿದ್ದದ್ದು ಒಳ್ಳೇದಾಯ್ತು. ಆ ಮುದುಕ ಸಾಧಾರಣ ಆಸಾಮಿಯಲ್ಲ. ಮೇಲ್ನೋಟಕ್ಕೆ ಅವನೊಬ್ಬ ಬೆಪ್ಪುತಕ್ಕಡಿಯಂತೆ ಕಾಣಿಸ್ತಾನೆ. ಆದ್ರ ಒಳಗೆ ಮಹಾ ಚಾಣಾಕ್ಷ. ಮಾತಿನ ಮಲ್ಲ. ಬಂಗಾರದಂತ ಮಾತೇ ಅವನ ಬಂಡವಾಳ. ಮುಗ್ಧ ಹಳ್ಳಿಜನರ ಮನದಲ್ಲಿ ಇಲ್ಲಸಲ್ಲದ ಆಶೆ, ಭರವಸೆ ಬಿತ್ತಿ ಹಾಡು ಹಗಲೇ ಹಣ ಸುಲಿಯುವ ಚತುರ. ಅಂಗೈಯಲ್ಲಿ ಅರಮನೆ ತೋರಿಸುವ ನಿಸ್ಸೀಮ.

''ಈ ಭಡವ ಸತ್ತ ಓತಿಕಾಟವನ್ನೇ ಉಡ, ಅದರ ನೆಣದಿಂದಲೇ ಈ ಅದ್ಭುತ ತೈಲ ತಯಾರಿಸಿದ್ದು ಅಂತಾ ಬುರುಡೆ ಬೇರೆ ಬಿಡ್ತಾನೆ. ಕೆಲಸಕ್ಕೆ ಬಾರದ ತೈಲವನ್ನು ದಿವ್ಯೌಷಧ ಅಂತ ಮಾರಾಟ ಮಾಡುವ ಮಹಾ ಠಕ್ಕ. ಭಯಂಕರ ಮೋಸಗಾರ. ಅವನ ಮಾತು ಯಾರೂ ನಂಬಲೇಬಾರದು.'' ಆವೇಶ ತಡೆಯಲಾರದೆ ತನ್ನ ಒಡಲಲ್ಲಿ ಅವಿತುಕುಳಿತಿದ್ದ ಆಕ್ರೋಶವನ್ನೆಲ್ಲಾ ನನ್ನ ಮುಂದೆ ಚೆಲ್ಲಿದಳು. ಹೃದಯ ಹಗುರ ಮಾಡಿಕೊಂಡಳು. ಅನ್ಯಾಯದ ಬಗ್ಗೆ ಅವಳಿಗಿದ್ದ ಆಕ್ರೋಶ ಅವಳ ದನಿಯಲ್ಲಿ ಗುರುತಿಸಿದೆ. ನಿಜಕ್ಕೂ ಅವಳು ದಿಟ್ಟ ಹೆಂಗಸು.

''ಹೌದು. ನೀನು ನುಡಿದ ಒಂದೊಂದು ಮಾತೂ ಅಕ್ಷರಶಃ ಸತ್ಯ. ನಿನ್ನ ವಿಚಾರಧಾರಿನ ಯಾರಾದರೂ ಮೆಚ್ಚುವಂಥದ್ದು. ಆದರೆ ನಮ್ಮ ದೇಶದಲ್ಲಿ ಯಾವುದೂ ನಾವು ಎಣಿಸಿದಂತೆ ನಡೆಯುವುದಿಲ್ಲ. ಅನಗತ್ಯ ಚಿಂತನೆಯಿಂದ ಒಂದಿನಿತು ಪ್ರಯೋಜನವಿಲ್ಲ. ಮುಗ್ಧ ಜನರು, ಅವಿದ್ಯಾವಂತರು ದೇಶದಲ್ಲಿ ತುಂಬಿರುವಾಗ ನಾವೇನು ಮಾಡಲು ಸಾಧ್ಯ ? ನಾನೇನಾದರೂ ಮಧ್ಯೆ ಪ್ರವೇಶಿಸಿದರೆ ಅನಪೇಕ್ಷಿತ ವ್ಯಕ್ತಿಯ ಅಧಿಕಪ್ರಸಂಗವಾದೀತು.

''ಜನ ಮರುಳೋ ಜಾತ್ರೆ ಮರುಳೋ! ಎನ್ನುವ ಕನ್ನಡ ಗಾದೆಯೇ ಇದೆಯಲ್ಲ, ಎಲ್ಲಿಯವರೆಗೂ ಮೂರ್ಖರಿರುತ್ತಾರೋ ಅಲ್ಲಿತನಕ ಮಾತಿನ ಮಲ್ಲರು ಜನರಿಗೆ ಟೋಪಿ ಹಾಕುತ್ತಲೇ ಇರುತ್ತಾರೆ. ಜನರಲ್ಲಿ ಸಾಕ್ಷರತೆ, ವಿವೇಕ ಮೂಡಿ ಎಚ್ಚತ್ತು ಕೊಂಡಾಗ ಇಂಥ ಮೋಸದ ಚಟುವಟಿಕೆಗಳಿಗೆ ತಂತಾನೆ ತೆರೆ ಬೀಳುವುದು.'' ನಾನು ಸುಲಭ, ಸುರಕ್ಷಿತ ಸೂತ್ರವನ್ನು ಅನುಸರಿಸಿದೆ. ನನ್ನ ಅಭಿಪ್ರಾಯ ಬಹುಶಃ ಅವಳಿಗೆ ರುಚಿಸಲಿಲ್ಲವೆಂದು ತೋರಿತು.

''ಹಾಗಂತ ನಮ್ಮ ಮುಂದೆ ಕೆಟ್ಟ ಕಾರೋಬಾರಿ ನಡೆದರೂ ಅದನ್ ನುಂಗಿಕೊಂಡು ತೆಪ್ಪಗೆ ಬಿದ್ದಿರಬೇಕು ಎನ್ನುವುದು ನಿಮ್ಮ ಇಚ್ಛೆ ಏನು ? ಅದು ಹೇಗೆ ಸಾಧ್ಯ ? ಅವ್ಯವಹಾರಗಳ ವಿರುದ್ಧ ದನಿ ಎತ್ತಬೇಕು. ಅವುಗಳಿಗೆ ಪರದೆ ಎಳೆಯಲು ಪ್ರಯಾಸ ಪಡಬೇಕು. ಹಾಗೊಂದು ವೇಳೆ ಆ ಭಿಕಾರಿ ಮುದುಕನ ಮೋಸದ ದಂಧೆ ಹೀಗೆ ಮುಂದುವರೆಯಲು ಬಿಟ್ರ, ಹಣ ದೋಚುವುದು ಹಾಗಿರಲಿ, ಜೀವಕ್ಕೆ ಕುತ್ತು ತರುವುದರಲ್ಲಿ ಸಂದೇಹವೇ ಇಲ್ಲ.

''ಅದಕ್ಕೆ ನಾನು ಆ ಬೇವಾರಿಸಿ ಮುದುಕನಿಗೆ ಛೇಶಂಗ ಬೆಂಡೆತ್ತಿ ಬಂದೀನಿ. ಮೊದಲು ಅಂಥವರನ್ನು ಪೊಲೀಸರಿಗೆ ಒಪ್ಪಿಸುವ ವ್ಯವಸ್ಥೆಯಾಗಬೇಕು. ನ್ಯಾಯದ ಕಟಕಟೆಯಲ್ಲಿ ನಿಲ್ಲಿಸಬೇಕು. ಜೀವನವಿಡೀ ಜೈಲಿನ ಕಂಬಿ ಎಣಿಸುವಂತೆ ಮಾಡಬೇಕು. ಆವಾಗ ಮೋಸದ ದಂಧೆಗಳು ತಾನೇತಾನಾಗಿ ನಿಂತು ಬಿಡ್ತಾವು. ಹೀಗೆ ಮುಖಕ್ಕೆ ಹೊಡೆದಂತೆ ಮಾತಾಡಿದಳು ಆ ಚುರುಕುಮತಿಯ ದಿಟ್ಟ ಲಮಾಣಿ ಹೆಂಗಸು. ಅನ್ಯಾಯದ ವಿರುದ್ಧ ಅವಳಿಗಿದ್ದ ಕಳಕಳಿ ಅವಳ ದನಿಯಲ್ಲಿ ಎದ್ದುಕಾಣುತ್ತಿತ್ತು.

ಅವಳ ವಿಚಾರಧಾರೆಗೆ ನಾನು ಸಕಾರಾತ್ಮಕವಾಗಿ ಸ್ಪಂದಿಸದೇ ಹೋದಾಗ ಅವಳು ನಿರಾಶೆಗೊಂಡವಳಂತೆ ನಿಟ್ಟುಸಿರು ಹೊರಹಾಕಿದಳು. ಅವಳು ನನ್ನನ್ನು ಒಮ್ಮೆ ಕೆಕ್ಕರಿಸಿ ನೋಡಿದಳು. ಬಳಿಕ ನನ್ನ ಕಡೆ ಬೆನ್ನು ತಿರುಗಿಸಿ, ತಿರುಗಿಯೂ ನೋಡದೆ ಸಂತೆ ಬೀದಿಯಲ್ಲಿ ಭರಭರ ಹೊರಟುಹೋದಳು.

ಅಷ್ಟರಲ್ಲಿ ನಾನು ನಿರೀಕ್ಷಿಸುತ್ತಿದ್ದ ಬಸ್ಸು ಬಂದಿತು. ನಾನು ಅದರಲ್ಲಿ ಹೋಗಿ ಮನೆ ಸೇರಿಕೊಂಡೆ. ತಿಂಗಳೊಪ್ಪತ್ತಿನಲ್ಲಿ ದಿವ್ಯೌಷಧ ತೈಲ ಪ್ರಸಂಗದ ನೆನಪು ನನ್ನ ಮನಃಪಟಲದಿಂದ ಮಾಸಿತು.

ಅದೊಂದು ರವಿವಾರ ಬೆಳಗ್ಗೆ ನಾನು ಬೆಟಗೇರಿಯಲ್ಲಿರುವ 'ಜರ್ಮನ್ ಹಾಸ್ಪಿಟಲ್'ಗೆ ಹೊರಟಿದ್ದೆ. ಹೃದಯ ತೊಂದರೆಯಿಂದ ಆಸ್ಪತ್ರೆಗೆ ಸೇರಿದ್ದ ನನ್ನ ಸಂಬಂಧಿಕರೊಬ್ಬರನ್ನು ವಿಚಾರಿಸಿಕೊಂಡು ಬರುವ ಇಚ್ಛೆ ನನ್ನದಾಗಿತ್ತು.

ಇನ್ನೇನು ನಾನು ಆಸ್ಪತ್ರೆ ಆವರಣದಲ್ಲಿ ಕಾಲು ಇಡುತ್ತಿದ್ದಂತೆ ಅಚಾನಕ್ ನನ್ನ ಕಾಲೇಜ ಸ್ನೇಹಿತನೊಬ್ಬ ನನ್ನೆದುರು ಬರಬೇಕೆ ? ಸರಿ ಇಬ್ಬರೂ ಒಂದು ಕಡೆ ನಿಂತು

ಹರಟೆ ಕೊಚ್ಚುತ್ತ ಅರ್ಧಗಂಟೆ ಸವೆಸಿದೆವು. ಕೊನೆಗೆ ಆಸ್ಪತ್ರೆಗೆ ಬಂದ ವಿಷಯವೇನೆಂದು ಸ್ನೇಹಿತನಲ್ಲಿ ವಿಚಾರಿಸಿದೆ.

''ಅಯ್ಯೋ ಆ ಕತೆ ಏನ್ ಕೇಳ್ತೀಯಾ? ಅಬ್ಬಾ! ಅದೊಂದು ಮರೆಯಲಾಗದ ಪ್ರಸಂಗ! ಅದನ್ನು ನೆನಪಿಸಿಕೊಂಡರೆ ಮೈಮೇಲೆ ಮಂಜು ಸುರಿದಂತ ಅನುಭವ! ಒಂದು ದಿನ ನಾನು ಯಾವುದೋ ವಸ್ತು ತರಲು ಮಾರ್ಕೆಟಿಗೆ ಹೋಗಿದ್ದೆ. ಬೇವಿನಕಟ್ಟೆ ಪಕ್ಕ ಕುಳಿತಿದ್ದ ಮುದುಕನಿಗೆ ಜನರ ಹಿಂಡೇ ಮುಗಿಬಿದ್ದಿತ್ತು. ನೂಕುನುಗ್ಗಲಿನಲ್ಲಿ ಏನನ್ನೊ ಖರೀದಿಸುತ್ತಿದ್ದರು. ನಾನು ಕುತೂಹಲದಿಂದ ಇಣುಕಿ ನೋಡಿದಾಗ ಅರ್ಥವಾಯ್ತು. ಮುದುಕ ಮಾರಾಟ ಮಾಡುತ್ತಿದ್ದ ವಸ್ತು 'ಸರ್ವನೋವು ನಿವಾರಕ ದಿವ್ಯೌಷಧ'.

''ನನ್ನ ತಾಯಿ ಬಹಳ ಸಮಯದಿಂದ ಸೊಂಟ ನೋವು, ಮಂಡೆನೋವೆಂದು ನರಳುತ್ತಿದ್ದಳು. ಗೊತ್ತಿದ್ದ ತಜ್ಞ ಡಾಕ್ಟರ ಬಳಿ ತೋರಿಸಿದ್ದಾಯ್ತು. ಬರೀ ಮಾತ್ರೆ ನುಂಗಿ, ಮುಲಾಮು ಸವರಿದ್ದೇ ಬಂತು ಹೊರತು ಪುಡಿಗಾಸಿನ ಪ್ರಯೋಜನವಾಗಲಿಲ್ಲ. ನನ್ನ ತಲೆಯಲ್ಲಿ ತಟ್ಟನೇ ಒಂದು ವಿಚಾರ ಮಿಂಚಿತು. ಈ ಅದ್ಭುತ ತೈಲನ್ನ ಒಂದು ಸರ್ತಿ ನನ್ನ ತಾಯಿ ಮೇಲೆ ಪ್ರಯೋಗಮಾಡಿ ನೋಡಬಾರದೇಕೆ? ಅದೃಷ್ಟವಿದ್ದರೆ ಇದರಿಂದ ಅವಳ ಸಮಸ್ಯೆ ಬಗೆಹರಿಯಬಹುದು. ನನ್ನ ಮನಸ್ಸು ಕಲ್ಪನಾಲೋಕದಲ್ಲಿ ವಿಹರಿಸಿತು. ನನ್ನ ಹಾರೈಕೆ ಬಲವಾದಾಗ ಮನಸ್ಸು ಸಂತೋಷದಲ್ಲಿ ಚೀರಿತು.




''ನಾನು ಬಂದ ಕೆಲಸನೆಲ್ಲಾ ಬದಿಗೆ ಸರಿಸಿಟ್ಟು, ನಿಂತಕಾಲಲ್ಲೇ ಒಂದು ದೊಡ್ಡ ಬಾಟಲಿ ನೋವಿನ ತೈಲ ಕೊಂಡುಕೊಂಡೆ. ಖುಷಿಯಿಂದ ಸೀದಾ ಮನೆಗೆ ಓಡಿದೆ. ಅಂದು ರಾತ್ರಿಯೇ ಮುದುಕ ಹೇಳಿದ ಪ್ರಕಾರ, ನನ್ನ ತಾಯಿಯ ಸೊಂಟದ ಸುತ್ತ, ಹಾಗೂ ಮೊಣಕಾಲಿಗೆ ತೈಲ ಸವರಿ, ಚೆನ್ನಾಗಿ ತಿಕ್ಕಿ ಅರ್ಧಗಂಟೆ ಬಿಟ್ಟು ಅದರ ಮೇಲೆ ಒಂದು ಕೊಡಪಾನ ಸುಡುವ ನೀರು ಸುರುವಿದೆವು. ಪ್ರತಿದಿನ ಮುಂಜಾನೆ ಹಾಗೂ ಸಂಜೆ ಹೊತ್ತು ಯಥಾಪ್ರಕಾರ ಉಪಚಾರ ಮುಂದುವರೆಸಿದೆವು. ಆ ಸುಡಗಾಡು ಸೊಂಟ ನೋವಿನಿಂದ ಸನಿಹದಲ್ಲೇ ನನ್ನ ತಾಯಿಗೆ ಮುಕ್ತಿ ಸಿಗುವ ಲಕ್ಷಣಗಳು ಗೋಚರಿಸಿದವು.

''ನೆಚ್ಚಿದ ಎಮ್ಮೆ, ಕೋಣಗರು ಈಯಿತು ಎನ್ನುವ ಕನ್ನಡ ಗಾದೆಯಂತೆ ಆಯಿತು ನನ್ನ ತಾಯಿಯ ಸ್ಥಿತಿ. ಮೂರನೇ ದಿನ ಬೆಳಗ್ಗೆ ನೋಡಿದರೆ... ಎಲ್ಲಾ ಇರಸು ಮುರುಸಾಗಿತ್ತು. ತೈಲ ಕೈಕೊಟ್ಟಿತ್ತು. ತೈಲ ಲೇಪಿಸಿದ ದೇಹದ ಭಾಗವೆಲ್ಲ ಕೆಂಪಗೆ ಊದಿಕೊಂಡು, ಅದರ ಮೇಲೆ ಕೀವು ತುಂಬಿದ ಬೊಕ್ಕೆಗಳು ರಾತ್ರಿ ಬೆಳಗಾಗುವುದರೊಳಗೆ ನಾಯಿಕೊಡೆಗಳಂತೆ ತಲೆ ಎತ್ತಿದ್ದವು. ಹಳೆ ಸಮಸ್ಯೆಯ ಜೊತೆಗೆ ಹೊಸದೊಂದು ಸೇರಿಕೊಂಡದ್ದು ನನ್ನ ತಾಯಿ ಕರ್ಮ. ಪ್ರಾಯಶಃ ತೀವ್ರ ಅಲರ್ಜಿ ಪ್ರತಿಕ್ರಿಯೆ ಉಂಟಾಗಿ ಬೊಕ್ಕೆಗಳು ಎದ್ದಿರಬಹುದು. ಅದ್ಭುತ ತೈಲ ಅವಳಿಗೆ ಆಗಿಬರಲಿಲ್ಲವೆಂದು ಅನ್ನಿಸಿತು.

''ಬೊಕ್ಕೆಗಳ ಅಸಾಧ್ಯ ಸಿಡಿತ, ವಿಪರೀತ ನೋವು, ತುರಿಕೆ ಸಹಿಸಲಾರದೆ ಒಂದೇ ಸಮ ಬೊಬ್ಬೆ ಹೊಡೆಯಲು ಸುರುವಿಟ್ಟಳು. ಅತಿ ಅಸ್ವಸ್ಥಳಾದಂತೆ ಕಂಡಳು. ಅವಳ ಕಷ್ಟ ನೋಡಲಾಗಲಿಲ್ಲ, ಅದು ನನ್ನ ಮನೋನೆಮ್ಮದಿಯನ್ನೇ ಹಾಳುಮಾಡಿತು. ಮನೆ ಮಂದಿ ಚಿಂತೆಯಲ್ಲಿ ಮುಳುಗಿದರು. ಕೊನೆಗೆ ತುರ್ತಾಗಿ ತಜ್ಞ ಡಾಕ್ಟರ್ ಬಳಿ ಹೋಗುವುದೇ ಲೇಸೆಂದು ತೀರ್ಮಾನಿಸಿ, ತರಾತುರಿಯಲ್ಲಿ ಅವಳನ್ನು ಈ ಆಸ್ಪತ್ರೆಗೆ ಸೇರಿಸಿಬಿಟ್ಟೆವು.

''ಆಸ್ಪತ್ರೆ ಸೇರಿ ಒಂದು ವಾರ ಕಳೆಯಿತು. ಪುಣ್ಯಕ್ಕೆ ಅವಳ ದೇಹಸ್ಥಿತಿ ಈಗ ಪರವಾಗಿಲ್ಲ. ಬಹುತೇಕ ಬೊಕ್ಕೆಗಳು ಈಗಾಗ್ಲೆ ಕರಗಿಹೋಗಿವೆ. ಮಿಕ್ಕುಳಿದವು ಒಂದೆರಡು ದಿನಗಳಲ್ಲಿ ಇಳಿಯುವ ಸಂಭವ. ವಾರಾಂತ್ಯದಲ್ಲಿ ಮನೆಗೆ ಹೋಗಬಹುದೆಂದು ಡಾಕ್ಟರ್ ಭರವಸೆ ಕೊಟ್ಟಿದ್ದಾರೆ. ಏನೋ ಮಾಡಲಿಕ್ಕೆ ಹೋಗಿ ಏನೋ ಆಗಿ ಪರಿತಪಿಸುವಂತಾಯಿತು. ನನಗಂತೂ ನಾಟಿ ಮದ್ದು ಕಂಡರೆ ಮೈ ಥರಗುಟ್ಟುತ್ತೆ'' ದಿವ್ಯೌಷಧ ತಂದ ವಿಪತ್ತಿನ ಕಥೆಯನ್ನು ನನ್ನ ಸ್ನೇಹಿತ ಹೇಳಿ ಮುಗಿಸಿದ.

ಸ್ನೇಹಿತನ ತಾಯಿ ಅನುಭವಿಸಿದ ಆ ನರಕಯಾತನೆ ಕೇಳಿ ನಾನು ದಂಗಾದೆ! ಶಾಲೆಯ ಕಟ್ಟಡದ ಮೆಟ್ಟಲು ಹತ್ತದ, ಓದು-ಬರಹದ ಗಂಧವಿಲ್ಲದ ನಾಗಾವಿ ತಾಂಡಾದ ಪ್ರೌಢ ಹೆಂಗಸು ಅಂದು ಉಸುರಿದ ಮಾತುಗಳು ನನ್ನ ನೆನಪಿನಾಳದಿಂದ ತೇಲಿಬಂದವು.

'ಆ ಮೋಸಗಾರ ಮುದುಕನನ್ನು ಹೀಗೇ ಮುಂದುವರೆಯಲು ಬಿಟ್ಟರೆ... ಹಣ ದೋಚುವುದು ಹಾಗಿರಲಿ, ಜೀವಕ್ಕೇ ಕುತ್ತು ತರುವುದರಲ್ಲಿ ಸಂದೇಹವಿಲ್ಲ ...ಜೈಲಿನಲ್ಲಿ ಕಂಬಿ ಎಣಿಸುವಂತೆ ಮಾಡಬೇಕು.'

ಅಬ್ಬ! ಎಂಥ ಗಟ್ಟಿ ಮಾತುಗಳು! ಅದೆಷ್ಟು ಔಚಿತ್ಯಪೂರ್ಣವಾಗಿದ್ದುವು! ಅಂದು ಅವಳಿಗೆ ಸಪೋರ್ಟ್ ಮಾಡದೇ ಹೋದದ್ದು ನಾನು ಮಾಡಿದ ಮಹಾಪರಾಧ. ನನಗೇನೂ ಸಂಬಂಧಿಸದ ಹಾಗೇ ನಾನೊಬ್ಬ ತಮಾಷೆ ನೋಡುವ ಪ್ರೇಕ್ಷಕನಾಗಿದ್ದೆ. ಅವಳೆದುರು ನಾನು ಕುಬ್ಜನಾದಂತೆ ಭಾಸವಾಗತೊಡಗಿತು.


**ಡಾ|| ರುದ್ರಯ್ಯ ವಿ. ಗದಗ**

ಮ.ನಂ. ೨೪೦/೪೨, 'ಪಂಚವಟಿ', ವಿವೇಕಾನಂದನಗರ, ನೀರಿನ ಟ್ಯಾಂಕ್ ಹತ್ತಿರ, ಗದಗ - ೫೮೨ ೧೦೧


---


*೪೯ನೇ ಪುಟದಿಂದ (ಒಂದು ಶುದ್ಧ ಸಂತೋಷ)*


ಚೇತೋಹಾರಿ. ರಾಗಾಲಾಪನೆ ಸಂದರ್ಭದಲ್ಲಿ ಎದ್ದು ತೋರುವ ಆ ಬಿಗಿ, ಬಿಕ್ಕಟ್ಟು ಕೆಲವು ಹಿಂದೂಸ್ತಾನಿ ಗವಯಿಗಳ ಖಚಿತ ಆಕಾರವನ್ನು ನನಗೆ ನೆನಪಿಸಿತು. ಇನ್ನಾಕೆಯ ಸಾತ್ವಿಕ ಸಂಗೀತ ಚಹರೆಗಳು, ಕರ್ನಾಟಕ ಶೈಲಿಯ ವಿಶಿಷ್ಟ ಗತ್ತು, ಕೀರ್ತನೆಗಳಲ್ಲಿನ ಸಂಸ್ಕೃತ ಪದಗುಚ್ಛಗಳನ್ನು ಬಿಡಿಸಿ ಬಿಡಿಸಿ ಮನಂಬುಗುವಂತೆ ಪ್ರಸ್ತುತಪಡಿಸುವ ಆತ್ಮೀಯ ರೀತಿ ಪ್ರಿಯವಾಗುತ್ತದೆ.

ವಿದುಷಿ ಟಿ. ಎಸ್. ಸತ್ಯವತಿ ಬಾಲಪ್ರತಿಭೆ. ಎರಡನೇ ವರ್ಷದಲ್ಲಿ ಮಹಾರಾಣಿಯವರ ಮುಂದೆ ಹಾಡಿದ್ದರಂತೆ. ಹನ್ನೊಂದನೇ ವಯಸ್ಸಿಗೆ 'ಏಕಸಂಧಿಗ್ರಾಹಿ' ಎಂಬ ಹೆಗ್ಗಳಿಕೆ! ಓದಿನಲ್ಲಿ ಜಾಣೆ. ಎಂ.ಎ., ಎಂ.ಫಿಲ್., ಪಿಎಚ್.ಡಿ. ಪದವಿಗಳು ಕಿಸೆಯಲ್ಲಿವೆ. ವಿದುಷಿ ವಸಂತಮಾಧವಿ, ಆರ್. ಕೆ. ಶ್ರೀಕಂಠನ್, ಬಿ.ವಿ.ಕೆ. ಶಾಸ್ತ್ರಿ, ಬೆಂಗಳೂರು ಕೆ. ವೆಂಕಟರಾಂ ಅವರಂತಹ ಘಟಾನುಘಟಿಗಳಿಂದ 'ಅರ್ಹ ವಿದ್ಯಾರ್ಥಿನಿ' ಎಂದು ಬೆನ್ನು ತಟ್ಟಿಸಿಕೊಂಡ ಸತ್ಯವತಿ ಇವತ್ತು ಒಬ್ಬ ಶಿಕ್ಷಣತಜ್ಞೆ, ಜನಪ್ರಿಯ ಕಲಾವಿದೆ, ಲಕ್ಷ್ಯ-ಲಕ್ಷಣಜ್ಞೆ. ಎಲ್ಲಕ್ಕಿಂತ ಹೆಚ್ಚಾಗಿ ಒಬ್ಬ ಪ್ರಭಾವಶಾಲಿ ಬೋಧಕಿ. ಅಂತಾರಾಷ್ಟ್ರೀಯ ಮಟ್ಟದಲ್ಲಿ ಪ್ರಬಂಧಗಳನ್ನು ಮಂಡಿಸಿರುವ ಸತ್ಯವತಿ ಪ್ರಶಸ್ತಿ ಪುರಸ್ಕೃತೆಯೂ ಹೌದು. ಆದರೆ ಸತ್ಯವತಿಯ ಸಂಗೀತ-ಸಾಹಿತ್ಯ ವ್ಯಕ್ತಿತ್ವವನ್ನು ಗಮನಿಸಿದಾಗ ಆಕೆಯನ್ನು ಗುರುತಿಸಿರುವುದು ಸಾಲದೆಂದೇ ಕಾಣುತ್ತದೆ. ಹಿಂದೆ ಮೈಸೂರು ಆಕಾಶವಾಣಿಯಲ್ಲಿ ಎಂ. ಶಂಕರ್ ಎಂಬ ಪ್ರಾಮಾಣಿಕ ಅಧಿಕಾರಿ ಇದ್ದರು. ಅವರು ನಮ್ಮ ಮಧುರಕಂಠದ ಹಾಡುಗಾರ್ತಿ ಕೆ. ಜಿ. ಕನಕಲಕ್ಷ್ಮಿಯವರ ಬಗ್ಗೆ ಒಂದು ಮಾತು ಯಾವಾಗಲೂ ಹೇಳುತ್ತಿದ್ದರು – ''ವಿ ಶುಡ್ ಬಿ ಏಬಲ್ ಟು ಡು ಸಮ್‌ಥಿಂಗ್ ವಿತ್ ಹರ್ ಡಿವೈನ್ ವಾಯ್ಸ್!'' ಈ ಮಾತು ಸತ್ಯವತಿಗೂ ಅನ್ವಯಿಸುತ್ತದೆ.

ಪ್ರತಿಭೆಯುಳ್ಳ ವ್ಯಕ್ತಿ ನಮ್ಮಲ್ಲಿಂದು ಬದುಕುವುದೇ ಕಷ್ಟವಾಗಿದೆ. ಪ್ರತಿಭೆಯೊಂದಿಗೆ ಸ್ವಾಭಿಮಾನವೂ ಇದ್ದರೆ ತುಂಬ ಕಷ್ಟ. ಈ ಸಂಗಮ ಮಹಿಳೆಯಾಗಿಬಿಟ್ಟರೆ ಇನ್ನೂ ಕಷ್ಟ. ಇವೆಲ್ಲದರೊಂದಿಗೆ ಒಂದಿಷ್ಟು ಪ್ರಸನ್ನರೂಪವೂ ತೋರಿದರೆ ಸಮಸ್ಯೆಗಳು ಜಾಸ್ತಿ. ಅನೇಕಾನೇಕ ಹಲ್ಲುಗಳ ನಡುವೆ ಇರುವ ಒಂದೇ ಮೆತ್ತನ ನಾಲಿಗೆಯಂತೆ ಜಾಗರೂಕನಾಗಿ ಪ್ರವರ್ತಿಸಬೇಕು. ಇಂಥ ಗಟ್ಟಿಗಿತ್ತಿಯರಲ್ಲಿ ಸತ್ಯವತಿ ಕೂಡ ಒಬ್ಬರು. ತನ್ನಷ್ಟಕ್ಕೆ ಧೀರವಾಗಿ ಬಾಳುತ್ತಿದ್ದಾರೆ. ತನ್ನ ಸಾಧನೆಗಳಲ್ಲಿ ಮುಳುಗಿದ್ದಾರೆ. 'ಸರಸ್ವತಿ'ಗೆ ಹತ್ತಿರವಾಗುವ ಬಯಕೆಯಿರಬೇಕು ಈ 'ಸ್ವರವತಿ'ಗೆ!


ಭಾರತೀ ಕಾಸರಗೋಡು

ನಂ. ೭೩೬, ೧೪ನೇ ಕ್ರಾಸ್, ಬಿ.ಇ.ಎಲ್. ಲೇಔಟ್ (೧ನೇ ಹಂತ)
ಭಾರತ್‌ನಗರ, ಮಾಗಡಿ ರಸ್ತೆ, ಬೆಂಗಳೂರು - ೫೬೦ ೦೯೧



# ಇತಿಹಾಸದ ವಿಪರ್ಯಾಸ

> ಪ್ರಾಚೀನವಾದ ಎಲ್ಲ ಒಳ್ಳೆಯದನ್ನೂ ಉಳಿಸಿಕೊಳ್ಳಬೇಕು ಮತ್ತು ಕೆಟ್ಟದ್ದೆಲ್ಲವನ್ನೂ ನಿರಾಕರಿಸಬೇಕು ಎನ್ನುವ ಹೊತ್ತಿನಲ್ಲೇ, ಜನತೆಯ ನೆಮ್ಮದಿಯನ್ನು ಕೆಡಿಸುವ ಮತ್ತು ಹಾಳುಮಾಡುವ ಯಾವುದೇ ಹೊಸ ನಿರ್ಮಾಣ ಮತ್ತು ಆಚರಣೆಯ ಅಗತ್ಯವಿಲ್ಲ ಎಂದು ಹೇಳುವ ನಿಸ್ವಾರ್ಥ ಮಾತುಗಳು ಇತಿಹಾಸದಲ್ಲಿ ದಾಖಲಾಗಬೇಕು. ಸ್ವಾರ್ಥ, ತತ್ಕಾಲೀನ ಅನುಕೂಲ, ಅಧಿಕಾರ, ಪ್ರಚಾರ, ದ್ವೇಷ ಇತ್ಯಾದಿಗಳಿಗೋಸ್ಕರ ನಡೆಯುವ ಯಾವುದೇ ಪ್ರಯತ್ನಗಳು ಇತಿಹಾಸದ ಪುಟಗಳಲ್ಲಿ ದಾಖಲಾಗಿ, ಮುಂದಿನ ಜನಾಂಗ ಅದನ್ನು ಅನುಸರಿಸುವುದಾದರೆ, ಇತಿಹಾಸವು ನಮಗೆ ಕಲಿಸಿದ ಪಾಠ ಏನು ಎಂದು ವಿವೇಕಿಗಳಾದ ಯಾರಾದರೂ ಪ್ರಶ್ನಿಸಲು ಅವಕಾಶ ಇರುತ್ತದೆ.

ಇತಿಹಾಸದಿಂದ ಎಲ್ಲ ಮನುಷ್ಯರೂ ತಿಳಿಯಲೇಬೇಕಾದ ಮತ್ತು ಕಲಿಯಲೇಬೇಕಾದ ಅನೇಕ ವಿಚಾರಗಳಿವೆ. ಇದು ಕ್ಲೀಷೆಯ ಮಾತಾದರೂ ಎಲ್ಲ ಕಾಲಕ್ಕೂ ಸಲ್ಲುವ ಗಟ್ಟಿಮಾತು. ಮನುಷ್ಯ ಮನುಷ್ಯನಾಗಿಯೇ ಉಳಿಯಬೇಕು. ಅವನಿಗೆ ಬುದ್ಧಿ ಇದೆ; ವಿವೇಚನಾ ಶಕ್ತಿ ಇದೆ; ಅಭಿವ್ಯಕ್ತಿ ಸಾಮರ್ಥ್ಯ ಇದೆ. ಬೌದ್ಧಿಕವಾಗಿ ಅವನು ಬೆಳೆಯುತ್ತಲೇ ಇರುತ್ತಾನೆ. ಒಳಿತು ಮತ್ತು ಕೆಡುಕುಗಳ ನಡುವಿನ ಸಣ್ಣಗೆರೆಯನ್ನು ಅಳಿಸುವ ಅಥವಾ ದೊಡ್ಡದು ಮಾಡುವ ಶಕ್ತಿಯೂ ಅವನಿಗಿದೆ. ಸ್ವಭಾವಸಹಜವಾದ ಅಥವಾ ಜನ್ಮದಿಂದ ಅಂಟಿಬಂದ ಗುಣಗಳನ್ನೇ ಮುಂದುವರಿಸಿಕೊಂಡು ಬಾಳುವುದು ಪ್ರಾಣಿಗಳಿಗೆ ಸಹಜ ಮತ್ತು ಸ್ವಾಭಾವಿಕ. ಪ್ರಾಣಿಗಳ ಆ ಸಹಜ ಮತ್ತು ಸ್ವಾಭಾವಿಕ ಗುಣಗಳನ್ನು ಮೀರಿ ಮನುಷ್ಯ ಬೆಳೆಯಬೇಕು. ಇದು ಬಹುತೇಕ ಒಳಿತನ್ನು ಅಪೇಕ್ಷಿಸುವ ಎಲ್ಲರ ನಿರೀಕ್ಷೆ.

ಪರಸ್ಪರ ಪ್ರೀತಿಯಿಂದ ಬಾಳಲು ಇಚ್ಛಿಸದ ಜನರು ಮುಂದಿನ ಜನತೆಗೆ ಕೆಟ್ಟ ಉದಾಹರಣೆಗಳಾಗುತ್ತಾರೆ. ಇತಿಹಾಸ ಇಂತಹ ಜನ ಮತ್ತು ಅಂತಹವರ ಮೂಲಕ ಘಟಿಸಿರುವ ದುರ್ಘಟನೆಗಳ ಬಗ್ಗೆ ತಿಳಿಸುತ್ತದೆ. ಅವು ನಮಗೆ ಮಾರ್ಗದರ್ಶಕಗಳಾದಾಗ ನಾವು ನಮ್ಮ ಮುಂದಿನ ಹೆಜ್ಜೆಯನ್ನು ಹೇಗೆ ಇಡಬೇಕು ಎಂದು ನಿರ್ಧರಿಸಬಹುದು. ಯಾವ ಇತಿಹಾಸದಿಂದ ನಾವು ಕಲಿತು, ಸರಿಯಾದ ಮಾರ್ಗವನ್ನು ಗುರುತುಮಾಡಿಕೊಳ್ಳಬೇಕೋ ಅದನ್ನು ಬಿಟ್ಟು, ಹಿಂದಿನ ತಪ್ಪು ಹೆಜ್ಜೆಗಳಲ್ಲೇ ನಮ್ಮ ಮುಂದಿನ ಹೆಜ್ಜೆಗಳನ್ನು ಊರುತ್ತಾ ನಡೆದರೆ, ನಾವು ಇತಿಹಾಸದಿಂದ ಏನನ್ನೂ ಕಲಿತಿಲ್ಲ ಎಂದೇ ಅರ್ಥ. ಇತಿಹಾಸ ಸರಿದಾರಿ ತೋರಲಿಲ್ಲವಾದರೆ ಅದು ವಿಪರ್ಯಾಸ. ಅದೇ ತಪ್ಪುಗಳನ್ನು ಮುಂದುವರಿಸಿಕೊಂಡೇ ಹೋಗುವುದಾದರೆ, ಇತಿಹಾಸವನ್ನು ಓದಿ ಸಮಯ ಮತ್ತು ಶ್ರಮವನ್ನು ನಷ್ಟ ಮಾಡಿಕೊಳ್ಳಬೇಕಾದ ಅವಶ್ಯಕತೆ ಇಲ್ಲ. ಅಂತಹ ಇತಿಹಾಸವೇ ಬೇಡ. ಇತಿಹಾಸದ ತಿಳುವಳಿಕೆಯಿಂದ ಒಳ್ಳೆಯದನ್ನು ಕಲಿಯದೆ, ಕೆಟ್ಟದ್ದನ್ನೇ ಉಳಿಸಿಕೊಂಡರೆ ಮನುಷ್ಯನಿಗೂ ಪ್ರಾಣಿಗಳಿಗೂ ಇರುವ ಅಂತರ ಏನು ?

ಇಡೀ ವಿಶ್ವದಲ್ಲಿ ನಾವೇ ಪ್ರಾಚೀನರು, ನಾವೇ ಶ್ರೇಷ್ಠ ಎಂಬ ದೊಡ್ಡಸ್ತಿಕೆಯಿಂದ ಯಾರಾದರೂ ಬೀಗುತ್ತಿದ್ದರೆ ಅಂತಹವರನ್ನು ಸರಿದಾರಿಗೆ ತರುವುದು ಸುಲಭವಲ್ಲ. ಸತ್ಯವನ್ನು ತಿಳಿಯುವ ಮನಸ್ಸು ಇರುವ ಯಾರೂ ಎಂತಹ ಮೊಂಡುವಾದಕ್ಕೂ ಇಳಿಯುವುದಿಲ್ಲ. ತಮ್ಮ ದೊಡ್ಡಸ್ತಿಕೆಯನ್ನೇ ಮುಖ್ಯವೆಂದು ಪರಿಗಣಿಸುವ ಮತ್ತು ತಮ್ಮ ದೊಡ್ಡಸ್ತಿಕೆಗೆ ಕುಂದು ಬಂದೀತೆಂಬ ಆತಂಕ ಇರುವ ಯಾರೇ ಆದರೂ, ಆತಂಕದ ಸಮಯಗಳಲ್ಲಿ ಹೋರಾಟಕ್ಕೆ ಇಳಿಯುತ್ತಾರೆ. ಆ ಹೋರಾಟವು ತಮ್ಮ ಮತ್ತು ತಮ್ಮ ನೆರೆಹೊರೆಯ ಜನರಿಗೆ ಹಿತಕಾರಿಯೇ ಅಥವಾ ಅಹಿತಕಾರಿಯೇ ಎಂದು ಯೋಚಿಸುವ ಸ್ಥಿತಿಯಲ್ಲೂ ಹೋರಾಟಕ್ಕೆ ಅಣಿಯಾದ ಜನ ಇರುವುದಿಲ್ಲ; ಅಂತಹ ಆಲೋಚನೆಗೆ ಅವರು ಅವಕಾಶವನ್ನೂ ಕಲ್ಪಿಸಿಕೊಳ್ಳುವುದಿಲ್ಲ. ಅಂತಹವರಿಗೆ ಆಲೋಚನೆಯ ಅವಶ್ಯಕತೆಯೂ ಇರುವುದಿಲ್ಲ. ವಿಶ್ವದ ಯಾವುದೇ ಪ್ರಚಲಿತ ಅಥವಾ ಅಪ್ರಚಲಿತ ಧರ್ಮವು ದ್ವೇಷವನ್ನು ಬೋಧಿಸುತ್ತದೆ ಎಂದು ನಾನು ತಿಳಿದಿಲ್ಲ. ಪರಸ್ಪರ ಪ್ರೀತಿ, ವಿಶ್ವಾಸವನ್ನು ಬಿತ್ತುತ್ತಾ, ಬದುಕನ್ನು ಸಾರ್ಥಕಗೊಳಿಸುವುದು ಯಾವುದೇ ಧರ್ಮದ ಮುಖ್ಯ ಗುರಿ ಎಂದು ನಂಬಿರುವವನು ನಾನು. ಭೌತಿಕ ಬದುಕನ್ನು ಹಸನುಗೊಳಿಸದೆ, ಯಾವುದೋ ಅಮೂರ್ತತೆಯತ್ತ ಎಳೆದೊಯ್ಯುವ ಯಾವುದೇ ಧರ್ಮ ಯಾರ ಬದುಕನ್ನೂ ಹಸನುಗೊಳಿಸಲಾರದು. ಪರಸ್ಪರ

ಡಾ॥ ಎಚ್.ಎಸ್. ಗೋಪಾಲ ರಾವ್



ಅಪನಂಬಿಕೆ ಮತ್ತು ದ್ವೇಷಗಳನ್ನು ಬಿತ್ತುವ ಯಾವುದೇ ಧರ್ಮ ಮನುಷ್ಯನಿಗೆ ಯಾವುದೇ ರೀತಿಯಲ್ಲೂ, ಯಾವುದೇ ರೀತಿಯ ಒಳಿತನ್ನೂ ಮಾಡಲು ಸಾಧ್ಯವಿಲ್ಲ.

ಈ ಹಿಂದೆ ಧಾರ್ಮಿಕ ವಿರಸಗಳು ಮನುಷ್ಯನಿಗೆ ಮಾಡಿರುವ ಹಾನಿಯನ್ನು ಇತಿಹಾಸ ದಾಖಲಿಸಿದೆ. ಮನುಷ್ಯನ ಪ್ರಗತಿಗೇ ಅಡ್ಡಗಾಲು ಹಾಕುವ, ನನ್ನ ಲೋಕವಷ್ಟೇ ಸತ್ಯ ಎಂದು ಮೊಂಡುವಾದ ಮಾಡುವ ಯಾವುದೇ ಧರ್ಮವು, ಕೇವಲ ಅಧಿಕಾರ ಮತ್ತು ಸ್ವಪ್ರತಿಷ್ಠೆಗಳನ್ನಷ್ಟೇ ಬೆಳೆಸುತ್ತದೆ. ಈ ಮಾತುಗಳು ಎಲ್ಲರಿಗೆ ತಿಳಿದಿದೆ. ಸತ್ಯವನ್ನು ಸರಿಯಾಗಿ ತಿಳಿಯದೆ, ಮುಂದಿನ ಇತಿಹಾಸದ ನಿರ್ಮಾಣಕ್ಕೆ ಅಣಿಯಾಗಿರುವ ನಾವು ಮತ್ತೆ ಮತ್ತೆ ಅರ್ಥಹೀನ ಸಂಘರ್ಷಗಳಿಗೆ ಕಾರಣರಾಗುತ್ತಿದ್ದೇವೆ ಎಂಬ ಆತಂಕ ಕೆಲವರನ್ನಾದರೂ ಕಾಡುತ್ತಿದೆ. ಹೀಗೆ ಆಲೋಚಿಸುವವರನ್ನು ಯಾವುದೋ ಒಂದು ಹಣೆಪಟ್ಟಿ ಕಟ್ಟಿ, ಮೊಂಡುವಾದದ ಪೋಷಕರು ಹೀಗಳೆಯುತ್ತಾರೆ.




ಹಂಪಿಯು ವಿಜಯನಗರಕ್ಕೂ ಪೂರ್ವದ ಜನವಸತಿ ಎಂಬ ಬಗ್ಗೆ ಯಾವುದೇ ಭಿನ್ನಾಭಿಪ್ರಾಯಗಳಿಲ್ಲ. ವಿಜಯನಗರದ ಅರಸರ ಆಳ್ವಿಕೆಯ ಕಾಲದಲ್ಲಿ ಅತ್ಯಂತ ಉಚ್ಛ್ರಾಯ ಸ್ಥಿತಿಯಲ್ಲಿದ್ದ ವಿಜಯನಗರವು ಅವರ ಆಳ್ವಿಕೆಯ ಕೊನೆಯ ಕಾಲದಲ್ಲಿ ಹಾಳಾಯಿತು. ಹಾಳು ಹಂಪಿ ಎಂದು ಕರೆಸಿಕೊಂಡ ವಿಜಯನಗರದ ಭಾಗವು, ಇಂದಿಗೂ ದೇಶೀ ಮತ್ತು ವಿದೇಶೀ ಸಂಶೋಧಕರನ್ನು ಮಾತ್ರವಲ್ಲದೆ, ಪ್ರವಾಸಿಗರನ್ನು ಆಕರ್ಷಿಸುತ್ತಿದೆ. ಪ್ರವಾಸಿಗರ ಕಾರಣದಿಂದ ವ್ಯಾಪಾರೀಕರಣಕ್ಕೂ ಒಳಗಾಗಿರುವ ಹಂಪಿಯು ಹಲವು ಸಂಘರ್ಷಗಳಿಗೂ ಕಾರಣವಾಗಿದೆ. ಪ್ರವಾಸಿಗರಿಗೆ ಬೇಕೆನಿಸುವ ಏನೆಲ್ಲವನ್ನೂ ಸರಬರಾಜು ಮಾಡುವ ವ್ಯವಸ್ಥೆ ಬಲವಾಗಿದ್ದು, ಅದು ಸ್ಥಳದ ನೈತಿಕತೆಯನ್ನು ಹಾಳುಗೆಡವಿದೆ ಎಂಬ ದೂರೂ ಹೊಸದಲ್ಲ.

ಹಂಪಿಯಲ್ಲಿ ವಾಣಿಜ್ಯೀಕರಣ ಮತ್ತು ನೈತಿಕ ವಿಚಾರಗಳ ಸಮಸ್ಯೆ ಮಾತ್ರವಲ್ಲದೆ, ಇತ್ತೀಚೆಗೆ ಧಾರ್ಮಿಕ ಸಮಸ್ಯೆಯೂ ಅಧಿಕಗೊಳ್ಳುತ್ತಿರುವುದು ಗುಟ್ಟಿನ ವಿಚಾರವೇನಲ್ಲ. ಧಾರ್ಮಿಕ ಆಚರಣೆಗಳ ಮೂಲಕ ತಮ್ಮ ದೊಡ್ಡಸ್ತಿಕೆಯನ್ನು ಮೆರೆಸುವ ಕೆಲವರು ಹಂಪಿಯನ್ನು ತಮ್ಮ ಉದ್ದೇಶದ ಈಡೇರಿಕೆಗೆ ಬಳಸಿಕೊಳ್ಳುವ ಅಥವಾ ವಿರೋಧಿಸುವ ಕೆಲಸ ನಡೆಯುತ್ತಿದೆ. ಇದರಿಂದ ಆಗುತ್ತಿರುವ, ಒಳ್ಳೆಯದು ಎಂದು ದಾಖಲಿಸಬಹುದಾದ ಪ್ರಯೋಜನವೇನು ಎಂಬ ಪ್ರಶ್ನೆಗೆ ಉತ್ತರ ತಮ್ಮ ಅವರವರ ದೊಡ್ಡಸ್ತಿಕೆಯ ಮೆರವಣಿಗೆ ಎಂದಷ್ಟೇ ಹೇಳಬಹುದು.

ಈಗ ವಿಶಾಲವಾಗಿ ಹರಡಿಕೊಂಡಿರುವ ಹಾಳು ಹಂಪಿಯು, ಹಿಂದೆ ಅಷ್ಟೇ ವಿಶಾಲವಾದ ನಗರವಾಗಿತ್ತು. ಅಲ್ಲಿ ಎಲ್ಲ ವರ್ಗದ, ಮತ–ಧರ್ಮಗಳ ಜನ ವಾಸಿಸುತ್ತಿದ್ದರು. ಹಂಪಿಯಲ್ಲಿ ಈಗ ಮುಸ್ಲಿಮರ ನೆಲೆ ಎಂದು ಗುರುತಿಸುವ ಪ್ರದೇಶವು ವಿಜಯನಗರದ ಕಾಲದಲ್ಲಿ ಮುಸಲ್ಮಾನ್ ಕುಟುಂಬಗಳ ವಾಸಸ್ಥಾನವಾಗಿತ್ತು. ಆದ್ದರಿಂದಲೇ ಅಲ್ಲಿ ಹಲವು ಗೋರಿಗಳಿವೆ. ಈ ಗೋರಿಗಳು ಸಂತರದೇ ಅಥವಾ ಬೇರೆ ಯಾರಾದರೂ ಸಾಮಾನ್ಯರದೇ ಎಂದು ಖಚಿತವಾಗಿ ಹೇಳಲು ದಾಖಲೆಗಳಿಲ್ಲ. ಒಬ್ಬ ಮುಸಲ್ಮಾನ್ ವ್ಯಕ್ತಿಯು ಬಾವಿಯನ್ನು ದಾನವಾಗಿ ನೀಡಿದ, ಹಿಂದೂಗಳಿಬ್ಬರು ಮೀಯಾರಾಹುತನಿಗೆ ಒಳ್ಳೆಯದಾಗಲಿ ಎಂದು ಮಸೀದಿ, ಗುಮ್ಮಟ ಮತ್ತು ಗೋಡೆಯನ್ನು ಕಟ್ಟಿಸಿದರು. ದೇವರಾಯ ಮಹಾರಾಯನಿಗೆ ಧರ್ಮವಾಗಲಿ ಎಂದು ಕಟಿಗೆಯ ಅಹಮದ್‌ಖಾನ್ ಎಂಬುವವನು ಧರ್ಮಶಾಲೆ ಕಟ್ಟಿಸಿದ, ದಾದನ ರಾಹುತನ ಮಗ ಸಖಲಾದಿರಾಹುತ ಎಂಬುವವನು ಗುಮ್ಮಟವನ್ನು ಕಟ್ಟಿಸಿದ, ಇತ್ಯಾದಿ ಮಾಹಿತಿಯ ಶಾಸನಗಳಿವೆ. ಇಸ್ಲಾಂ ಧರ್ಮೀಯರ ಶಾಸನಗಳ ಅಂತ್ಯದಲ್ಲಿ ಇರುವ ಶಾಪಾಶಯಗಳು ಇಸ್ಲಾಂ ಧರ್ಮಕ್ಕೆ ಸಂಬಂಧಿಸಿದ ಶಾಪಾಶಯಗಳನ್ನೇ ಹೊಂದಿವೆ. ಸಖಲಾದಿರಾಹುತ ಕಟ್ಟಿಸಿದ ಗುಮ್ಮಟದ ಪ್ರಸ್ತಾಪ ಇರುವ ಬಂಡೆಯ ಮೇಲ್ಭಾಗದಲ್ಲಿ, ಹನುಮನದು ಎಂದು ಹೇಳಲಾಗುವ ಪಾದಗಳ ಕೆತ್ತನೆ ಇದೆ. ಈ ಬಂಡೆಯ ಕೆಳಗಿರುವ ಗೋರಿಯು ಈಗ ಬಣ್ಣ ಬಳಿದುಕೊಂಡು ಪೂಜಾರ್ಹವಾಗಿದೆ. ಕೆಲವು ದಿನಗಳಿಂದು, ಭೂತ/ಪ್ರೇತಗಳ ಕಾಟಕ್ಕೆ ಗುರಿಯಾದವರು ಎನ್ನಲಾದವರ ಮೈಮೇಲೆ ಆವಾಹನೆಗೊಂಡಿದೆ ಎಂದು ತಿಳಿಯಲಾದ ಭೂತ/ಪ್ರೇತವನ್ನು ಬಿಡಿಸುವ ಕಾರ್ಯ ಆಗುತ್ತದಂತೆ. ಹಿಡಿದ ಭೂತ/ಪ್ರೇತಗಳಿಂದ ಬಿಡುಗಡೆ ಆದವರ ವಸ್ತ್ರಗಳನ್ನು ಬಾವಿಯ ಬಳಿ ವಿಸರ್ಜಿಸಲಾಗುತ್ತದಂತೆ. ನಾವು ಅಲ್ಲಿಗೆ ಹೋಗಿದ್ದಾಗ ಅಲ್ಲಿ ಹಲವು ಹಳೆಯ ಸೀರೆಗಳನ್ನು ಕಂಡೆವು. ಎಷ್ಟು ವರ್ಷಗಳಿಂದ ಅಲ್ಲಿ ಸಂತರ ಹೆಸರಿನಲ್ಲಿ ಉರುಸ್ ನಡೆಯುತ್ತದೆ ಎಂದು ಖಚಿತವಾಗಿ ಹೇಳುವವರು ಇಲ್ಲ. ಉರುಸ್ ಆಚರಣೆಯ ಸಂದರ್ಭದಲ್ಲಿ ತಮ್ಮ ಕೆಲವು (ಬಹು ಮುಖ್ಯವಾಗಿ ಕುಳಿತುಕೊಳ್ಳಲು) ಅನುಕೂಲಗಳಿಗೋಸ್ಕರ ಕಲ್ಲುಗಳನ್ನು ಗುಡ್ಡೆ ಮಾಡಲಾಗಿದೆ. ಎಲ್ಲೆಂದರಲ್ಲಿ ಕಲ್ಲುಗಳನ್ನು ಜೋಡಿಸಿ ಒಲೆಗಳನ್ನು ಮಾಡಿಕೊಂಡು ಅಡುಗೆ ಮಾಡಿರುವ ಗುರುತುಗಳಿವೆ. ಆ ಸ್ಥಳದಲ್ಲೇ ಇದ್ದ ವಸ್ತುಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಬಹಳ ಹಿಂದಿನಿಂದಲೂ ಈ ಸ್ಥಳದಲ್ಲಿ ಉರುಸ್ ನಡೆಯುತ್ತಿದ್ದರೆ, ಅದನ್ನು ಒಪ್ಪಿಕೊಳ್ಳಲೇಬೇಕಾಗುತ್ತದೆ. ಹೊಸದಾಗಿ ಉರುಸ್ ಆಚರಣೆ ಆರಂಭವಾಗಿದ್ದರೆ, ಅದಕ್ಕೆ ಕಾರಣಗಳು ಬೇಕಾಗುತ್ತವೆ. ಸಂತನದೆಂದು ನಂಬಲಾದ ಸಮಾಧಿಯ ಪಾವಿತ್ರ್ಯ ಉಳಿಯಬೇಕಾದರೆ, ಅಲ್ಲಿ ಭೂತ/ಪ್ರೇತಗಳ ಕಾಟದಿಂದ ಬಿಡುಗಡೆ, ವಸ್ತ್ರಗಳ ವಿಸರ್ಜನೆ ಇತ್ಯಾದಿ ಅವೈಜ್ಞಾನಿಕ ಹಾಗೂ ಅಮಾನವೀಯ ಆಚರಣೆಗಳು ನಿಲ್ಲಬೇಕು. ಸಮಾಧಿಯು ಸಂತನದಾದರೆ, ಆ ಸಂತನ ನೆನಪು ನಿರಂತರ ಉಳಿಯುವ ಪ್ರಯತ್ನಗಳು ಆಗಬೇಕು. ಹಿಂದಿನ ಒಬ್ಬ ಸಂತನ ನೆನಪು ಇಂದಿನ ದಾರಿದೀಪವಾಗಬೇಕು. ಆ ನೆನಪು ಜನತೆಯ ನೆಮ್ಮದಿಗೆ ಭಂಗ ತಂದರೆ, ಅದು ಆ ಸಂತನಿಗೆ ನಾವು ಮಾಡಿದ ಅವಮಾನ ಎಂದು ಒಪ್ಪಿಕೊಳ್ಳಬೇಕು. ಹೊಸದಾಗಿ ಯಾವುದೇ ಆಚರಣೆಯನ್ನು ಆರಂಭಿಸುವ ಮುನ್ನ ಅದರ ಸಾಧಕ-ಬಾಧಕಗಳನ್ನು ವಿವೇಚಿಸಬೇಕಾದ್ದು ಪ್ರಜ್ಞಾವಂತರ ಕರ್ತವ್ಯ. ದೊಡ್ಡಸ್ತಿಕೆಯ ಪ್ರದರ್ಶನಕ್ಕಾಗಿ ಯಾವುದೇ ಹೊಸ ಮತ್ತು ಅರ್ಥಹೀನ ಹಾಗೂ ಸಮಾಜದ ನೆಮ್ಮದಿಗೆ ಭಂಗ ತರುವಂತಹ ಆಚರಣೆಗಳು ಸರಿಯಲ್ಲ. ಈ ಪ್ರದೇಶವನ್ನು ಸ್ಥಳೀಯರು ಹನುಮಪಾದ ಬೆಟ್ಟ ಮತ್ತು ದಾದಾ ಪಹಾಡ್ ಎಂಬ ಎರಡು ಹೆಸರುಗಳಿಂದಲೂ ಗುರುತಿಸುವುದರಲ್ಲೇ ಸಮನ್ವಯ ಇರುವುದನ್ನು ಕಾಣಬಹುದು.

ಪ್ರಕಟವಾಗಿರುವ ಕರಪತ್ರಗಳ ಮೂಲಕ ತಿಳಿಯುವ ಮಾಹಿತಿಯಂತೆ, ಬಾಳೆಯ ತೋಟವೊಂದರಲ್ಲಿ ಬಗ್ದಾದಿ ಸಯ್ಯದ್ ಷಾ ದಾವಲ್ ಮಲ್ಲಿಕ್ ಎಂಬ ಸಂತನ ಸಮಾಧಿ ಇದೆ ಎಂಬ ನಂಬಿಕೆಯಿಂದ, ೧೯೯೪ರಿಂದ ಪ್ರತಿವರ್ಷ ಉರುಸ್ ನಡೆಯುತ್ತದೆ. ಅಲ್ಲಿ ಇರುವ ಮಂಟಪದ ಹಿಂಬದಿಯಲ್ಲಿ ರಾಶಿ ರಾಶಿ ನಾಗರಕಲ್ಲುಗಳಿವೆ. ಮೊದಲಿನಿಂದಲೂ ನಾಗರಕಲ್ಲುಗಳಿದ್ದ ಈ ಮಂಟಪಗಳನ್ನು ಕೆಲವು ವರ್ಷಗಳಿಂದ ಉರುಸ್ ಆಚರಣೆಗೆ ಬಳಸುತ್ತಿರುವುದು ಎಲ್ಲರಿಗೂ ತಿಳಿದ ವಿಷಯ. ಈ ಹೊಸ ಆಚರಣೆಯಿಂದ ಆಸುಪಾಸಿನ ಜನತೆಗೆ ಆಗಿರುವ ಉಪಕಾರ ಅಥವಾ ಅನುಕೂಲ ಏನು ಎಂದು ಯಾರಾದರೂ ಪ್ರಶ್ನಿಸಲು ಅವಕಾಶಗಳಿವೆ.

ಹಂಪಿಯಲ್ಲಿ ಸಾಮಾನ್ಯವಾಗಿ ಸಾಹಿತಿಗಳು, ಸಾಹಿತ್ಯಾಭಿಮಾನಿಗಳನ್ನು ಆಕರ್ಷಿಸುವ ಸ್ಥಳ ಎಂದರೆ ಪುರಂದರ ಮಂಟಪ. ಇಲ್ಲಿ ಪುರಂದರದಾಸರು ಕುಳಿತು ಹಾಡುತ್ತಿದ್ದರು; ತಮ್ಮ ಪದಗಳ ರಚನೆ ಮಾಡುತ್ತಿದ್ದರು ಎಂದು ನಂಬಲಾಗಿದೆ. ಇದೂ ಸಹ ಯಾವುದೇ ಸಮಕಾಲೀನ ಐತಿಹಾಸಿಕ ದಾಖಲೆಗಳಿಲ್ಲದ ಒಂದು ಊಹೆ. ಕೇವಲ ಒಂದು ನಂಬಿಕೆ. ಇಲ್ಲಿರುವ ಪುರಂದರರದು ಎಂದು ಹೇಳಲಾಗುವ ಶಿಲ್ಪವೂ ಸಹ ಅವರ ಕಾಲದ್ದಲ್ಲ. ಇದೂ ಸಹ ಎಲ್ಲರಿಗೂ ತಿಳಿದಿರುವ ಸತ್ಯ. ಆ ಮಂಟಪದಲ್ಲಿ ಪುರಂದರರು ಕುಳಿತಿದ್ದರೋ, ಇಲ್ಲವೋ ತಿಳಿದಿಲ್ಲ. ಪುರಂದರರಿಂದಾಗಿ ಮಂಟಪಕ್ಕೆ ಮಹತ್ವ ಬಂದಿದೆ. ಈ ಮಂಟಪದ ಹಿಂಭಾಗಕ್ಕೆ, ವಿಠ್ಠಲ ದೇವಾಲಯಕ್ಕೆ ಹೊಂದಿಕೊಂಡ ಪ್ರದೇಶದಲ್ಲಿ ಒಂದು ಮಂಟಪದ ಮುಂದೆ, ಒಂದು ಕಟ್ಟೆ. ಆ ಕಟ್ಟೆಯ ಮೇಲೆ ಕಂಬವೊಂದರ ಬುಡದ ಭಾಗವನ್ನು ಇಡಲಾಗಿದೆ. ಅದಕ್ಕೆ ಹಸಿರು ಬಟ್ಟೆಯ ಹೊದಿಕೆ ಇದೆ. ಅದನ್ನು ಹೊನ್ನೂರು ಸ್ವಾಮಿಯ ದರ್ಗಾ ಎನ್ನುತ್ತಾರೆ. ಹೊನ್ನೂರು ಸ್ವಾಮಿ ಮುಸ್ಲಿಂ ಸಂತನೆಂಬ ನಂಬಿಕೆ. ಅಲ್ಲಿರುವ ಸಮಾಧಿಯ ಬಳಿಯೂ ವರ್ಷಕ್ಕೊಮ್ಮೆ ಉರುಸ್ ನಡೆಯುತ್ತದೆ. ಹಂಪೆಗೆ ಆಗಾಗ್ಗೆ ಹೋಗಿಬರುವ ಜನರಿಗೆ ತಿಳಿದಂತೆ, ಕೆಲವು

೪೭ನೇ ಪುಟಕ್ಕೆ

# ನೆರಳು

## [ಜನಪದ ಮೂಲದಿಂದ]



ಅಶೋಕವನದಲ್ಲಿ ತಲೆತಗ್ಗಿಸಿ ಕುಳಿತಿದ್ದಾಳೆ ಸೀತೆ,
ನಾಚಿಕೆಯಿಂದಲ್ಲ,
ತಲೆತುಂಬ ಘನೀಭವಿಸಿದ ಅವ್ಯಕ್ತ ಸಂವೇದನಾ ಭಾರ
ಮನದ ತುಂಬ ಪ್ರಿಯಜನಕನ ಕೈಯ ಶೀತಲಸ್ಪರ್ಶ
ಭೂತಾಯಿಯ ಮೇಲೆ ಚಲಿಸುತ್ತಿರುವ ನೆರಳುಗಳು
ಎಲೆಗತ್ತಿಗಳಿಂದ ತುಂಡಾಗಿ ಪ್ರಸರಿಸುತ್ತಿರುವ ಸಂಜೆ ಕೆಂಬಣ್ಣ.

ಹುಟ್ಟಿದ ದಿನದಿಂದ ಪ್ರವಾಸ
ಮಣ್ಣಲ್ಲಿ ಸೇರುವ ತನಕ ಮನಸ್ತಾಪ.
ಹತ್ತಡಿಯ ದೂರದಲ್ಲಿ ನಿಂತ ಪಾದಗಳು
ಹತ್ತು ತಲೆಗಳನ್ನು ಹೊತ್ತಿರುವುದು ಅರಿವಾದಾಗ
ಜಾನಕಿಯ ಜೀವಧಾರೆಯಲ್ಲಿ ತರಂಗ ಸಂಚಲನ
ಕಣಕಣದಲ್ಲೂ ಪ್ರಕಂಪನಗಳ ಸಂಕೇತ.

ರಾವಣ ಹೇಳುತ್ತಾನೆ :
"ರಾಮಾಮಣೀ ! ನಿನ್ನ ರಾಮನು ಮಾತ್ರವಲ್ಲ
ದಶದಿಶೆಗಳಲ್ಲೂ ಈ ದಶಕಂಠನನ್ನು ಗೆಲ್ಲುವವನಿಲ್ಲ
ಪ್ರಣಯದಲ್ಲಾದರೂ ಸರಿ ಸಮರದಲ್ಲಾದರೂ ಸರಿ."

ಸೂಜಿಯಂತೆ ಚುಚ್ಚಿದ ಮಾತಿನಿಂದ
ಮಹಿಳೆಯ ಮೌನಮುದ್ರೆ ಸಿಡಿಯಿತು
ಜ್ವಲಿತಮಾನಸ ಮಾತನ್ನು ಹದಮಾಡಿತು :
"ಅಸುರ ಸಂಧ್ಯೆಯ ಸಮಯ ಅಸಂಬದ್ಧ ವಚನ ಸಾಕು
ನಂಬಿಕೆ ಚೂರುಚೂರಾದಾಗ ನಿಜವೇ ಕೆಂಡದ ಕಿಡಿಯಾಗಿ
ಉದ್ದಗಲಕ್ಕೂ ಉರಿದುಹೋಗುತ್ತದೆ
ಮಹಿಳೆಯ ಮನವರಿಯಲು ಇಪ್ಪತ್ತು ಕಣ್ಣುಗಳು ಬೇಕಿಲ್ಲ
ಮೂಲಶೋಧನೆ ಮಾಡಬಲ್ಲ ಒಂದೇ ಮನಸ್ಸು ಸಾಕು
ಈ ಮಣ್ಣನ್ನು ಮುಟ್ಟಿದಾಗಲೇ ತಿಳಿಯಿತು ಇದೇ ನನ್ನ ತವರೆಂದು
ಮೌನಧ್ಯಾನದಿಂದಲೇ ತಿಳಿಯಿತು ನೀನೇ ನನ್ನ ತಂದೆಯೆಂದು
ವಯಸ್ಸಿನ ಅಂತರದಿಂದಾದರೂ ನಿನಗೇಕಪ್ಪ ಅರ್ಥವಾಗಿಲ್ಲ
ಈ ಮಹಿಳೆ ನಿನ್ನ ಮಗಳೆಂದು !
ಹತ್ತು ತಲೆಗಳ ತುಂಬ ಅಹಂಕಾರವೇ ಹೊರತು
ಹತ್ತು ಜನರ ಮಾತು ನಿನ್ನ ತಲೆಗೆ ಹತ್ತುವುದಿಲ್ಲವೇ ?
ವಿಭೀಷಣ ತಿರಸ್ಕಾರ ನಿನಗೆ ವಿಜ್ಞತೆಯನ್ನು ಕಲಿಸಿಲ್ಲ
ಮೂರು ಜಡೆಯ ರಕ್ಕಸಿಗೂ ಆಶಯಗಳ ಕನಸು
ತ್ರಿಕಾಲಜ್ಞಾನಿ ಎಂದುಕೊಂಡಿರುವ ನಿನಗೆ
ತ್ರಿಜಟೆಗಿರುವಷ್ಟು ಜ್ಞಾನ ಇಲ್ಲವಲ್ಲ!
ನಂಬಿಕೆಯ ಬುನಾದಿಯೇ ಇಲ್ಲದ ಈ ಪುರುಷ ಸಮಾಜದಲ್ಲಿ
ನನಗೆ ಅಗ್ನಿಪರೀಕ್ಷೆಯಂತು ಇದ್ದೇ ಇದೆ
ಕೊನೆಗೆ ಮಣ್ಣಾಗುವುದಂತು ಗೊತ್ತೇ ಇದೆ
ನಾನೇ ಮುದ್ದಿನ ಮಗುವಾಗಿ ನಿನ್ನ ಅಮೃತ ಕಲಶವಾದಲ್ಲಿ
ನಿಲ್ಲುವುದು ದಿಟ ನಿನಗೆ ಪ್ರಾಣಶಕ್ತಿ
ಮಹಿಳೆಯಾಗಿ ನನಗೂ ವಿಮುಕ್ತಿ."

ಡಾ|| ಆರ್ಷಿಯಸ್ ಸುಂದರಂ
ಪ್ರಾಧ್ಯಾಪಕ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು - ೫೭೦ ೦೦೬

# ಇಂದಿನ ಇಂಗ್ಲಿಷ್ ಕಲಿಕೆಗೆ ಆಂಗ್ಲರ ಕಾಲದ ಕಾನ್ವೆಂಟುಗಳೇ ಬೇಕಿತ್ತೇ ?

ನಾವು ಒಂದು ತಪ್ಪು ಕಲ್ಪನೆಯಿಂದಾಗಿ, ಅವಸರ ಪಟ್ಟು ಒಂದು ಬಗೆಯ ಗುಲಾಮಗಿರಿಯನ್ನು ಸ್ವಾಗತಿಸಿದಂತಾಗಿದೆ. ನಮ್ಮ ಮಕ್ಕಳಿಗೆ ಇಂಗ್ಲಿಷ್ ಜ್ಞಾನ ನೀಡಲು ಬಯಸಿದ್ದು ಸರಿಯೆ. ಆದರೆ ಅದಕ್ಕಾಗಿ ಅಂದು ಆಂಗ್ಲರು ನಡೆಸುತ್ತಿದ್ದ ಕಾನ್ವೆಂಟ್ ಶಾಲೆಗಳ ಮಾದರಿಯನ್ನು ಮೊರೆಹೊಕ್ಕದ್ದು ಎಳ್ಳಷ್ಟೂ ಸಮಂಜಸ ಕ್ರಮವಾಗಿರಲಿಲ್ಲ.

೧. ನಮ್ಮ ಹವಾಮಾನಕ್ಕೆ ಒಗ್ಗದ ಬೂಟು ಮತ್ತು ಕಾಲು ಚೀಲದ ಸಂಸ್ಕೃತಿ ನಮಗೆಲ್ಲಿ ಬೇಕಾಗಿತ್ತು? ಅದು ಬ್ರಿಟಿಷರು ತಮ್ಮ ಶಾಲೆ ಉನ್ನತಮಟ್ಟದ್ದು ಎಂದು ಬಿಂಬಿಸುವ ಸಲುವಾಗಿ ಅನುಸರಿಸಿದ ಕ್ರಮ. ಬ್ರಿಟಿಷರು ತೊಲಗಿದ ಬಳಿಕ ಅದು ಅನಾವಶ್ಯಕ. ನಾವೀಗ ಅದನ್ನು ಮುಂದುವರಿಸುವುದರ ಅಗತ್ಯ ಇಲ್ಲವೇ ಇಲ್ಲ.

೨. ಈ ಶಾಲೆಗಳಲ್ಲಿಯ ಇನ್ನೊಂದು ಅಧ್ವಾನವನ್ನು ಗಮನಿಸಿದ್ದೀರಾ ? ಇನ್ನೂ ಶಿಶುವಿಹಾರದ ಪಾಠಗಳಲ್ಲಿಯೇ ರನ್ನಿಂಗ್ ಹ್ಯಾಂಡ್ ಎಂದು ತುರುಕುತ್ತಾರೆ. ವೈಜ್ಞಾನಿಕ ವಿಶ್ಲೇಷಣೆಯ ಪ್ರಕಾರ ಈ ಬರಹಪದ್ಧತಿ ಸಾಕಷ್ಟು ಪ್ರಬುದ್ಧನಾದ ಬಳಿಕ ಅವನ ಸಮಯ ಉಳಿತಾಯದ ಅಗತ್ಯಕ್ಕೆಂದು ರೂಪಿಸಿದ ಲಿಪಿ. ಕಂದಮ್ಮಗಳಿಗೆ ಅದನ್ನು ಬೋಧಿಸುವ ಅಗತ್ಯ ಎಳ್ಳಷ್ಟೂ ಇಲ್ಲ. ಅಲ್ಲದೆ ಅವರು ಓದುವ ಪುಸ್ತಕದ ಲಿಪಿ ಬೇರೆ, ಬರೆಯುವ ಲಿಪಿ ಬೇರೆ. ಇದು ಎಳೆಯ ಮಕ್ಕಳಿಗೆ ಬೋಧಿಸುವ ಕ್ರಮವೇ? ಇದು ಸರಿಯಲ್ಲವೆಂದು ಆಡಳಿತ ವರ್ಗಕ್ಕೆ ಹೇಳಲು ಹೋದರೆ ವಿದೇಶದಲ್ಲಿಯ ಶಿಕ್ಷಣ ಪದ್ಧತಿಯ ಉದಾಹರಣೆ ಕೊಡಲು ನೋಡುತ್ತಾರೆ. ಅಲ್ಲಿಯ ಮಕ್ಕಳಿಗೆ ರೋಮನ್ ಲಿಪಿ ಮಾತ್ರ ಕಲಿತರೆ ಸಾಕು. ಇಲ್ಲಿ ನಮ್ಮ ಮಕ್ಕಳಿಗೆ ಸ್ಥಳೀಯ ಭಾಷೆ ಎಂದು ಕನ್ನಡ ಲಿಪಿ, ಹಿಂದಿ ಅಥವಾ ಸಂಸ್ಕೃತ ಎಂದು ದೇವನಾಗರಿ ಲಿಪಿ ಮತ್ತೆ ಈ ರೋಮನ್ ಲಿಪಿ, ಇಷ್ಟನ್ನು ಶಿಶುವಿಹಾರದ ಮಟ್ಟದಲ್ಲಿ ಕಲಿಸುವುದು ಎಷ್ಟರಮಟ್ಟಿಗೆ ವೈಜ್ಞಾನಿಕ ? ಪಠ್ಯಕ್ರಮ ನಿರೂಪಣೆಯ ಹೊಣೆ ಹೊತ್ತವರು ಇಂತಹ ಕ್ರಮಕ್ಕೆ ಹೇಗೆ ಅನುಮತಿ ನೀಡುತ್ತಿದ್ದಾರೆ ?

೩. ಸ್ವಾತಂತ್ರ್ಯಾನಂತರ ಜೀವನದ ಮಟ್ಟ ಸುಧಾರಿಸಿದ್ದು ಒಂದುಕಡೆ, ಕನ್ನಡಶಾಲೆಗಳ ಆಡಳಿತ ಸರಕಾರದ ಗುತ್ತಿಗೆಯಾಗಿ ಉಳಿದು ಅಲ್ಲಿ ಗುಣಮಟ್ಟ ತೀರ ಕೆಳಗಿನ ಮಟ್ಟಕ್ಕೆ ಕುಸಿಯತೊಡಗಿದ್ದುದು ಇನ್ನೊಂದು ಕಡೆ. ಇಂತಹದರಲ್ಲಿ ತಮ್ಮ ಮಕ್ಕಳನ್ನು, ಸ್ವಲ್ಪ ಹೆಚ್ಚಿಗೆ ವೆಚ್ಚ ಭರಿಸಬೇಕಾಗಿ ಬಂದರೂ, ಒಳ್ಳೆಯ ಶಾಲೆಗಳಿಗೆ ಕಳಿಸಬೇಕೆಂದು ಹೆತ್ತವರು ಬಯಸಿದ್ದು ತಪ್ಪೇನಲ್ಲ. ಆದರೆ ಇಷ್ಟೊಂದು ವಿಪರೀತ ವೆಚ್ಚಕ್ಕೆ ಅವರು ಬಲಿಯಾಗಬೇಕಿರಲಿಲ್ಲ.

೪. ಜನಸೇವೆಗೆ ತಾವು ಇಳಿದಿರುವುದಾಗಿ ಹೇಳಿಕೊಳ್ಳುವ ಶಾಸಕರು ಕನಿಷ್ಠ ಪಕ್ಷ ತಮ್ಮ ಗುತ್ತಿಗೆಯ ನೀತಿಯನ್ನು ಸಡಿಲಿಸಿ, ಖಾಸಗಿ ಕನ್ನಡ ಶಾಲೆಗಳನ್ನು ತೆರೆಯಲು ಒಪ್ಪಿಗೆ ಕೊಟ್ಟಿದ್ದರೆ ಎಷ್ಟೋಪಾಲು ಸುಧಾರಣೆಯನ್ನು ಕಾಣಬಹುದಿತ್ತು. ಆಗ ಶಿಕ್ಷಣವೇತ್ತರೆಲ್ಲ ಹೇಳುತ್ತಿರುವಂತೆ ಪ್ರಾರಂಭಿಕ ಶಿಕ್ಷಣ ಕನ್ನಡ ಮಾಧ್ಯಮದಲ್ಲಿಯೇ ನಡೆದು, ಮುಂದೆ ಸ್ವಲ್ಪ ಪ್ರಬುದ್ಧರಾದ ಬಳಿಕ ಆಂಗ್ಲಭಾಷೆಯನ್ನು ಕೈಗೆತ್ತಿಕೊಳ್ಳಬಹುದಿತ್ತು.

೫. ರಾಷ್ಟ್ರೀಯ ನೀತಿಯ ಪ್ರಕಾರ ಅವರು ಹಿಂದಿಯನ್ನು ಕಲಿಯಲು ಶಾಲೆಯಲ್ಲಿ ಕಡ್ಡಾಯಗೊಳಿಸಿದ್ದರೂ ಅದರ ಜೊತೆಜೊತೆಗೆ ಇಂಗ್ಲಿಷಿನ ಕಲಿಸುವಿಕೆಯನ್ನೂ, ಸ್ವಲ್ಪ ಬೇಗನೆ, ಖಾಸಗಿಯಾಗಿ ಪ್ರಾರಂಭಿಸಬಹುದಿತ್ತು.

೬. ಆಗ ಒಣಿಗೆ ಎರಡೆರಡರಂತೆ ತಲೆಯೆತ್ತುತ್ತಿರುವ ಕಂಪ್ಯೂಟರ್ ತರಗತಿಗಳ ತರಹವೇ ''ಮಾತನಾಡುವ, ಇಂಗ್ಲಿಷ್ ಕಲಿಸುವ ತರಗತಿಗಳು'' ತಾವಾಗಿಯೇ ತಲೆಯೆತ್ತುತ್ತಿದ್ದವು. ಅದಲ್ಲದೆ ಅದಕ್ಕೆ ಅವರು ಪಡೆಯುವ ಹಣ ಈಗ ನಾವು ಇಂಗ್ಲಿಷ್ ಮೀಡಿಯಂ ಶಾಲೆಗಳಿಗೆ ಕಕ್ಕುವ ಹಣದ ಹತ್ತರಲ್ಲಿ ಒಂದು ಪಾಲೂ ಆಗಿರುತ್ತಿರಲಿಲ್ಲ, ಅಷ್ಟೇಕೆ ನೂರರಲ್ಲಿ ಒಂದು ಪಾಲೂ ಅಲ್ಲ ಎಂದರೂ ನಡೆದೀತು ! ಅಲ್ಲದೆ ಸಾಯಂಕಾಲ ಹೋಮ್‌ವರ್ಕ್, ಟ್ಯೂಶನ್ನುಗಳ ಹಾವಳಿ ಇರುತ್ತಿರಲಿಲ್ಲ. ಅಂತಹ ತರಗತಿಗಳನ್ನು ನಡೆಸುವವರ ನಡುವೆ ಸ್ಪರ್ಧಾತ್ಮಕ ಪೈಪೋಟಿ ಇರುತ್ತಿತ್ತು. ಹೀಗಾಗಿ ಪಾಲಕರನ್ನು ಗುಲಾಮಗಿರಿಯ ಹೆದರಿಕೆಯಂತೂ ಕಾಡಬೇಕಾಗಿಯೇ ಇರಲಿಲ್ಲ. ಮುಕ್ತ ವಾತಾವರಣದಲ್ಲಿ ಮಕ್ಕಳನ್ನು ಬೆಳೆಸುವುದಕ್ಕೆ ಅವಕಾಶವಿರುತ್ತಿತ್ತು. ಮಿಸ್ಸು ಹೇಳಿದ್ದನ್ನು ಗಿಳಿಪಾಠ ಮಾಡಿ ಸ್ವಂತಿಕೆಯನ್ನು ಅದುಮಿಡುವ ಅನಿಷ್ಟಪದ್ಧತಿಯೂ ಬೆಳೆಯುತ್ತಿರಲಿಲ್ಲ.

ಕಾಲೇಜಿಗೆ ಕಾಲಿಟ್ಟ ಬಳಿಕವಾದರೂ ಅವರಲ್ಲಿ ಸುಪ್ತ ಸ್ಥಿತಿಯಲ್ಲಿದ್ದ ಪ್ರತಿಭೆ ಬೆಳಕಿಗೆ ಬರಲು ಅವಕಾಶ ಮಾಡಿಕೊಡುವಂತಹ ಪಠ್ಯಕ್ರಮವನ್ನು ನಿರೂಪಿಸಿದರೆ ಎಷ್ಟೋ ಸುಧಾರಣೆ ಕಾಣಬಹುದು.

**ಪ್ರೊ॥ ವಿಕ್ರಮ ಕವಲಿ**
೧೭೫೬, ವಿಜಯನಗರ ೨ನೇ ಹಂತ, ಮೈಸೂರು - ೫೭೦ ೦೧೭

*೪೫ನೇ ಪುಟದಿಂದ*

ವರ್ಷಗಳ ಹಿಂದಿನವರೆಗೂ ಅಲ್ಲಿ ಯಾವುದೇ ಸಂತನ ಸಮಾಧಿಯನ್ನು ಗುರುತಿಸಲಾಗಿರಲಿಲ್ಲ. ಅಲ್ಲಿರುವ ಮಂಟಪವೂ ಪ್ರಾಚೀನವಲ್ಲ. ಭಾರತೀಯ ಪುರಾತತ್ವ ಇಲಾಖೆಯ ಎಲ್ಲೆಯ ಗುರುತಿನ ಒಳಗೇ ಇರುವ ಈ ಮಂಟಪಕ್ಕೆ ವಿದ್ಯುತ್ ಸರಬರಾಜಿದೆ. ಬಳಸಿದ ವಿದ್ಯುತ್ ಅಳೆಯಲು ಮೀಟರ್ ಸಹ ಇದೆ. ಆ ಮಂಟಪದ ಸಮೀಪವೇ ಹೊಸದೊಂದು ಸಮಾಧಿ ಅಥವಾ ಸಮಾಧಿಗೆಂದು ಗುಂಡಿ ಅಗೆಯಲಾದ ಗುರುತಿದೆ. ಕಟ್ಟೆಯ ಮೇಲೆ ಇಟ್ಟಿರುವ ಹಸಿರು ಬಟ್ಟೆ ಹೊದಿಸಲಾದ ಕಂಬದ ಬುಡದ ಈರಣ್ಣನ ನೆನಪಿಗಾಗಿ ನಡೆಯುವ ಉರುಸ್‌ನ ಸಂದರ್ಭದಲ್ಲಿ ಸಾಮೂಹಿಕ ಭೋಜನಕ್ಕೆ ಅಡುಗೆ ಮಾಡುವುದು ಪುರಂದರ ಮಂಟಪದ ಒಳಗೆ. ಈರಣ್ಣನ ಗುಡಿಯ ಬಳಿಯೇ ಏಕೆ ಅಡುಗೆ ಮಾಡಬಾರದು ಎಂದು ಮಂಟಪದಲ್ಲಿ ವಾಸಮಾಡುವ ವ್ಯಕ್ತಿಯನ್ನು ಕೇಳಿದರೆ, ಆತ ಕೊಡುವ ಉತ್ತರ ನಗೆ ತರಿಸುತ್ತದೆ. ಈರಣ್ಣನ ದೇವಾಲಯದ ಬಳಿ ಅಡುಗೆ ಮಾಡಿದಾಗ ಬರುವ ಹೊಗೆ ಮತ್ತು ಬೆಂಕಿಯ ಝಳದ ಸಂಪರ್ಕಕ್ಕೆ ಬಂದ ಪುರುಷರ ಪೌರುಷ ನಷ್ಟವಾಗುತ್ತದಂತೆ. ಆದ್ದರಿಂದ ಈರಣ್ಣನ ಗುಡಿಗೆ ಸ್ವಲ್ಪ ದೂರದಲ್ಲಿ, ನೀರಿಗೆ ಸಮೀಪವಾಗಿರುವ ಪುರಂದರ ಮಂಟಪದಲ್ಲಿ ಅಡುಗೆಮಾಡಿ, ಅದನ್ನು ಈರಣ್ಣನ ಗುಡಿಗೆ ಸಾಗಿಸಿ, ಊಟ ಮಾಡಲಾಗುತ್ತದೆ. ಉರುಸ್‌ನ ಸಂದರ್ಭದಲ್ಲಿ ಮಾಡುವ ಅಡುಗೆಗೆ ಮಾಂಸವನ್ನು ಬಳಸಲಾಗುತ್ತದೆ ಎಂಬ ಕಾರಣದಿಂದ ಅದು ಮುಸ್ಲಿಮೇತರ ಸಂಪ್ರದಾಯವಾದಿಗಳಿಗೆ ಅಪ್ರಿಯ. ಈರಣ್ಣನ ಉರುಸ್ ಆಚರಣೆ ಮತ್ತು ಪುರಂದರ ಮಂಟಪದಲ್ಲಿ ಅಡುಗೆ ಮಾಡುವುದಕ್ಕೆ ಹಲವರ ವಿರೋಧ ಇದೆ. ಈ ವಿರೋಧಗಳನ್ನು ಸಮರ್ಥಿಸುವ ಮತ್ತು ಸಮರ್ಥಿಸದ ಜನರೂ ಇದ್ದಾರೆ. ವಾದ-ವಿವಾದಗಳು ಮುಂದುವರಿದಿವೆಯೇ ವಿನಾ, ಸಮಸ್ಯೆಯನ್ನು ಬಗೆಹರಿಸುವ ಕೆಲಸ ನಡೆದಿಲ್ಲ. ಜನರ ನಡುವೆ ಅಪನಂಬಿಕೆ, ಅನುಮಾನ, ದ್ವೇಷಗಳನ್ನು ಬಿತ್ತಿ, ಬೆಳೆದು, ಫಸಲನ್ನು ತಮ್ಮದನ್ನಾಗಿಸಿಕೊಳ್ಳುವ ತಂತ್ರಗಾರಿಕೆಯಷ್ಟೇ ಮುಂದುವರಿದಿದೆ. ಪರಸ್ಪರ ಪ್ರೀತಿ ಮತ್ತು ವಿಶ್ವಾಸವನ್ನು ಬಿತ್ತಿ, ಒಳ್ಳೆಯ ಫಸಲನ್ನು ಪಡೆಯಲು ಯಾರಿಗೂ ಆಸಕ್ತಿ ಇದ್ದಂತಿಲ್ಲ. ಅಂತಹ ಫಸಲು, ತತ್ಕಾಲೀನ ವೈಯಕ್ತಿಕ ಹಿತಾಸಕ್ತಿಗಳಿಗೆ ಮಾರಕವಾಗುತ್ತವೆ. ಆ ಎಚ್ಚರದಿಂದಲೇ, ಯಾರಿಗೂ ಒಳ್ಳೆಯ ಫಸಲು ಬೇಡವಾಗಿದೆ. ಇದು ಇತಿಹಾಸದ ಅಧ್ಯಯನದ ವಿಪರ್ಯಾಸ.

ಪ್ರಾಚೀನವಾದ ಎಲ್ಲ ಒಳ್ಳೆಯದನ್ನೂ ಉಳಿಸಿಕೊಳ್ಳಬೇಕು ಮತ್ತು ಕೆಟ್ಟದ್ದೆಲ್ಲವನ್ನೂ ನಿರಾಕರಿಸಬೇಕು ಎನ್ನುವ ಹೊತ್ತಿನಲ್ಲೇ, ಜನತೆಯ ನೆಮ್ಮದಿಯನ್ನು ಕೆಡಿಸುವ ಮತ್ತು ಹಾಳುಮಾಡುವ ಯಾವುದೇ ಹೊಸ ನಿರ್ಮಾಣ ಮತ್ತು ಆಚರಣೆಯ ಅಗತ್ಯವಿಲ್ಲ ಎಂದು ಹೇಳುವ ನಿಸ್ವಾರ್ಥ ಮಾತುಗಳು ಇತಿಹಾಸದಲ್ಲಿ ದಾಖಲಾಗಬೇಕು. ಸ್ವಾರ್ಥ, ತತ್ಕಾಲೀನ ಅನುಕೂಲ, ಅಧಿಕಾರ, ಪ್ರಚಾರ, ದ್ವೇಷ ಇತ್ಯಾದಿಗಳಿಗೋಸ್ಕರ ನಡೆಯುವ ಯಾವುದೇ ಪ್ರಯತ್ನಗಳು ಇತಿಹಾಸದ ಪುಟಗಳಲ್ಲಿ ದಾಖಲಾಗಿ, ಮುಂದಿನ ಜನಾಂಗ ಅದನ್ನು ಅನುಸರಿಸುವುದಾದರೆ, ಇತಿಹಾಸವು ನಮಗೆ ಕಲಿಸಿದ ಪಾಠ ಏನು ಎಂದು ವಿವೇಕಿಗಳಾದ ಯಾರಾದರೂ ಪ್ರಶ್ನಿಸಲು ಅವಕಾಶ ಇರುತ್ತದೆ.

**ಡಾ॥ ಎಚ್.ಎಸ್. ಗೋಪಾಲ ರಾವ್**
೧೪೪, 'ಸ್ವಸ್ತಿಶ್ರೀ ಸ್ಕಂದ' ಅರಸಿನಕುಂಟೆ, ನೆಲಮಂಗಲ ತಾಲ್ಲೂಕು
ಬೆಂಗಳೂರು ಗ್ರಾಮಾಂತರ ಜಿಲ್ಲೆ - ೫೬೨ ೧೨೩

# ನಾಗರಿಕ ಸಮಾಜದಲ್ಲಿ ಮರಣ ದಂಡನೆ ಅವಶ್ಯಕವೋ ಅಥವಾ ಅನವಶ್ಯಕವೋ ?

## ಒಂದು ಜಿಜ್ಞಾಸೆ



**ಮಾ**ನವನ ಹುಟ್ಟು ಆಕಸ್ಮಿಕವಾದರೆ, ಸಾವು ನಿಶ್ಚಿತ. ಆದರೆ ಬುದ್ಧಿವಂತನಾಗಿ ಬಾಳುವುದು ಐಚ್ಛಿಕ. ಅಂದರೆ ಹುಟ್ಟಿದ್ದು ಯಾವುದೇ ಆದರೂ ಒಂದಲ್ಲ ಒಂದು ದಿವಸ ಅಂತ್ಯವಾಗಲೇಬೇಕು. ಇದು ನಿಸರ್ಗ ಅಥವಾ ಪ್ರಕೃತಿಯ ನಿಯಮ. ಈ ನಿಯಮಕ್ಕೆ ಸ್ವತಃ ಸೃಷ್ಟಿಕರ್ತನೇ ಅವತಾರ ಅಥವಾ ಜನ್ಮವೆತ್ತಿದರೂ ಬದ್ಧನಾಗಿರಬೇಕಾಗುತ್ತದೆ. ಇದಕ್ಕೆ ದೃಷ್ಟಾಂತವಾಗಿ, ಶ್ರೀ ವಾಮನಾವತಾರಾದಿಯಾಗಿ ಕೃಷ್ಣಾವತಾರದವರೆಗೆ ನಾವು ಗಮನಿಸಬಹುದು. ಆದರೆ, ಈ ನಿಸರ್ಗದ ನಿಯಮಕ್ಕೆ ಅಪವಾದವೆನ್ನುವಂತೆ ಕೆಲವು ವ್ಯಕ್ತಿಗಳು ಆತ್ಮಹತ್ಯೆಗೆ ಶರಣಾಗುತ್ತಿರುವುದನ್ನು ದಿನನಿತ್ಯದ ಜೀವನದಲ್ಲಿ ಕೇಳಿದ್ದೇವೆ, ನೋಡಿದ್ದೇವೆ. ಅದೂ ಅಲ್ಲದೆ ಅಪವಾದಕ್ಕೆ ಅಪವಾದ ಎನ್ನುವಂತೆ ಕೆಲವೊಂದು ವಿಶಿಷ್ಟ ಸಂದರ್ಭಗಳಲ್ಲಿ ಯಾವುದೇ ಅಪರಾಧಿಯು ಗುರುತರವಾದ ಅಥವಾ ಗಂಭೀರ ಸ್ವರೂಪದ ಅಪರಾಧ ಎಸಗಿದ್ದಾನೆಂದು ಕಾನೂನು ಹಾಗೂ ಪ್ರಕ್ರಿಯೆಯಡಿ ಸಿದ್ಧಪಡಿಸಿದಲ್ಲಿ ನ್ಯಾಯಾಲಯ ಅಪರಾಧಿಗೆ ಆಜೀವ ಪರ್ಯಂತ ಶಿಕ್ಷೆ ಅಥವಾ ಮರಣ ದಂಡನೆ ಶಿಕ್ಷೆ ವಿಧಿಸಬಹುದು. ಇಂತಹ ಗಂಭೀರ ಸ್ವರೂಪದ ಶಿಕ್ಷೆಯನ್ನು ನ್ಯಾಯಾಲಯ ವಿರಳದಲ್ಲಿ ವಿರಳವಾದ ಅಪರಾಧ ಪ್ರಕರಣಗಳಲ್ಲಿ ಅಪರಾಧಿಗೆ ವಿಧಿಸಬಹುದಾದ ಒಂದು ನ್ಯಾಯಿಕ ಪ್ರಕ್ರಿಯೆ.

ಇಂದು ನಾವು ನಾಗರಿಕ ಸಮಾಜದಲ್ಲಿ ಬದುಕುತ್ತಿದ್ದೇವೆ. ನಾಗರಿಕ ಸಮಾಜವೆಂದರೆ ಸುಶಿಕ್ಷಿತ ಸಮಾಜ ಅಥವಾ ಸಭ್ಯ ಸಮಾಜವೆಂದು ಅರ್ಥೈಸಬಹುದು. ನಾಗರಿಕ ಸಮಾಜವು ಪ್ರಜಾತಂತ್ರವನ್ನು ಅಂಗೀಕರಿಸಿರುತ್ತದೆ. ಪ್ರಜಾತಂತ್ರದಲ್ಲಿ ಪ್ರಜೆಗಳದೆ ಮೇಲುಗೈ. ನಾವು ಕಲ್ಯಾಣ ರಾಜ್ಯದಲ್ಲಿ ಬಾಳುತ್ತಿದ್ದೇವೆ. ಕಲ್ಯಾಣ ರಾಜ್ಯವು ಕೂಡ ನಾಗರಿಕರ ಏಳಿಗೆಗಾಗಿ, ಶಾಂತಿಯಿಂದ ಸಹಜೀವನ ನಿರ್ವಹಿಸಲು, ಸಹಬಾಳ್ವೆ ನಡೆಸಲು ಹಾಗೂ ನೆಮ್ಮದಿಯಿಂದ ಬಾಳಲು ಸಾಕಷ್ಟು ಶಾಸನ ಹಾಗೂ ಕಲ್ಯಾಣ ಶಾಸನಗಳನ್ನು ರೂಪಿಸಿದ್ದಿದೆ. ಇಷ್ಟೆಲ್ಲಾ ಇದ್ದರೂ ನಾಗರಿಕ ಸಮಾಜದಲ್ಲಿ ಮರಣ ದಂಡನೆ ಎಂಬ ಘೋರ ಶಿಕ್ಷೆ ಅಥವಾ 'ಅನಾಗರಿಕ ಕೃತ್ಯ ಅವಶ್ಯಕವೋ ಅಥವಾ ಅನವಶ್ಯಕವೋ' ಎಂಬ ದ್ವೈತ್ಯ ಪ್ರಶ್ನೆ ನಮ್ಮೆಲ್ಲರನ್ನೂ ಕಾಡುತ್ತಿದೆ.

ನಾಗರಿಕತೆ ಬೆಳೆದಂತೆ ತನ್ನದೇ ಆದ ಸಮಸ್ಯೆಗಳು ಬೆಳೆದವು. ಕೆಲವೊಂದು ಸಮಸ್ಯೆಗಳು ವ್ಯಾಜ್ಯಗಳಲ್ಲಿ ಪರ್ಯವಸಾನ ಗೊಂಡವು. ವ್ಯಾಜ್ಯಗಳಲ್ಲಿ ಕೆಲವೊಂದು ಹಗುರವಾದ ಮತ್ತು ಕೆಲವೊಂದು ಗಂಭೀರವಾದ ವ್ಯಾಜ್ಯಗಳು. ವ್ಯಾಜ್ಯಗಳೆಂದ ಮೇಲೆ ಕನಿಷ್ಠ ಎರಡು ಪಕ್ಷದವರಿರುತ್ತಾರೆ. ವ್ಯಾಜ್ಯದಲ್ಲಿ ಒಂದು ಕಡೆ ಪಕ್ಷದವರು ಗೆದ್ದರೆ ಎದುರಾಳಿ ಪಕ್ಷದವರಿಗೆ ಸೋಲುಂಟಾಗುವುದು ಸಹಜ. ಈ ಸೋಲು ಗೆಲವುಗಳ ಘರ್ಷಣೆ ಕೆಲವೊಮ್ಮೆ ಗಂಭೀರ ಸ್ವರೂಪದ ಅಪರಾಧಿಕ ಪ್ರಕರಣಗಳಿಗೆ ಎಡೆಮಾಡುವುದುಂಟು. ಅಂತಹ ಸಂದರ್ಭಗಳಲ್ಲಿ ಮಾನಸಿಕ ಸ್ತಿಮಿತ (ವ್ಯಕ್ತಿಯು ತನ್ನ ವಿವೇಕ ಹಾಗೂ ವಿವೇಚನೆ ಕಳೆದುಕೊಂಡು) ಕಳೆದುಕೊಂಡ ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯ ಕೊಲೆ ಮಾಡಬಹುದು. ಇದೂ ಅಲ್ಲದೆ ಅತಿ ಬಡತನ, ನಿರುದ್ಯೋಗ ಹಾಗೂ ಅನಕ್ಷರತೆ ಮತ್ತು ಜೀವನದಲ್ಲಿಯ ಕಠಿಣ ಸಂದರ್ಭಗಳನ್ನು ಎದುರಿಸದೆ ಸೋತು ಹತಾಶನಾಗಿ ಒಬ್ಬ ವ್ಯಕ್ತಿ ಮತ್ತೊಬ್ಬ ವ್ಯಕ್ತಿಯ ಜೀವಹತ್ಯೆ ಮಾಡಬಹುದು. ಇಂತಹ ಸಂದರ್ಭಗಳಲ್ಲಿ ಮರಣದಂಡನೆ ಅವಶ್ಯಕವೋ ಅಥವಾ ಅನವಶ್ಯಕವೋ ಎಂಬ ಪ್ರಶ್ನೆ ಉದ್ಭವಿಸುವುದು ಸಹಜ ಹಾಗೂ ಅನಿವಾರ್ಯ.

ಅಲೌಕಿಕವಾಗಿ ಅಥವಾ ಪಾರಮಾರ್ಥಿಕವಾಗಿ ವಿಚಾರಮಾಡಿದರೆ ಮರಣದಂಡನೆ ವಿಧಿಸುವುದು ಅವಶ್ಯಕವಲ್ಲ, ನನ್ನ ಅಭಿಪ್ರಾಯದಲ್ಲಿ. ಏಕೆಂದರೆ, ಯಾವುದೇ ವ್ಯಕ್ತಿಯು ಹುಟ್ಟಿನಿಂದ ಅಪರಾಧಿಯಾಗಿರಲಾರ. ಇದು ಹುಟ್ಟಿನಿಂದ ಹಾಗೂ ಜಾತಿಯಿಂದ ಯಾರೂ ಶ್ರೇಷ್ಠರಲ್ಲ ಎಂಬ ಸಿದ್ಧಾಂತಕ್ಕೆ ಅನುಗುಣವಾಗಿದೆ. ಆದರೆ ವ್ಯಕ್ತಿಯು ಸಮಾಜದಲ್ಲಿ ಬೆಳೆದಂತೆ ಸ್ಥಿತಿ, ಪರಿಸ್ಥಿತಿ ಹಾಗೂ ಪ್ರಸಂಗಗಳಿಗನುಸಾರವಾಗಿ ತನ್ನ ಕಾರ್ಯಚಟುವಟಿಕೆಗಳನ್ನು ಅಪರಾಧೀಕರಣ ಗೊಳಿಸಿಕೊಳ್ಳಬಹುದು ಅಥವಾ ಅಪರಾಧೀಕರಣದತ್ತ ವಾಲಬಹುದೇ ಹೊರತು ಹುಟ್ಟಿನಿಂದ ಅಪರಾಧಿಯಾಗಿರಲಾರ. ಅದೂ ಅಲ್ಲದೇ ಅಪರಾಧಿಕ ನ್ಯಾಯಶಾಸ್ತ್ರದಲ್ಲಿ ''ಅಪರಾಧವನ್ನು ತಿರಸ್ಕರಿಸು, ಅಪರಾಧಿಯನ್ನಲ್ಲ'' ಎಂಬ ಸಿದ್ಧಾಂತ ಜನಜನಿತವಾಗಿದೆ. ಸೂಕ್ಷ್ಮವಾಗಿ (ಆಧ್ಯಾತ್ಮಿಕವಾಗಿ) ವಿಚಾರ ಮಾಡಿದರೆ ಈ ಸೃಷ್ಟಿಯಲ್ಲಿ ಪ್ರತಿಯೊಂದು ಜೀವಿ ದೈವಾಂಶದಿಂದ ಕೂಡಿರುತ್ತದೆ. ಕಾರಣ ಅಂತಹ ವ್ಯಕ್ತಿಗಳಿಗೆ ಅಥವಾ ಅವರ ಕಾರ್ಯ ಚಟುವಟಿಕೆಗಳಿಗೆ ಆಧ್ಯಾತ್ಮಿಕ ಚಿಕಿತ್ಸೆ ಅಥವಾ ಮದ್ದು ನೀಡಬೇಕು, ಮದ್ದಾನೆಯನ್ನು ಪಳಗಿಸುವಂತೆ.

ಉದಾಹರಣೆಗೆ, ೧೨ನೇ ಶತಮಾನದಲ್ಲಿ ಮಹಾತ್ಮ ಬಸವಣ್ಣನವರ ಮನೆಗೆ ಕದಿಯಲೆಂದು ಕಳ್ಳನು ಬರಲು ಬಸವಣ್ಣ ನವರು ಬಂದಂತಹ ಕಳ್ಳನಿಗೆ ತೊಂದರೆಯಾದೀತೆಂದು ಭಾವಿಸಿ ತಮ್ಮ ಧರ್ಮಪತ್ನಿಗೆ ಚಿನ್ನದ ಆಭರಣ ಹಾಗೂ ಒಡವೆಗಳನ್ನು ಕೊಡು ಎಂದು ಆಗ್ರಹಿಸಿದರು. ಇಲ್ಲಿ ನಾವು ಸೂಕ್ಷ್ಮವಾಗಿ ಗಮನಿಸಬೇಕಾದದ್ದು ಏನೆಂದರೆ ಕಳ್ಳತನ ಮಾಡಬೇಕೆಂದು ಬಂದ ವ್ಯಕ್ತಿಯಲ್ಲಿ ಇರದಂತಹ ವಸ್ತುವು ತಮ್ಮ ಬಳಿ ಇದ್ದುದನ್ನು ಗಮನಿಸಿ ತಾವೇ ಕಳ್ಳನೆಂದು ಊಹಿಸಿಕೊಂಡು, ಭಾವಿಸಿಕೊಂಡು ಯಾವುದೇ ಶಿಕ್ಷೆಯನ್ನು ಕೊಡದೇ ಆ ವ್ಯಕ್ತಿಯನ್ನು ಕ್ಷಮಿಸುತ್ತಾರೆ. ಆ ಸಮಯದಲ್ಲಿ ಮಹಾತ್ಮ ಬಸವಣ್ಣನವರು, ''ಕಳ್ಳನ ಮನೆಗೆ ಬಲುಗಳ್ಳ ಬರಲು ಕೂಡಲ ಸಂಗಮನಾಥನಲ್ಲದೇ ಬೇರಲ್ಲವಯ್ಯ'' ಎಂಬ ಉದ್ಗಾರ ತೆಗೆದಿರುತ್ತಾರೆ. ಆ ಒಂದು ಪುಟ್ಟ ಘಟನೆ ಅವರನ್ನು ಸಮಾಜದಲ್ಲಿ ಆರ್ಥಿಕ ಶೋಷಣೆ ಹಾಗೂ ಆರ್ಥಿಕ ಅಸಮಾನತೆಯ ವಿರುದ್ಧ ಹೋರಾಡಲು ಪ್ರೇರಣೆ ನೀಡಿದ್ದು ಎಂದರೆ ತಪ್ಪಾಗಲಾರದು. ಕ್ಷಮೆಯೇ ಶಿಕ್ಷೆಯಾಗಿ ಪರಿಣಮಿಸುತ್ತದೆ. ಆ ವ್ಯಕ್ತಿಯು ಮುಂದೆ ಪರಿವರ್ತನೆ ಹೊಂದಿ ಶ್ರೇಷ್ಠ ಶರಣನಾಗಿ ಬಾಳಿ ಬದುಕಿದ್ದುದು ಇತಿಹಾಸ.

ಇನ್ನು ಲೌಕಿಕವಾಗಿ ಅಥವಾ ವ್ಯಾವಹಾರಿಕವಾಗಿ ವಿಚಾರ ಮಾಡಿದರೆ ನಾಗರಿಕ ಸಮಾಜದಲ್ಲಿ ಶಾಂತಿ, ಸಹಬಾಳ್ವೆ ಹಾಗೂ ನೆಮ್ಮದಿ ನೆಲೆಸಲು ಅಪರಾಧಕ್ಕೆ ಅನುಗುಣವಾಗಿ ಅಪರಾಧಿಗೆ ತಕ್ಕ ಶಿಕ್ಷೆ ವಿಧಿಸುವುದು ಕಾನೂನಿನಡಿ ವಿಧಿಸಿದ ಕರ್ತವ್ಯ ಹಾಗೂ ಸಾಮಾಜಿಕ ಜವಾಬ್ದಾರಿ. ಇಲ್ಲವಾದಲ್ಲಿ ಸಮಾಜದಲ್ಲಿ ಅರಾಜಕತೆ ಯುಂಟಾಗಿ ಆಡಳಿತಾತ್ಮಕ ಸಮಸ್ಯೆ ತಲೆದೋರಬಹುದು. ಈ ದಿಸೆಯಲ್ಲಿ ವಿಚಾರ ಮಾಡಿದರೆ ಕೆಲವೊಂದು ವಿಶಿಷ್ಟ ಪ್ರಕರಣಗಳಲ್ಲಿ (ಕೊಲೆ, ದರೋಡೆ, ಮಹಿಳೆ ಮೇಲೆ ಅತ್ಯಾಚಾರ ಹಾಗೂ ಅಂತರ್ಜಾಲ ಅಶ್ಲೀಲತೆ ವಗೈರೆ ವಗೈರೆ) ಮರಣ ದಂಡನೆ ವಿಧಿಸುವುದು ಅವಶ್ಯಕ ವೆನಿಸುತ್ತದೆ ನನ್ನ ಅಭಿಪ್ರಾಯದಲ್ಲಿ. ಆದರೆ ಮರಣ ದಂಡನೆಗಿಂತ ಆಜೀವಪರ್ಯಂತ ಶಿಕ್ಷೆ ನೀಡುವುದು ಒಳಿತು. ಏಕೆಂದರೆ, ಎರಡರ ಉದ್ದೇಶವೂ ಒಂದೇ ಆಗಿರುತ್ತದೆ. ಇದಲ್ಲದೇ ಮುಂದೆ ಯಾವುದಾದರೊಂದು ದಿವಸ ಮರಣ ದಂಡನೆ ವಿಧಿಸಿದ್ದು ತಪ್ಪೆಂದು ಕಂಡುಬಂದಲ್ಲಿ ಆಗಲೇ ಕಳೆದುಹೋದ ಜೀವವನ್ನು ಹಿಂದಕ್ಕೆ ಪಡೆಯುವ ಅವಕಾಶ ಇರುವುದಿಲ್ಲಾ. ಆದರೆ ಆಜೀವಪರ್ಯಂತ ಶಿಕ್ಷೆ ವಿಧಿಸಿದಲ್ಲಿ ಅಂತಹ ವ್ಯಕ್ತಿಯನ್ನು ಶಿಕ್ಷೆಯಿಂದ ಮುಕ್ತಗೊಳಿಸಬಹುದು. ಆದಾಗ್ಯೂ ಸಂಬಂಧಿಸಿದವರು ನಾಗರಿಕ ಸಮಾಜದಲ್ಲಿ ಮರಣ ದಂಡನೆಯನ್ನು ಸರಳವಾಗಿ ಹಾಗೂ ನೋವಿಲ್ಲದಂತೆ ಜಾರಿಗೊಳಿಸುವ ವಿಧಾನದತ್ತ ಅಥವಾ ಪ್ರಕ್ರಿಯೆಯತ್ತ ಗಮನಹರಿಸುವುದು ಒಳಿತು ಎಂಬುದು ನನ್ನ ಆಶಯ.

**ಮಹಾಂತಗೌಡ ಬಿ. ಬಿರಾದಾರ**
೨೪ನೇ ಅಪರ ಲಘುವ್ಯಾಜ್ಯಗಳ ನ್ಯಾಯಾಧೀಶರು,
ಲಘು ವ್ಯಾಜ್ಯಗಳ ನ್ಯಾಯಾಲಯ, ಬೆಂಗಳೂರು

# ಚಿಕ್ಕಮಗಳೂರಿನಲ್ಲಿ ಮೈಸೂರು ಚಲೋ ಚಳುವಳಿ-೧೯೪೭

**ಮೈ**ಸೂರು ಚಲೋ ಚಳುವಳಿಯ ಸಮಗ್ರ ಸಾಹಿತ್ಯ ಇಲ್ಲದಿರುವುದು ಶೋಚನೀಯ. ಜವಾಬ್ದಾರಿ ಸರಕಾರಕ್ಕಾಗಿ, ಮಹಾರಾಜರ ಆಳ್ವಿಕೆಗೆ ವಿರೋಧವಾಗಿ, ಸಂಪೂರ್ಣ ಪ್ರಜಾಸತ್ತೆಗಾಗಿ, ಮೈಸೂರು ಸಂಸ್ಥಾನದ ಜನ ಹೇಗೆ ಅಂತಃಕರಣ ಪೂರಕವಾಗಿ ಬೀದಿಗಿಳಿದು ತಮ್ಮ ಗುರಿ ಸಾಧಿಸಿದರು ಎಂಬುದು ಅತ್ಯಂತ ರೋಚಕವಾದ ರಾಷ್ಟ್ರೀಯತೆಯ ವಿಚಾರ.

ಇಂದಿಗೂ ಮೈನವಿರೇಳಿಸುವ ೧೯೪೭ರ ಸೆಪ್ಟೆಂಬರ್ ಮೊದಲನೆಯ ದಿನ, ಸ್ವಾತಂತ್ರ್ಯ ಗಳಿಸಿ ಪ್ರಥಮ ಸ್ವಾತಂತ್ರ್ಯೋತ್ಸವವನ್ನು ಸಂಭ್ರಮದಿಂದ ಆಚರಿಸಿ ಎರಡು ವಾರಗಳು ಸಂದಿದ್ದವು. ಸಂಸ್ಥಾನಗಳ ರಾಜರುಗಳು ಭಾರತದ ಪ್ರಜೆಗಳಂತೆ ಸ್ವತಂತ್ರರಾಗಿ ಉಳಿದಿದ್ದರು. ಜನಸಾಮಾನ್ಯರೋ ಪ್ರಜಾಪ್ರಭುತ್ವವಾದಿ ಖನಿಗಳಾಗಿದ್ದರು. ಮೈಸೂರು ಸಂಸ್ಥಾನದ ಮಹಾರಾಜರು ಭಾರತದ ಒಕ್ಕೂಟಕ್ಕೆ ಸೇರಲು ಹಿಂದೆ ಮುಂದೆ ನೋಡುತ್ತಿದ್ದ ವಿಷಯ ತಿಳಿದು ಕಾಂಗ್ರೆಸ್ಸು ಚೆಂಗಲರಾಯ ರೆಡ್ಡಿಯವರನ್ನು ಜವಾಬ್ದಾರಿ ಸರ್ಕಾರಕ್ಕಾಗಿ ಚಳುವಳಿ ನಡೆಸಲು ನೇಮಿಸಿತ್ತು. ಚಿಕ್ಕಮಗಳೂರಿನ ಸರ್ಕಾರಿ ಪ್ರೌಢಶಾಲೆಯ ವಿದ್ಯಾರ್ಥಿಗಳಾಗಿದ್ದ ನಾವು ಚಳುವಳಿಗೆ ಧುಮುಕಿದೆವು. ಬೆಳಿಗ್ಗೆ ೧೦.೩೦ ಘಂಟೆಗೆ ವಿದ್ಯಾರ್ಥಿಗಳು ಶಾಲೆಯ ಆವರಣದಲ್ಲಿ ಸೇರಿದ್ದರು. ಕ್ಷಣಮಾತ್ರದಲ್ಲಿ ಆವರಣದ ಮಧ್ಯದಲ್ಲಿದ್ದ ಶ್ರೀಗಂಧದ ಎಳೆಯ ಮರವನ್ನು ಕಾನೂನು ಉಲ್ಲಂಘಿಸುವ ಸಲುವಾಗಿ ಮುರಿದು ಧೂಳೀಪಟ ಮಾಡಿಬಿಟ್ಟರು. ಆ ಕ್ಷಣದಲ್ಲಿ ಜವಾಬ್ದಾರಿ ಸರಕಾರಕ್ಕಾಗಿ ಸಂಸ್ಥಾನಾದ್ಯಂತ ಚಳುವಳಿ ಆರಂಭವಾಗಿದೆ ಎಂಬ ವಿಷಯ ಕಾಳ್ಗಿಚ್ಚಿನಂತೆ ಹಬ್ಬಿಬಿಟ್ಟಿತು. ಇಡೀ ವಿದ್ಯಾರ್ಥಿ ಸಮುದಾಯ ಊರಿನೊಳಗೆ ಮೆರವಣಿಗೆ ಹೊರಡಲು ಶಾಲೆಯ ಆವರಣದ ಮುಖ್ಯದ್ವಾರಕ್ಕೆ ಬರುವಷ್ಟರಲ್ಲಿ ಗೇಟಿಗೆ ಎದುರಾಗಿ ಜಿಲ್ಲಾ ಪೊಲೀಸ್ ಅಧಿಕಾರಿ ಅಡ್ಡಗಟ್ಟಿ ನಿಂತರು. ಇಡೀ ಶಾಲೆಯ ೧೬ರಿಂದ ೧೯ ವರ್ಷದ ಸುಮಾರು ಐನೂರೈವತ್ತು ಮಂದಿಯ ಒಗ್ಗಟ್ಟು ಅಸದೃಶವಾದುದಾಗಿತ್ತು.

ಅಪ್ಪಟ ಸತ್ಯಾಗ್ರಹಿಗಳ ದಂಡು ಮುಂದುಗಡೆ ಪೊಲೀಸ್ ವರಿಷ್ಠಾಧಿಕಾರಿ. ಅವರ ಹಿಂದೆ ಅವರಿಳಿದು ಬಂದ ಕೆಲ ಹುಡುಗರ ಪರಿಚಯಸ್ಥ ಹಳೆಯದಾದ ಕಾರಿನ ಬಡಮಾಲೀಕ ಚಾಲಕ. ಹುಡುಗರೋ ಯಾವುದೇ ಉದ್ವೇಗಕ್ಕೆ ಎಡೆ ಇಲ್ಲದಂತೆ ತಮ್ಮ ಗುರಿ ನಿಶ್ಚಲವಾಗಿರುವಂತೆ ನಿಂತುಕೊಂಡಿದ್ದರು. ಪೊಲೀಸ್ ನಾಯಕರು ಮಾತನಾಡಿ 'ಚಳುವಳಿ ನಡೆಸಿ ಆದರೆ ಯಾವುದೇ ಹಿಂಸೆ ಇಲ್ಲವೇ ಆಸ್ತಿಪಾಸ್ತಿಗಳ ಹಾನಿ ಉಂಟಾಗಬಾರದು. ಹಾಗಾದಾಗ ಪರಿಸ್ಥಿತಿ ನೆಟ್ಟಗಿರುವುದಿಲ್ಲ,' ಎಂದು ಎಚ್ಚರಿಸಿದರು. ಆದರೂ ಒಂದು ಹದಿನೈದು ನಿಮಿಷ ನಮ್ಮನ್ನೆಲ್ಲ ಹಿಡಿದಿಟ್ಟುಕೊಳ್ಳುವಲ್ಲಿ ಅವರು ಯಶಸ್ವಿಯಾದರು. ಆ ಯಶಸ್ವಿಗೆ ನಮ್ಮಲ್ಲಿದ್ದ ಶಿಸ್ತು ಮತ್ತು ಶಾಂತಿಪಾಲನೆಯ ಕಟ್ಟುನಿಟ್ಟು ಆಶಯಗಳೇ ಕಾರಣವಾಗಿತ್ತು. ಅವರ ಮಾತು ಮುಗಿಯುತ್ತಿದ್ದಂತೆಯೇ ನಮ್ಮಲ್ಲೊಬ್ಬ ಧುರೀಣ ರೂಪುಗೊಂಡುಬಿಟ್ಟಿದ್ದ. ಅವನು ಥಟಕ್ಕನೆ ಹೇಳಿದ, 'ನೀವು ನಿಮ್ಮ ಕೆಲಸ ಮಾಡಿ, ನಾವು ನಮ್ಮ ಕೆಲಸ ಮಾಡುತ್ತೇವೆ.' ಆ ಕ್ಷಣದಲ್ಲಿ ರೂಪುಗೊಂಡ ಈ ಧುರೀಣ ಈಶ್ವರಿ, ಪ್ರೌಢಶಾಲೆಯ ಮೂರನೇ ವರ್ಗದ ವಿದ್ಯಾರ್ಥಿ. ಇವನ ಸಕಾಲಿಕ ಪ್ರತಿಸ್ಪಂದನದಿಂದ ವಿದ್ಯಾರ್ಥಿ ಸಮೂಹದಲ್ಲಿ ವಿದ್ಯುತ್ ಸಂಚಲನವಾದಂತಾಗಿತ್ತು. ಪೊಲೀಸರು ನಿರ್ಗಮಿಸಿದರು. ಮುಂದೆ ಸನಿಹದಲ್ಲೇ ಇದ್ದ ಪ್ರಖ್ಯಾತ ಆಜಾದ್ ಪಾರ್ಕ್ ವಿದ್ಯಾರ್ಥಿ ಸತ್ಯಾಗ್ರಹಿಗಳ ಚಳುವಳಿಯ ಆರಂಭಿಕ ಸ್ಥಳವಾಯಿತು. ಅಂಡರೇಖಾಕೃತಿಯ ನಾಲ್ಕು ಮುಖ್ಯರಸ್ತೆಗಳ ಈ ಕೂಡು ಸ್ಥಳದ ಚೌಕದಲ್ಲೇ ಆಗಸ್ಟ್ ೧೪-೧೫ರ ಮಧ್ಯರಾತ್ರಿ ತ್ರಿವರ್ಣಧ್ವಜ ಹಾರಿಸಿ ಮರುದಿನ ಪ್ರಥಮ ಸ್ವಾತಂತ್ರ್ಯೋತ್ಸವವನ್ನು ಆಚರಿಸಲಾಗಿತ್ತು. ಇಲ್ಲಿಂದ ಅಂದಿನ ಪ್ರಥಮ ಮೆರವಣಿಗೆ ಈಶ್ವರಿಯ ನೇತೃತ್ವದಲ್ಲಿ ಊರಿನ ಮುಖ್ಯ ಬೀದಿಗಳಲ್ಲಿ ನಡೆದು ಜವಾಬ್ದಾರಿ ಸರಕಾರದ ಸಾಧನೆಗಾಗಿ ಪ್ರಾರಂಭವಾದ ಚಳುವಳಿಯನ್ನು ಊರಿಗೆಲ್ಲ ಸಾರಲಾಯಿತು. ಏಕಾಏಕಿ ಪ್ರಾರಂಭವಾದಂತಿದ್ದ ಚಳುವಳಿಯಾದರೂ ಅದು ಅತ್ಯಂತ ಶಿಸ್ತುಬದ್ಧವಾಗಿತ್ತು. ಪ್ರತಿಯೊಬ್ಬ ಸತ್ಯಾಗ್ರಹಿಯೂ



ಮೈಸೂರು ಸಂಸ್ಥಾನದ ಮಹಾರಾಜರು ಭಾರತದ ಒಕ್ಕೂಟಕ್ಕೆ ಸೇರಲು ಹಿಂದೆ ಮುಂದೆ ನೋಡುತ್ತಿದ್ದ ವಿಷಯ ತಿಳಿದು ಕಾಂಗ್ರೆಸ್ ಚೆಂಗಲರಾಯ ರೆಡ್ಡಿಯವರನ್ನು ಜವಾಬ್ದಾರಿ ಸರ್ಕಾರಕ್ಕಾಗಿ ಚಳುವಳಿ ನಡೆಸಲು ನೇಮಿಸಿತ್ತು. ಚಿಕ್ಕಮಗಳೂರಿನ ಸರ್ಕಾರಿ ಪ್ರೌಢಶಾಲೆಯ ವಿದ್ಯಾರ್ಥಿಗಳಾಗಿದ್ದ ನಾವು ಚಳುವಳಿಗೆ ಧುಮುಕಿದೆವು. ಬೆಳಿಗ್ಗೆ ೧೦.೩೦ ಘಂಟೆಗೆ ವಿದ್ಯಾರ್ಥಿಗಳು ಶಾಲೆಯ ಆವರಣದಲ್ಲಿ ಸೇರಿದ್ದರು. ಕ್ಷಣಮಾತ್ರದಲ್ಲಿ ಆವರಣದ ಮಧ್ಯದಲ್ಲಿದ್ದ ಶ್ರೀಗಂಧದ ಎಳೆಯ ಮರವನ್ನು ಕಾನೂನು ಉಲ್ಲಂಘಿಸುವ ಸಲುವಾಗಿ ಮುರಿದು ಧೂಳೀಪಟ ಮಾಡಿಬಿಟ್ಟರು. ಆ ಕ್ಷಣದಲ್ಲೇ ಜವಾಬ್ದಾರಿ ಸರಕಾರಕ್ಕಾಗಿ ಸಂಸ್ಥಾನಾದ್ಯಂತ ಚಳುವಳಿ ಆರಂಭವಾಗಿದೆ ಎಂಬ ವಿಷಯ ಕಾಳ್ಗಿಚ್ಚಿನಂತೆ ಹಬ್ಬಿಬಿಟ್ಟಿತು. ಇಡೀ ವಿದ್ಯಾರ್ಥಿ ಸಮುದಾಯ ಊರಿನೊಳಗೆ ಮೆರವಣಿಗೆ ಹೊರಡಲು ಶಾಲೆಯ ಆವರಣದ ಮುಖ್ಯದ್ವಾರಕ್ಕೆ ಬರುವಷ್ಟರಲ್ಲಿ ಗೇಟಿಗೆ ಎದುರಾಗಿ ಜಿಲ್ಲಾ ಪೊಲೀಸ್ ಅಧಿಕಾರಿ ಅಡ್ಡಗಟ್ಟಿ ನಿಂತರು. ಇಡೀ ಶಾಲೆಯ ೧೬ ರಿಂದ ೧೯ ವರ್ಷದ ಸುಮಾರು ಐನೂರೈವತ್ತು ಮಂದಿಯ ಒಗ್ಗಟ್ಟು ಅಸದೃಶವಾದುದಾಗಿತ್ತು.

ಡಿ. ಎಚ್. ಜಾಕಬ್ ಲೋಬೊ

ತಾನೊಬ್ಬ ಜವಾಬ್ದಾರಿಯುತ ಮುಂದಾಳೆಂದೇ ತಿಳಿದಿದ್ದನು. ಪೊಲೀಸ್ ವರಿಷ್ಠಾಧಿಕಾರಿಯಿಂದಲೇ ಅದು ಉದ್ಘಾಟನೆಗೊಂಡಿದ್ದು ಒಂದು ವಿಶೇಷ.

ಒಂದೆರಡು ಮೂರು ದಿನಗಳಲ್ಲೇ ಹಿರಿಯರೂ ಪ್ರಸಿದ್ಧ ವ್ಯಾಪಾರಿಗಳೂ ಗಾಂಧೀವಾದಿಗಳೂ ಆಗಿದ್ದ ನಗರದ ಶ್ರೀ ಎಸ್. ಅಣ್ಣಪ್ಪ ಶೆಟ್ಟಿಯವರು ಮೈಸೂರಿಗೆ ಹೋಗಲು ಅಣಿಯಾದರು.

ಅವರು ಹೊರಟಾಗ ಇಡೀ ಚಿಕ್ಕಮಗಳೂರು ಜನತೆ ಅವರ ಜೊತೆಗೂಡಿ ಮುಖ್ಯ ರಸ್ತೆಯಿಂದ ಆಜಾದ್ ಪಾರ್ಕ್‌ವರೆಗೆ ಜಯಘೋಷಣೆಗಳೊಡನೆ ನಡೆದುಬಂದಿತು.

ಭಾಷಣಗಳೇನೂ ಇರಲಿಲ್ಲ! ಅರಮನೆಗೆ ಮುತ್ತಿಗೆ ಹಾಕಿಯೇಬಿಡಬೇಕೆಂಬುದು ಪ್ರತಿಯೊಬ್ಬರಲ್ಲಿ ಹುದುಗಿದ್ದ ದೃಢ ಆಕಾಂಕ್ಷೆ. ಅಣ್ಣಪ್ಪ ಶೆಟ್ಟರು ಮುಂದೆ ಹಿರೇಮಗಳೂರು ತಲುಪುವುದರಲ್ಲಿ ದಸ್ತಗಿರಿಯಾದರು ಎಂಬ ಸುದ್ದಿ ಅಂದೇ ರಾತ್ರಿ ನಮಗೆ ಮುಟ್ಟಿತ್ತು.

ತರುವಾಯ ಬೆಳಗಿನ ಜಾವದಲ್ಲಿ ಪ್ರಭಾತ್‌ಫೇರಿ ಪ್ರಾರಂಭ. ನಂತರ ೧೦.೩೦ ಘಂಟೆಗೆ ಮೆರವಣಿಗೆ, ಸಂಜೆ ಆಜಾದ್ ಮೈದಾನದಲ್ಲಿ ಸಾರ್ವಜನಿಕ ಸಭೆ ನಿತ್ಯದ ಕಾರ್ಯಕ್ರಮಗಳಾಗಿದ್ದವು. ಶಿಸ್ತುಬದ್ಧ ಚಳುವಳಿ ಬರಬರುತ್ತ ರಸವತ್ತಾಗಿ ಉಳಿಯಲಿಲ್ಲ, ಈಶ್ವರಿ ಭೂಗತವಾಗಿಹೋಗಿದ್ದ. ಒಬ್ಬ ಚುನಾಯಿತ ಮುಂದಾಳೂ ಇರಲಿಲ್ಲ. ಒಂದು ಸಂಜೆ ಬೇವಿನ ಮರದ ಬೀದಿಯ ಮನೆಯೊಂದರ ಮಹಡಿಯಲಿದ್ದ ಗೋಪಾಲ ಗೌಡ ಎಂಬುವರ ಫೋಟೋ ಸ್ಟುಡಿಯೋದಲ್ಲಿ ಒಂದು ಸಭೆ ನಡೆಯಿತು. ಮಹಡಿ ಪೂರ್ಣ ಒಂದು ಹಜಾರ. ಸೆಗಣಿ ಸಾರಿಸಿದ ನೆಲ. ಆ ಹಜಾರದ ನಾಲ್ಕೂ ಗೋಡೆಗಳಿಗೆ ಆತುಕೊಂಡು ಕುಳಿತು ಚಳುವಳಿಯನ್ನು ರಭಸಗೊಳಿಸುವಂತೆ ಒಬ್ಬ ಮುಂದಾಳನ್ನು ಚುನಾಯಿಸಿದೆವು. ಅವರು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ವಿಜ್ಞಾನ ಪದವಿಗಾಗಿ ಮರಾಠ ವಿದ್ಯಾರ್ಥಿನಿಲಯದಲ್ಲಿದ್ದುಕೊಂಡು ಓದುತ್ತಿದ್ದ ಎಂ. ಮಲ್ಲಾರಿ ರಾವ್ ಎಂಬ ಚಿಕ್ಕಮಗಳೂರಿನ ವಿದ್ಯಾರ್ಥಿ. ಗಂಭೀರವಾಗಿದ್ದರೂ ಹಸನ್ಮುಖಿ. ಕಲ್ಲಿನಂತಹ ಕಠಿಣ ಧ್ಯೇಯವಾದಿ, ನಿಂತರೆ ಭೂಪ ಅಲ್ಲಾಡಿಸಲಾಗುತ್ತಿರಲಿಲ್ಲ. ಅವರು ಯಾವಾಗಲೂ ಅಡ್ಡ ಪಂಚೆ ಉಟ್ಟು ಕೋಟು ಹಾಕಿಕೊಳ್ಳುತ್ತಿದ್ದರು. ಅಂದು ಒಂದು ಕ್ರಿಯಾಶೀಲ ಕಾರ್ಯಕ್ರಮವೂ ನಿಗದಿಗೊಂಡಿತ್ತು. ಅದೆಂದರೆ ಬರಿಯ ಪ್ರಭಾತ್‌ಫೇರಿ, ಮೆರವಣಿಗೆ, ಘೋಷಣೆ ಕೂಗುವುದು, ಸಂಜೆಯ ಸಾರ್ವಜನಿಕ ಸಭೆಗಳು ಸಾಲದು. ನಿದ್ರೆ ಮಾಡುವಂತೆ ನಟಿಸುತ್ತಿರುವ ಸರಕಾರವನ್ನು ಬಡಿದೆಬ್ಬಿಸಬೇಕು. ಈ ದಿಸೆಯಲ್ಲಿ (ಅ) ಜಿಲ್ಲಾಧಿಕಾರಿಗಳ ನಿವಾಸದ ತಡೆಕಾವಲಿನ ಮುಷ್ಕರ, (ಆ) ಜಿಲ್ಲಾಧಿಕಾರಿಗಳ ಕಚೇರಿಯ ತಡೆಕಾವಲು ಮುಷ್ಕರ, ಮುಂತಾಗಿ ಹುರುಪಿನ ಚಳುವಳಿಯ ವಿಮರ್ಶೆಗಳಾದವು.

ಒಂದು ದಿನ ಜಿಲ್ಲಾಧಿಕಾರಿಯವರ ನಿವಾಸದ ಮುತ್ತಿಗೆ ಮುಷ್ಕರ ನಡೆಯಿತು. ಶಾಂತಿಯುತ ಮುಷ್ಕರ ಘೋಷಣೆಗಳಲ್ಲೇ ತಲ್ಲೀನವಾಗಿತ್ತು. ಜಿಲ್ಲಾಧಿಕಾರಿಗಳು ಮನೆಯೊಳಗೇ ಇರುವರೆಂದು ತಿಳಿಯಿತು. ಅವರ ನಿವಾಸಕ್ಕೆ ಹತ್ತಲು ಇದ್ದ ೧೦-೧೨ ಮೆಟ್ಟಿಲುಗಳ ಎರಡೂ ಬದಿಗಳಲ್ಲಿ ಓರಣವಾಗಿ ಹೂಕುಂಡಗಳನ್ನಿಟ್ಟಿದ್ದರು. ಸತ್ಯಾಗ್ರಹಿಗಳು ಏಕಾಏಕಿ ಅವುಗಳನ್ನೊಡೆದು ಹಾಕಿದರು. ಜಿಲ್ಲಾಧಿಕಾರಿಗಳು ಜಪ್ಪೆನ್ನಲಿಲ್ಲ, ಪೊಲೀಸರು ಬರಲಿಲ್ಲ, ನಾವೇ ಮಧ್ಯಾಹ್ನ ಒಂದು ಘಂಟೆ ವೇಳೆಗೆ ಬರಖಾಸ್ತಾದೆವು.

ಈ ಜಿಲ್ಲಾಧಿಕಾರಿ ಶ್ರೀ ಸೂರ್ಯನಾರಾಯಣ ಸೆಟ್ಟಿ, ನಿವೃತ್ತಿಯ ಅಂಚಿನಲ್ಲಿದ್ದರು. 'ಈ ಮಕ್ಕಳು ನಮ್ಮ ಮಕ್ಕಳೇ' ಎಂದಿದ್ದರು ಎಂಬ ವದಂತಿ ಇತ್ತು. ಕೊನೆಕೊನೆಗೆ ಜಿಲ್ಲಾಧಿಕಾರಿಯವರೇ ಚಳುವಳಿಯ ಪ್ರೋತ್ಸಾಹಕರು ಎಂಬ ಮಾತು ಹರಡಿತ್ತು. ಜೊತೆಜೊತೆಗೆ ಮಹಾರಾಜರು ಭಾರತ ಒಕ್ಕೂಟಕ್ಕೆ ಸೇರುವ ಸನ್ನದಿನ ಪರ ಎನ್ನುವ ಮಾತೂ ಕೇಳಿಬಂದಿತ್ತು. ಆದರೂ ಬೆಂಗಳೂರಿನಲ್ಲಿ ಕೆಂಗಲ್ ಹನುಮಂತಯ್ಯನವರನ್ನೂ ಚಿಕ್ಕಮಗಳೂರಿನ ಸಿ. ಆರ್. ಶಿವಾನಂದ ಎಂಬ ಕಾಲೇಜು ವಿದ್ಯಾರ್ಥಿಯನ್ನೂ ಸಂಸ್ಥಾನಾದ್ಯಂತ ಇನ್ನೂ ಕೆಲವರನ್ನು ಮಹಾರಾಜರನ್ನು ವೈಯಕ್ತಿಕವಾಗಿ ಟೀಕಿಸಿದ್ದಕ್ಕಾಗಿ ದಸ್ತಗಿರಿ ಮಾಡಿದ್ದರು. ಹನುಮಂತಯ್ಯನವರನ್ನು ದಾವಣಗೆರೆ ಜೈಲಿಗಟ್ಟಿದ್ದರು. ಶಿವಾನಂದ ಅವರನ್ನು ದಸ್ತಗಿರಿ ಮಾಡಿದಾಗ ಮಧ್ಯಾಹ್ನ ೨.೩೦ ಘಂಟೆ ಸಮಯ. ಅಪ್ಪಟ ಖಾದಿದಾರಿ ನಿಷ್ಕಳಂಕ ಮನೋಭಾವದ ಸತ್ಯಾಗ್ರಹಿ ವಿದ್ಯಾರ್ಥಿ ಮುಖಂಡ. ಅವರು ಚಿಕ್ಕಮಗಳೂರಿನ ಮುಖ್ಯರಸ್ತೆಯ ಮಧ್ಯದಲ್ಲಿರುವ ಅವರ ಮನೆಯಿಂದ ಪೊಲೀಸ್ ವಾಹನಕ್ಕೆ ನಡೆದು ಬಂದಾಗ ಆಕಸ್ಮಾತ್ ನಾವು ಐದಾರು ಜನ ಸತ್ಯಾಗ್ರಹಿಗಳು ಅಲ್ಲಿದ್ದೆವು. ಹಿಂದೆ ಮುಂದೆ ನೋಡದೇ 'ಜವಾಬ್ದಾರಿ ಸರಕಾರ ಬೇಕೇಬೇಕು, ಅರ್ಕಾಟ್ ಬಾಯ್ಕಾಟ್ – ತಂಬೂಚೆಟ್ಟಿ; ಚಟ್ಟಕಟ್ಟಿ' ಎಂದು ಹುರುಪಿನಿಂದ ಘೋಷಣೆಗಳನ್ನು ಕೂಗಿದೆವು. ಪೊಲೀಸರು ಯಾವುದೂ ಕೇಳಿಸದಂತೆ ಅವರ ಕೆಲಸ ನಿರ್ವಹಿಸಿದರು. ಶಿವಾನಂದ ಅವರು 'ಏನೇ ಬರಲಿ ಒಗ್ಗಟ್ಟಿರಲಿ' ಎಂದು ದೃಢತೆಯಿಂದ ಕೈಬೀಸಿ ವಾಹನವನ್ನೇರಿ ಹೊರಟುಹೋದರು. ಅವರನ್ನು ಶಿವಮೊಗ್ಗ ಜೈಲಿಗಟ್ಟಿದ್ದರು. ಆ ವೇಳೆಗೆ ಜಿಲ್ಲಾಧಿಕಾರಿಯವರ ಬದಲಾವಣೆಯೋ ನಿವೃತ್ತಿಯೋ ಏನೋ ಆಯಿತು. ಅವರ ಜಾಗಕ್ಕೆ ದರ್ಪಕ್ಕೆ ಹೆಸರಾದವರೊಬ್ಬರು ಜಿಲ್ಲಾಧಿಕಾರಿಯಾಗಿ ಬಂದರು.

ಚಳುವಳಿ ಪ್ರಾರಂಭವಾಗಿ ತಿಂಗಳೊಪ್ಪತ್ತು ಮುಗಿದಿತ್ತು. ಹೊಸ ಜಿಲ್ಲಾಧಿಕಾರಿಯವರು ಅಧಿಕಾರ ಸ್ವೀಕರಿಸಿಯಾಗಿತ್ತು. ೪-೧೦-೪೭ರಂದು ಜಿಲ್ಲಾ ಕಚೇರಿಯ ಪಿಕೆಟಿಂಗ್ ಮುಷ್ಕರ ನಡೆಯಿತು. ವಿದ್ಯಾರ್ಥಿ ನಾಯಕ ಎಂ. ಮಲ್ಲಾರಿ ರಾವ್ ಅವರ ನೇತೃತ್ವದಲ್ಲಿ ಹುರುಪಿನಿಂದ ಸತ್ಯಾಗ್ರಹಿಗಳು ಜಿಲ್ಲಾ ಕಚೇರಿಯ ಚೌಕಾಕಾರದ ಒಳಾಂಗಣವನ್ನು ಆಕ್ರಮಿಸಿಕೊಂಡರು. ಕಚೇರಿಯ ನಾಲ್ಕೂ ಬದಿಯ ಕಟ್ಟಡಗಳು ನಡುಗುವಂತೆ ಅಧೈರ್ಯವೇನೆಂಬುದನ್ನು ಅರಿಯದ ಸತ್ಯಾಗ್ರಹಿಗಳ ಘೋಷಣೆಗಳು ಮೊಳಗಿದವು. ಅಧಿಕಾರಶಾಹಿಯನ್ನು ಅದು ತಲ್ಲಣಗೊಳಿಸಿರಲೇಬೇಕು. ಪೊಲೀಸ್ ಕಾರ್ಯಾಚಾರಣೆ ಪ್ರಾರಂಭವಾಯಿತು. ಮೊಟ್ಟಮೊದಲಿಗೆ ನಾಯಕ ಎಂ. ಮಲ್ಲಾರಿ ರಾವ್ ಅವರನ್ನು ಕರೆದೊಯ್ದು ಸನಿಹದಲ್ಲೇ ನಿಲ್ಲಿಸಿದ್ದ ಪೊಲೀಸ್ ವ್ಯಾನ್ ಹತ್ತಿಸಿದರು. ಅವರೋ ಏನೂ ಆಗಿಲ್ಲವೆಂಬಂತೆ, ಇಲ್ಲವೇ, ಹೀಗೆಯೇ ಆಗುತ್ತೆ ಎಂದೇ ಇಲ್ಲಿಗೆ ಬಂದಿರುವೆ ಎಂಬಂತಹ ನಿರಾಡಂಬರವಾದರೂ ವಿಶಿಷ್ಟ ರೀತಿಯಿಂದ ಪಂಚೆಯ ತುದಿಯನ್ನು ಹಿಡಿದುಕೊಂಡಂತೆಯೇ ಹೋಗಿ ವ್ಯಾನಿನಲ್ಲಿ ಕುಳಿತುಕೊಂಡ ಸೊಗಸುಗಾರಿಕೆ ಉಳಿದೆಲ್ಲ ಸತ್ಯಾಗ್ರಹಿಗಳನ್ನು ಇನ್ನಿಲ್ಲದಂತೆ ಹುರಿದುಂಬಿಸಿತು. ಒಬ್ಬರ ಹಿಂದೆ ಒಬ್ಬರಂತೆ ತಗಡು ಮೈಕ್ ಹಿಡಿದು ಒಟ್ಟು ೧೯ ಯುವ ಸತ್ಯಾಗ್ರಹಿಗಳು ಸರದಿಯಲ್ಲಿ ಸಾಗಿ ಘೋಷಣೆಗಳನ್ನು ಕೂಗುತ್ತಲೇ ಬಂಧಿತರಾಗಿ ಪೊಲೀಸ್ ವ್ಯಾನ್ ಏರಿದರು. ನೂರಾರು ವಿದ್ಯಾರ್ಥಿಗಳು ಮುಷ್ಕರ ನಡೆಸುತ್ತಲೇ ಇದ್ದರು. ಬಂದೂಕುಗಳನ್ನು ಹಿಡಿದ ಆರು ಜನ ಪೊಲೀಸರನ್ನೂ ಮುಂದುಗಡೆ ಚಾಲಕನ ಬದಿಯಲ್ಲಿ ಇಬ್ಬರು ಇನ್ಸ್‌ಪೆಕ್ಟರ್‌ಗಳನ್ನೂ ಜೊತೆ ಮಾಡಿ ವ್ಯಾನ್ ಬಿಟ್ಟುಕೊಂಡು ಮುನ್ನಡೆಸಿದರು. ತುಂಬಿದ ವ್ಯಾನ್‌ನಲ್ಲಿದ್ದವರ ಮುಖದಲ್ಲಿ ಸಂತೃಪ್ತಭಾವ ಲಾಸ್ಯವಾಡುತ್ತಿತ್ತು. ಸರಕಾರದ ಮೈದಡವಿದ ತೃಪ್ತಿ ಮೂಡಿತ್ತು. ಪೊಲೀಸರ ಮುಖದ ಮೇಲೆ ಮುಂದೇನು ಎಂಬ ಪೇಲವಭಾವ ತುಂಬಿತ್ತು.

ಎಂಟ್ಹತ್ತು ಮೈಲಿಗಳ ದೂರದಲ್ಲಿ ವ್ಯಾನ್ ನಿಲ್ಲಿಸಿ ಸತ್ಯಾಗ್ರಹಿಗಳನ್ನು ಇಳಿಯಲು ಆದೇಶಿಸಿದರು. ಬಂದೂಕುಧಾರಿಗಳು ಕುಳಿತೇ ಇದ್ದರು. ಬೇರೆ ಜಿಲ್ಲೆಗಳಲ್ಲಿ ಸತ್ಯಾಗ್ರಹಿಗಳನ್ನು ಕಾಡಿನಲ್ಲಿಳಿಸಿಬಿಡುತ್ತಿದ್ದರು ಎಂಬ ವಿಷಯ ನಮಗೂ ತಿಳಿದಿತ್ತು. ಮೋಕ್ಷರಾಜು ಎಂಬ ವಿದ್ಯಾರ್ಥಿಯು ತಕ್ಷಣ ಸಟೆದು ಪ್ರತಿಸ್ಪಂದಿಸಿದನು : ''ನಾವಿಲ್ಲಿ ಇಳಿದು ನಿಮ್ಮನ್ನು ಹೋಗಗೊಡುವುದಿಲ್ಲ ನೀವೂ ಇಳಿದು ನಮ್ಮೊಡನೆ ಇರುವುದಾದರೆ ನೀವು ಇಳಿದ ಮೇಲೆ ನಾವು ಇಳಿಯುವೆವು. ಇಲ್ಲವೇ ನಮಗೆ ಗುಂಡು ಹೊಡೆದು ಎಳೆದುಹಾಕಿ ಹೋಗಿ'' ಎಂದು ಹೇಳಿದನು. ಎಲ್ಲ ಸತ್ಯಾಗ್ರಹಿಗಳು ಅವನನ್ನು ಎವೆಯಿಕ್ಕದೆ ಬೆಂಬಲಿಸಿದರು. ಪೊಲೀಸರು ಪೇಚಿಗೆ ಸಿಕ್ಕಿಕೊಂಡಿದ್ದು ನಿಚ್ಚಳವಾಗಿ ಗೋಚರವಾಗಿತ್ತು. ಅವರ ಉದ್ದೇಶಿತ ಕಾರ್ಯಯೋಜನೆ ತಲೆಕೆಳಗಾಗಿತ್ತು. ಗತ್ಯಂತರವಿಲ್ಲದೆ ಕೆಳಗಿಳಿದ ಬಂದೂಕುಧಾರಿ ಪೊಲೀಸರನ್ನು ನಾವು ೧೯ ಸತ್ಯಾಗ್ರಹಿಗಳು ಸುತ್ತುವರಿದು ಇನ್ಸ್‌ಪೆಕ್ಟರ್‌ಗಳು ವ್ಯಾನ್ ತೆಗೆದುಕೊಂಡು ಹೋಗಲು ಅನುವುಮಾಡಿಕೊಟ್ಟೆವು. ಅಲ್ಲೇ ಜಕ್ಕನಹಳ್ಳಿಯ ಪೊಲೀಸ್ ಪೋಸ್ಟ್ ಕಂಡುಬಂತು. ಅದರ ಸೆಗಣಿ ಸಾರಿಸಿದ ವೆರಾಂಡದಲ್ಲಿ ನಮ್ಮನ್ನೆಲ್ಲ ಕೂರಿಸಿದರು. ವ್ಯಾನ್ ಹೊರಟು ಹೋದ ಮೇಲೆ ಪೊಲೀಸರೂ ಸೌಜನ್ಯದಿಂದಲೇ ನಡೆದುಕೊಂಡರು. ಅಪರಾಹ್ನ ಒಂದು ದೊಡ್ಡ ಹಂಡೆಯಲ್ಲಿ ಅನ್ನ, ಸಾಂಬಾರು, ಸಾರು, ಪಲ್ಯ, ಉಪ್ಪಿನಕಾಯಿ ಕಲಸಿದ ಊಟವನ್ನು ತಂದು ಬಡಿಸಿದರು. ಸಂಜೆಯ ಹೊತ್ತಿಗೆ ನಮ್ಮನ್ನೆಲ್ಲ ಕರೆದೊಯ್ದು ಜಿಲ್ಲಾ ಕಚೇರಿಯ ಕೋಣೆಯೊಂದರಲ್ಲಿ ಇಳಿಸಿ ಪಹರೆ ಇಟ್ಟು ಎರಡು ಘಂಟೆಗಳ ಕಾಲ ಕಾಯಿಸಿದರು. ಪಹರೆ ಇದ್ದವರಿಗೂ ಏನು ನಡೆಯುತ್ತಿದೆ ಎಂಬುದು ತಿಳಿದಿರಲಿಲ್ಲ. ರಾತ್ರಿ ೮.೩೦ರ ವೇಳೆಗೆ ವ್ಯಾನಿನಲ್ಲಿ ಕೂರಿಸಿ ಚಿಕ್ಕಮಗಳೂರು ಸಬ್‌ಜೈಲಿಗೆ ಕರೆದೊಯ್ದು ಇಳಿಸಿದರು. ಅದೇ ಹೊತ್ತಿಗೆ ನಮ್ಮ ಹಾಸಿಗೆ ಬಟ್ಟೆಗಳನ್ನೂ ತಂದುಕೊಟ್ಟರು. ಜೈಲಿನಲ್ಲಿ ಕೆ. ಸಿ. ರೆಡ್ಡಿ, ಕೆ. ಟಿ. ಭಾಷ್ಯಂ, ಟಿ. ಸಿದ್ಧಲಿಂಗಯ್ಯ, ಟಿ. ಸುಬ್ರಹ್ಮಣ್ಯ, ಎಂ. ಎನ್. ಜೋಯಿಸ್, ಎಚ್. ಸಿದ್ದಯ್ಯ, ಸಿದ್ದವೀರಪ್ಪ, ಟಿ. ಮರಿಯಪ್ಪ ಇನ್ನೂ ಮುಂತಾದ ಹಿರಿಯ ಗಣ್ಯ ಸತ್ಯಾಗ್ರಹಿಗಳು ಇದ್ದಿದ್ದು ನಮಗೆ ಗೊತ್ತಿರಲೇ ಇಲ್ಲ. ಕೆ. ಟಿ. ಭಾಷ್ಯಂ ಅವರು ನಮ್ಮಲ್ಲಿ ಅತ್ಯಂತ ಕಿರಿಯರಾದ ಎನ್. ಜಿ. ವಿಠಲ್‌ರಾವ್ ಮತ್ತು ನನ್ನನ್ನು ಆದರದಿಂದ ಕರೆಸಿಕೊಂಡು ಅವರ ಹಾಸಿಗೆ ಹಾಸಿದ್ದ ಸಿಮೆಂಟ್ ಕಟ್ಟೆ ಮಂಚದ ಮೇಲೆ ಕೂರಿಸಿ ನಗೆಮುಖದಿಂದ ಮಾತನಾಡಿಸಿ ಒಂದೊಂದು ಬಾಳೆಹಣ್ಣು ಮತ್ತು ಮೈಸೂರು ಪಾಕ್ ಕೊಟ್ಟರು. ಇದು ಜೈಲೇ, ಇಲ್ಲ ನಮ್ಮದೇ ಮನೆಯೇ, ಇಲ್ಲಿರುವವರು ಸತ್ಯಾಗ್ರಹಿಗಳೇ ಇಲ್ಲ ನಮ್ಮ ಸ್ವಂತ ಬಂಧುಗಳೇ ಎಂಬ ಭಾವನೆ ತುಂಬಿಬಂದಿತು. ಅಂದು ನಮ್ಮ ಜೊತೆ ಇದ್ದವರೆಂದರೆ, ಎಂ. ಮಲ್ಲಾರಿ ರಾವ್, ಮೋಕ್ಷರಾಜು, ಸಿ. ವಿ. ಜಯತೀರ್ಥ, ಪುರುಷೋತ್ತಮ ರಾವ್, ಸಿ. ಆರ್. ಶ್ರೀನಿವಾಸ ನಾಯ್ಡು, ನರಸಿಂಹಮೂರ್ತಿ, ಎನ್. ಜಿ. ವಿಠಲ್‌ರಾವ್, ಮತ್ತಿನ್ನು ಕೆಲವರು. ಒಟ್ಟು ೧೯

ಜನ ಕೆಚ್ಚೆದೆಯ ಸತ್ಯಾಗ್ರಹಿಗಳು. ಸ್ವತಂತ್ರ ಭಾರತದಲ್ಲಿ ರಾಜಶಾಹಿಯ ಆಳ್ವಿಕೆಯಲ್ಲಿರಲು ಎಂದೆಂದಿಗೂ ಒಪ್ಪದ ಪ್ರಜಾಪ್ರಭುತ್ವ ಪ್ರತಿಪಾದಕರು ಅವರೆಲ್ಲಾ.

ನಮ್ಮನ್ನು ಅಂದಿನ ಕಡೂರು ಜಿಲ್ಲೆಯ ಜಿಲ್ಲಾ ಮ್ಯಾಜಿಸ್ಟ್ರೇಟ್ ಅವರು ಪಬ್ಲಿಕ್ ಸೆಕ್ಯೂರಿಟಿ ಕಾನೂನಿನ ಪ್ರಕಾರ ೪-೧೦-೧೯೪೭ರಂದು ೧೫ ದಿನಗಳ ಕಾಲಕ್ಕೆ ಅಂದರೆ ೧೮-೧೦-೧೯೪೭ ರವರೆಗೆ ಸ್ಥಾನಬದ್ಧತೆಯಲ್ಲಿಟ್ಟಿದ್ದರು. ಸ್ವಾರಸ್ಯವೆಂದರೆ ನಮ್ಮಲ್ಲಿ ಯಾರನ್ನೂ ಯಾವುದೇ ನ್ಯಾಯಾಧೀಶರ ಮುಂದೆ ಹಾಜರುಪಡಿಸಿರಲೇ ಇಲ್ಲ. ಚಳುವಳಿಯ ಕಾವು ಎಷ್ಟರಮಟ್ಟಿಗೆ ಏರಿತೆಂದರೆ ೧೨-೧೦-೪೭ರ ವೇಳೆಗೆ ಸರಕಾರ ಮಣಿದಿತ್ತು. ೧೩-೧೦-೧೯೪೭ರಂದು ನಮ್ಮನ್ನು ಸಂಜೆ ೪.೫೦ ಘಂಟೆಗೆ ಜೈಲಿನಿಂದ ಯಾವುದೇ ಷರತ್ತಿಲ್ಲದೆ ಬಿಡುಗಡೆ ಮಾಡಿದರು. ಚಿಕ್ಕಮಗಳೂರಿನ ಜನತೆ ನಮ್ಮನ್ನು ಜೈಲಿನ ಹೆಬ್ಬಾಗಿಲಿನಲ್ಲೇ ಸ್ವಾಗತಿಸಿದರು. ಹೂವಿನ ಹಾರಗಳನ್ನು ಹಾಕಿ ಮೆರವಣಿಗೆಯಲ್ಲಿ ಆಜಾದ್ ಮೈದಾನಕ್ಕೆ ಕರೆದೊಯ್ದು ಸಾರ್ವಜನಿಕ ಸಭೆ ನಡೆಸಿ ಹರ್ಷೋದ್ಗಾರಗಳಿಂದ ಬರಮಾಡಿಕೊಂಡರು. ಜೈಲಿನಲ್ಲೂ ಸಂತಸದಿಂದಿದ್ದೆವು. ಹೊರಗೆ ಬಂದಮೇಲಂತೂ ಜವಾಬ್ದಾರಿ ಸರಕಾರವನ್ನು ಪಡೆದುಕೊಂಡ ಹೆಮ್ಮೆಯಿಂದ ಬೀಗಿದೆವು. ಅಷ್ಟಕ್ಕೂ ಭಾರತ ಒಕ್ಕೂಟದಲ್ಲಿ ಮೈಸೂರು ಸಂಸ್ಥಾನ ವಿಲೀನಗೊಳ್ಳದೆ ಇರುವ ವಿಷಯ, ಹಾಗೂ ಸ್ವತಂತ್ರಭಾರತದಲ್ಲಿ ರಾಜರ ಆಡಳಿತಕ್ಕೊಳಪಟ್ಟು ಬಾಳುವ ವಿಚಾರ ಕನಸುಮನಸಿನಲ್ಲೂ ಎಣಿಸಲಾರದ ಪ್ರಜಾ ಪ್ರಭುತ್ವವಾದಿ ಜನ ನಾವಾಗಿದ್ದೆವು.

ಮಹಾರಾಜರು ವಿಲೀನಕ್ಕೆ ಒಪ್ಪಿದ್ದಷ್ಟೇ ಅಲ್ಲ, ೨೪-೧೦-೧೯೪೭ರಂದೇ ಚಳುವಳಿಯ ನೇತಾರ ಕ್ಯಾಸಂಬಳ್ಳಿ ಚೆಂಗಲರಾಯ ರೆಡ್ಡಿ ಅವರ ನೇತೃತ್ವದ ಪ್ರಜಾಪ್ರತಿನಿಧಿ ಮಂತ್ರಿ ಮಂಡಲ ರಚನೆಯಾಗಿ ಜವಾಬ್ದಾರಿ ಸರ್ಕಾರ ಅಸ್ತಿತ್ವಕ್ಕೆ ಬಂದಿತು. ವಿದ್ಯಾರ್ಥಿಗಳ ನಿಸ್ಪೃಹ ಕಾರ್ಯಾಚರಣೆಗೆ ಪ್ರತಿಫಲವೆಂಬಂತೆ ಪರೀಕ್ಷೆಗಳೇ ಇಲ್ಲದೆ ಎಲ್ಲರನ್ನೂ ತೇರ್ಗಡೆ ಮಾಡುವ ಆದೇಶ ಹೊರಡಿಸಿದರು!

ಚಳುವಳಿಯ ಸಂದರ್ಭದಲ್ಲಿ ಮೈಸೂರಿನಲ್ಲಿ ರಾಮಸ್ವಾಮಿ ಎಂಬ ವಿದ್ಯಾರ್ಥಿ ಪೊಲೀಸರ ಗುಂಡೇಟಿಗೆ ಆಹುತಿಯಾದನು. ಆ ಸ್ಥಳದ ಚೌಕಕ್ಕೆ ಅವನದೇ ಹೆಸರನ್ನಿಟ್ಟಿದ್ದಾರೆ. ತೀರ್ಥಹಳ್ಳಿಯಲ್ಲಿ ವಿದ್ಯಾರ್ಥಿನಿಯರ ಮೇಲೆ ಲಾಠಿಚಾರ್ಜು ನಡೆದಿತ್ತು. ಈ ವಿಚಾರಗಳೆಲ್ಲ ನಮ್ಮನ್ನು ಉದ್ರೇಕಗೊಳಿಸುತ್ತಿದ್ದವು. ಕೆಲ ಸತ್ಯಾಗ್ರಹಿ ಜಾಥಾಗಳು ಬೀರೂರು, ಅಜ್ಜಂಪುರ, ತರೀಕೆರೆಗಳಿಂದ ಚಿಕ್ಕಮಗಳೂರಿಗೆ ಬಂದು ಚಳುವಳಿಯನ್ನು ಪರಾಂಬರಿಸಿ ಹುರಿದುಂಬಿಸಿದ್ದವು. ಸ್ವತಃ ನಾನು ಶಿವಮೊಗ್ಗ ಚಳುವಳಿಯನ್ನು ನೋಡಿ ಬರಲು ನಿಯೋಜಿಸಲ್ಪಟ್ಟಿದ್ದೆ. ಶಿವಮೊಗ್ಗದಲ್ಲಿ ತುಂಗಾತೀರದ ಮೇಲಿದ್ದ ರಾಮಣ್ಣ ಸೆಟ್ಟಿ ಪಾರ್ಕ್‌ನಲ್ಲಿ ಕಡಿದಾಳ್ ಮಂಜಪ್ಪನವರ ಅಧ್ಯಕ್ಷತೆಯಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ ಅನೇಕರು ಭಾಷಣ ಮಾಡಿದರು. ಮರುದಿನ ಶಿವಮೊಗ್ಗ ಜಿಲ್ಲಾ ಕಚೇರಿ ಪಿಕೆಟಿಂಗ್ ನಡೆದು ದಸ್ತಗಿರಿಗಳಾದವು. ಅಲ್ಲಿ ಚಳುವಳಿಯ ಬಿರುಸನ್ನು ಕಂಡದ್ದು ನಮ್ಮ ಕ್ರಿಯಾಶೀಲತೆಯನ್ನು ಇನ್ನೂ ಹೆಚ್ಚಿಸಿತು. ವಿದ್ಯಾರ್ಥಿನಿಯರು ಮೆರವಣಿಗೆಗೆ ಬರುತ್ತಿರಲಿಲ್ಲ. ಆದರೆ ಸ್ತ್ರೀಯರಾದಿಯಾಗಿ ಎಲ್ಲ ತರಹದ ಜನ ಸಂಜೆಯ ಸಾರ್ವಜನಿಕ ಸಭೆಗಳಿಗೆ ಬರುತ್ತಿದ್ದರು. ಇಡೀ ಸಾಮಾಜಿಕ ಪರಿಸರದಲ್ಲಿ ಶಾಂತಿ-ಪ್ರೀತಿ, ಸತ್ಯ-ಅಹಿಂಸೆ ಎಂಬ ತ್ರಿಕಾಲ ಸತ್ವಯುತ ವ್ಯಕ್ತಿತ್ವ ಸಾರ್ವತ್ರಿಕವಾಗಿ ಈ ಸಂದರ್ಭದಲ್ಲಿ ಮೂಡಿಬಂದಿತ್ತು. ರಾಷ್ಟ್ರೀಯತಾ ಭಾವವೂ, ಕನ್ನಡದ ಸ್ವಾಭಿಮಾನವೂ ಎದೆತುಂಬಿ ಪ್ರವಹಿಸಿತ್ತು. ನಾವು ನಮ್ಮ ಒಡನಾಟಗಳಲ್ಲಿ ಅಪ್ಪಿತಪ್ಪಿಯೂ ಆಂಗ್ಲ ಪದಗಳನ್ನು ಬಳಸುತ್ತಿರಲಿಲ್ಲ.

ಶ್ರೀಯತ ಸಿ. ವಿ. ಆನಂದ, ಶಂಕರಪ್ಪ ಮತ್ತಿತರ ಮೂರು ಹುಡುಗರನ್ನು ಒರಟಾಟಕ್ಕಾಗಿ ಪೊಲೀಸರು ದೌರ್ಜನ್ಯದಿಂದ ಠಾಣೆಯಲ್ಲಿಟ್ಟು ತರುವಾಯ ಬಿಟ್ಟಿದ್ದರು. ಆನಂದ ಮತ್ತು ಶಂಕರಪ್ಪ ಅವರುಗಳಿಗೆ ಲಾಠಿ ಏಟು ಹೊಡೆದಿದ್ದರು. ಪೊಲೀಸ್ ಪಡೆಗೇ ಚಳ್ಳೆಹಣ್ಣು ತಿನ್ನಿಸಿ ಭೂಗತರಾಗಿ ಕಾರ್ಯಾಚರಣೆ ನಡೆಸಿದವರೆಂದರೆ ಸರಕಾರಿ ಆಸ್ಪತ್ರೆ ವೈದ್ಯೆಯವರ ತಮ್ಮ ಬಂಗಾರಪೇಟೆಯ ಗುರುಪ್ರಸಾದ್, ಮುನಿಸಿಪಲ್ ನೀರು ಸರಬರಾಜು ಇಲಾಖೆಯ ನೌಕರರ ಮಗ ಮುಂದೆ ಜನಾನುರಾಗಿ ದೈಹಿಕ ಶಿಕ್ಷಕರಾದ ಎ. ಪುಷ್ಪರಾಜು, ಅವರ ತಮ್ಮ ಜಾನ್, ಸಿ. ವಿ. ಆನಂದ, ಶಂಕರಪ್ಪ, ಹಿಲಾರಿ ಪಿಂಟೋ ಮತ್ತಿತರರು. ಅವರೆಲ್ಲಾ ಕೊನೆಗೂ ಪೊಲೀಸರಿಗೆ ಸಿಕ್ಕಿಬೀಳದೆ ಅತ್ಯಂತ ಕ್ರಿಯಾಶಾಲಿ ಸತ್ಯಾಗ್ರಹಿಗಳಾಗಿದ್ದರು.

ಸಿ. ಎಚ್. ಜಾಕಬ್ ಲೋಬೊ
೯೯೩, ೩ನೇ ಮೈನ್, ೭ನೇ ಬ್ಲಾಕ್, ೨ನೇ ಫೇಸ್, ಹೊಸಕೆರೆಹಳ್ಳಿ ಬಿ.ಡಿ.ಎ.ಬಡಾವಣೆ, ಬೆಂಗಳೂರು - ೮೫

# ಆತ್ಮಸಾಕ್ಷಿ

ಕ್ಷಮಿಸಿ,
ನೀವು ಕೇಳುವ ಪ್ರಶ್ನೆಗೆ
ನೀವು ಬಯಸುವ ಉತ್ತರವನ್ನು ನೀಡಲಾರೆ
ವಿಚಾರಣೆಗೆ ಮುನ್ನವೇ ಶಿಕ್ಷೆ ಘೋಷಿಸುವ
ನ್ಯಾಯಾಲಯಗಳಲ್ಲಿ ಸಾಕ್ಷ್ಯ ನುಡಿಯಲಾರೆ

ಸುರ ಸಂಗೀತಕ್ಕೆ
ತಲೆದೂಗಿದ ಮಾತ್ರಕ್ಕೆ
ನರಕವಾಸಿಗಳ ಆಕ್ರಂದನಗಳ ಮೇಲೆ
ರಸಭಂಗದ ಆರೋಪ ಹೊರಿಸಲಾರೆ

ರಾಮಚಂದ್ರನ ಸನ್ನಿಧಾನದಲ್ಲಿ
ಪುಳಕಿತನಾದ ಮಾತ್ರಕ್ಕೆ
ಶಂಭೂಕವಧೆಗಳಿಗೆ
ಆತ್ಮಹತ್ಯೆಯೆಂದು ಸಾಕ್ಷ್ಯ ನುಡಿಯಲಾರೆ

ಏಕಲವ್ಯರ ಶಿರಚ್ಛೇದಗಳಿಗೆ
ಗುರುದಕ್ಷಿಣೆಯೆಂದು ಷರಾ ಬರೆಯಲಾರೆ
ಕಲ್ಯಾಣದ ಬೀದಿಗಳಲ್ಲಿ
ದುಗುಡವಿದ್ದ ಮಾತ್ರಕ್ಕೆ
ಮಹಾಮನೆಯೇ ಸಂಚೆಂದು ದೂರು ನೀಡಲಾರೆ

ಪ್ರಭುತ್ವದ ಪಹರೆಯಲ್ಲಿರುವ
ಸತ್ಯದ ಸೂತಕಕ್ಕೆ
ಪ್ರಜಾಸತ್ತೆಯೆಂದು ಪರಾಕು ಹೇಳಲಾರೆ

ಖಾಂಡವವನ ದಹನಕ್ಕೆ ಕವಾಯತು ನಡೆಯುತ್ತಿರುವಾಗ
ಹೂವಿನ ರಕ್ಷಣೆಗೆ ಮುಳ್ಳಿರುವುದೂ ತಪ್ಪೆನ್ನಲೇ?
ತೋಳಗಳು ತುಪಾಕಿಯೇರಿಸಿ ಹೊಂಚುಹಾಕುತ್ತಿರುವಾಗ
ಮೇಕೆಗಳಿಗೆ ಕೊಂಬಿರುವುದೂ ತಪ್ಪೆನ್ನಲೇ?

ಶಿವಸುಂದರ್
ನಂ. ೭೬, 'ಸೃಜನ', ೩ನೇ ಹಂತ, ವಿನಾಯಕ ಬಡಾವಣೆ,
ವಿಜಯನಗರ, ಬೆಂಗಳೂರು - ೫೬೦ ೦೪೦





# ಕೃತ್ತಿಕಾ "ಗ್ರಹಣ"

ಡಾ|| ಬಿ. ಎಸ್. ಶೈಲಜಾ

**ಗೂ**ಳಿ ಎಂದರೆ ವೃಷಭ. ಈ ತಿಂಗಳಲ್ಲಿ ಸಂಜೆ ನೆತ್ತಿಯ ಮೇಲೆ ಕಾಣುವ ಈ ಸುಂದರರಾಶಿಯನ್ನು ಗುರುತಿಸಲು ಪಕ್ಕದ ಕೃತ್ತಿಕಾ ಗುಚ್ಛದ ಸಹಾಯ ಪಡೆಯಬಹುದು. ದ್ರಾಕ್ಷಿ ಗೊಂಚಲಿನಂತಹ ಈ ಗುಚ್ಛದ ಪಕ್ಕದಲ್ಲಿ ಇಂಗ್ಲಿಷ್ ಅಕ್ಷರ V ಆಕಾರದ ಇನ್ನೊಂದು ವಿರಳ ಗುಚ್ಛವಿದೆ. ಇದರಲ್ಲಿಯ ಪ್ರಕಾಶಮಾನ ಕೆಂಪು ನಕ್ಷತ್ರವೇ ರೋಹಿಣಿ. ಈ ನಕ್ಷತ್ರಗಳಲ್ಲಿ ಗೂಳಿಯನ್ನು ಕಲ್ಪಿಸಿಕೊಳ್ಳುವುದಾದರೆ V ಆಕಾರ ಅದರ ತಲೆಯ ಭಾಗವಾಗುತ್ತದೆ. ಕೆಂಪು ರೋಹಿಣಿ ಅದರ ಕೆಂಗಣ್ಣು ಆಗುತ್ತದೆ. ಆದ್ದರಿಂದ ಸಾಧಾರಣವಾಗಿ ಈ ಗೂಳಿಗೆ ಒಂದು ಕಣ್ಣು ಮಾತ್ರ ಕೆಂಪು. ಈ ತಿಂಗಳಲ್ಲಿ ಅದಕ್ಕೆ ಇನ್ನೊಂದು ಕೆಂಗಣ್ಣು ಮೂಡಲಿದೆ. ಅದೇ ಕೆಂಪು ಮಂಗಳ ಗ್ರಹ. ಗ್ರಹ ಯಾವುದು ನಕ್ಷತ್ರ ಯಾವುದು ಎಂದು ತಿಳಿಯಲು ಒಳ್ಳೆಯ ಅವಕಾಶ. ಏಳನೇ ತಾರೀಖು ಸಂಜೆ ಅರ್ಧ ಚಂದ್ರ ಈ ಕೆಂಗಣ್ಣುಗಳ ಮೇಲೆ ರಾರಾಜಿಸುವಾಗ ನೋಡಲೂ ಚೆನ್ನ; ಚಿತ್ರ ತೆಗೆಯಲೂ ಚೆನ್ನ. ೫ರ ಸಂಜೆ ಚಂದ್ರನನ್ನು ಹುಡುಕಿ ಅದರ ಹಿಂದೆ ಕೃತ್ತಿಕಾಗುಚ್ಛದ ನಕ್ಷತ್ರಗಳು ಒಂದೊಂದಾಗಿ ಮರೆಯಾಗುವುದನ್ನು ಗಮನಿಸಿ. ರಾತ್ರಿ ೧೦ ಗಂಟೆಯ ಹೊತ್ತಿಗೆ ನಕ್ಷತ್ರಗಳು ಚಂದ್ರನ ಹಿಂದಿನಿಂದ ಹೊರಬರುವುವು.




ನೆತ್ತಿಯ ಮೇಲೆ ಕಾಣುವ ಈ ವೃಷಭರಾಶಿಯನ್ನೇ ಆಧಾರವನ್ನಾಗಿ ಇಟ್ಟುಕೊಂಡು ಇತರ ನಕ್ಷತ್ರ ಪುಂಜಗಳ ಪರಿಚಯ ಮಾಡಿಕೊಳ್ಳಬಹುದು. ಪಶ್ಚಿಮಕ್ಕೆ ಮೇಷ. ವಾಯವ್ಯದಲ್ಲಿ ಕುಂತಿ (ಕಾಸಿಯೋಪಿಯ). ವೃಷಭ ಮತ್ತು ಕುಂತಿಯ ನಡುವೆ ಪಾರ್ಥ (ಪರ್ಸಿಯಸ್). ವೃಷಭದ ದಕ್ಷಿಣಕ್ಕೆ ಒರೈಯನ್ (ಮಹಾವ್ಯಾಧ). ಅದರ ದಕ್ಷಿಣಕ್ಕೆ ಮಹಾಶ್ವಾನ (ಕ್ಯಾನಿಸ್ ಮೇಜರ್). ಈ ಪುಂಜದ ಅತಿ ಪ್ರಕಾಶಮಾನ ನಕ್ಷತ್ರವೇ ಲುಬ್ಧಕ (ಸಿರಿಯಸ್) ಇನ್ನೂ ದಕ್ಷಿಣದಲ್ಲಿ ಹೊಳೆಯುವ ಇನ್ನೊಂದು ಪ್ರಕಾಶಮಾನ ನಕ್ಷತ್ರ ಕನೋಪಸ್ (ಅಗಸ್ತ್ಯ). ಈಗ ಪೂರ್ವದತ್ತ ತಿರುಗೋಣ. ದಿಗಂತದ ಅಂಚಿನಲ್ಲಿ ಕನ್ಯಾರಾಶಿ. ಅಲ್ಲಿಂದ ಮೇಲಕ್ಕೆ ಸಿಂಹರಾಶಿ. ಇನ್ನೂ ಮೇಲೆ ಏಕಾಂಗಿಯಾದ ಚುಕ್ಕೆ-ಶನಿಗ್ರಹ. ಇದು ಇರುವುದು ಕಟಕರಾಶಿಯಲ್ಲಿ. ಆದರೆ ಆ ರಾಶಿಯ ಉಳಿದ ಕ್ಷೀಣ ನಕ್ಷತ್ರಗಳು ಕಾಣುವುದಿಲ್ಲ. ದುರ್ಬೀನಿನ ಮೂಲಕ ನೋಡಿದಿರಾದರೆ ಶನಿಗ್ರಹದ ಪಕ್ಕದಲ್ಲಿ ಕ್ಷೀಣವಾದ ನಕ್ಷತ್ರ ಗುಚ್ಛವೊಂದು ಕಾಣುವುದು. ಇದೇ ಪ್ರೆಸಿಪಿ ಎಂಬ ಹೆಸರಿನದು.

ಇನ್ನುಳಿದ ಗ್ರಹಗಳಲ್ಲಿ ಶುಕ್ರ ಮತ್ತು ಗುರು ಬೆಳಗಿನ ಜಾವ ಕಾಣುವುವು. 'ಬೆಳ್ಳಿ'ಯನ್ನು ಗುರುತಿಸಲು ಯಾವ ನಕ್ಷೆಯ ನೆರವೂ ಬೇಕಿಲ್ಲ. ೨೫ ರಂದು ಇದು ಅತಿ ಎತ್ತರದಲ್ಲಿ ಕಾಣುವುದು. ಮಧ್ಯರಾತ್ರಿಯ ಹೊತ್ತಿಗೆ ಉದಯಿಸುವ ಗುರು ಗ್ರಹ ತುಲಾರಾಶಿಯ ಚೌಕದೊಳಗೇ ಕಾಣುತ್ತದೆ. ಕ್ಷೀಣವಾದ ನಕ್ಷತ್ರಗಳ ತುಲಾರಾಶಿಯನ್ನು ಗುರುತಿಟ್ಟುಕೊಳ್ಳಲು ಇದು ಒಳ್ಳೆಯ ಅವಕಾಶ. ಬರಲಿರುವ ಯುತಿಯ ಸೂಚನೆಯಾಗಿ ಹಿನ್ನಡೆ ಆರಂಭ. ತಿಂಗಳಕೊನೆಗೆ ಬುಧಗ್ರಹ ಬೆಳಗಿನ ಜಾವ ಪೂರ್ವದಲ್ಲಿ ಕಾಣುವುದು. ತಿಂಗಳ ಆರಂಭದ ದಿನ ಸಂಜೆ ಬುಧ-ಚಂದ್ರ ಜೋಡಿ; ಹಿಂದೆಯೇ ಬುಧದ ಹಿನ್ನಡೆ ಆರಂಭ. ಆಮೇಲೆ ತಿಂಗಳ ಕೊನೆಗೆ ಬುಧದ ಹಿನ್ನಡೆ ಮುಕ್ತಾಯ; ೨೭ರಂದು ಪುನಃ ಚಂದ್ರನೊಡನೆ ಜೋಡಿ.

ಈ ತಿಂಗಳಲ್ಲಿ ಎರಡು ಗ್ರಹಣಗಳಿವೆ. ಎರಡರ ನೋಟವೂ ನಮಗಿಲ್ಲ. ಚಂದ್ರ ಗ್ರಹಣದಂದು ಚಂದ್ರ ಭೂಮಿಯ ನೆರಳಿನ ಪಾರ್ಶ್ವಛಾಯಾ ಪ್ರದೇಶದಲ್ಲಿ ಹಾದು ಹೋಗುತ್ತದೆ. ಚಂದ್ರಬಿಂಬ ಪೂರ್ಣಛಾಯಾ ಪ್ರದೇಶದೊಳಗೆ ಪೂರ್ತಿಯಾಗಿ ಮರೆಯಾಗುವುದಿಲ್ಲ. ಸೂರ್ಯಗ್ರಹಣದಂದು ಪೂರ್ಣಛಾಯೆಯ ನೆರಳು ಆಫ್ರಿಕಾದ ಉತ್ತರಭಾಗ, ಟರ್ಕಿ, ರಷ್ಯಾ – ಹೀಗೆ ಹಾದುಹೋಗುತ್ತದೆ. ಆ ಪ್ರದೇಶಗಳಲ್ಲಿ ಹಗಲಿನಲ್ಲೇ ಕತ್ತಲಿನ ಅನುಭವ. ಉತ್ತರ ಭಾರತದ ಕೆಲವು ಭಾಗಗಳಿಂದ ಪಾರ್ಶ್ವ ಗ್ರಹಣ-ಕೇವಲ ಶೇಕಡಾ ೩ರಿಂದ ೧೦ರಷ್ಟು ಮರೆಯಾದ ಹಾಗೆ ಕಾಣುತ್ತದೆ.



೫ನೇ ತಾರೀಖಿನ ಸಂಜೆ ಕೃತ್ತಿಕಾ ಗುಚ್ಛದ ನಕ್ಷತ್ರಗಳು ಒಂದೊಂದಾಗಿ ಚಂದ್ರನ ಹಿಂದೆ ಮರೆಯಾಗುವುವು.

ಭೂಮಿ ಸೂರ್ಯನನ್ನು ಸುತ್ತಿಬರುವ ವಾರ್ಷಿಕ ಚಲನೆಯ ಒಂದು ಮುಖ್ಯ ಹಂತ ಈ ತಿಂಗಳ ೨೧ರಂದು. ವಸಂತ ವಿಷುವ ಎಂದದರ ಹೆಸರು. ಆ ದಿನ ಹಗಲು ರಾತ್ರಿಗಳ ಅವಧಿ ಸಮ. ಚಳಿಗಾಲದ ದೀರ್ಘರಾತ್ರಿಗಳ ಮುಕ್ತಾಯದ ಸೂಚನೆ ಇದು. ವಸಂತದ ಆಗಮನ. 'ಯುಗಾದಿ' ಎಂಬ ಖಗೋಳ ವೈಜ್ಞಾನಿಕ ಘಟನೆ ಇದು. ಆ ಮುಂದೆ ಹಗಲಿನ ಅವಧಿ ದೀರ್ಘವಾಗುವುದು.

ಕ್ಷೀಣವಾದ ಧೂಮಕೇತು ಮೆಕ್‌ನಾಟ್ ಮೀನದಿಂದ ಮೇಷದತ್ತ ಹೊರಟಿದೆ. ದುರ್ಬೀನುಗಳಿಗೆ ಮಾತ್ರ ಇದು ಕಾಣಬಹುದು. ಇನ್ನೊಂದು ಹಳೆಯ ಧೂಮಕೇತು ಶ್ವಾಸ್‌ಮನ್-ವಾಚ್‌ಮನ್ ಬೆಳಗಿನ ಸ್ವಾತಿನಕ್ಷತ್ರದ ಆಸುಪಾಸಿನಲ್ಲಿದೆ. ಸುಮಾರು

೫೫ನೇ ಪುಟಕ್ಕೆ




# ಒಬ್ಬ ಮಾಟಗಾತಿಯ ಆತ್ಮಕಥೆ

ಉತ್ತರ ಭಾರತದಲ್ಲಿ, ಮುಖ್ಯವಾಗಿ ಪಶ್ಚಿಮ ಬಂಗಾಳ, ಬಿಹಾರ, ಒರಿಸ್ಸಾ, ಉತ್ತರ ಪ್ರದೇಶ ಮತ್ತು ಮಧ್ಯ ಪ್ರದೇಶಗಳ ಹಳ್ಳಿಗಳಲ್ಲಿ ಅಸಹಾಯಕ ಹೆಣ್ಣುಗಳನ್ನು ಮಾಟಗಾತಿಯ ಪಟ್ಟಕಟ್ಟಿ ಸಾಯಿಸುವುದು ದಿನನಿತ್ಯದ ಸುದ್ದಿಯೇ ಆಗಿದೆ. ಅದೂ ಎಂತಹ ಹತ್ಯೆ ! ಕಲ್ಲುಗಳನ್ನು ಬೀರಿ, ದೊಣ್ಣೆಯಿಂದ ಬಡಿದು, ಇಲ್ಲವೇ ಮೈಗೆ ಬೆಂಕಿಹಚ್ಚಿ ಸುಡುವ ಬರ್ಬರ ಹತ್ಯೆ. ಹತ್ಯೆಗೆ ಮುನ್ನ ಊರಲ್ಲೆಲ್ಲ ಆಕೆಯ ಬೆತ್ತಲೆ ಮೆರವಣಿಗೆ. ಆದರೆ ಹೀಗೆ ಸಾಯುವ ಹೆಂಗಸರಲ್ಲಿ ನೂರರಲ್ಲಿ ನೂರರಷ್ಟು ಜನರೂ ನಿರ್ದೋಷಿಗಳೇ. ಹಾಗಾದರೆ ಏಕೆ ಇವರನ್ನು ಮಾಟಗಾತಿಯರೆಂದು ಹೇಳಿ ಸಾಯಿಸಲಾಗುತ್ತದೆ ? ಇದಕ್ಕೆ ಅನೇಕ ಕಾರಣಗಳಿವೆ. ಗಂಡನನ್ನು ಕಳೆದುಕೊಂಡ, ಮಕ್ಕಳಿಲ್ಲದ ಆದರೆ ಅಷ್ಟೋ ಇಷ್ಟೋ ಜಮೀನನ್ನು ಹೊಂದಿರುವ ವಿಧವೆಯರು, ಹಳ್ಳಿಯ ಮುಖಂಡನ, ಶ್ರೀಮಂತನ, ಜಮೀನುದಾರನ ಕಾಮಲಾಲಸೆಗೆ ಒಲಿಯದ ಬಡ, ಸಾಮಾನ್ಯವಾಗಿ ಕೆಳವರ್ಗದ, ಹೆಣ್ಣು, ಬಂಜೆಯರು – ತಮ್ಮ ಹತ್ತಿರದ ಸಂಬಂಧಿಕರ, ಹಳ್ಳಿಯ ಬಲಾಢ್ಯರ, ಕಂದಾಚಾರಿಗಳ, ದುರಾಸೆಗೆ, ಲಾಲಸೆಗೆ, ಕುಟಿಲತೆಗೆ ಬಲಿಯಾಗುತ್ತಾರೆ. ತಾಂಡವವಾಡುತ್ತಿರುವ ಅನಕ್ಷರತೆ, ಕಿತ್ತುತಿನ್ನುವ ಬಡತನ, ರಕ್ತದಲ್ಲಿಯೇ ಸೇರಿಹೋಗಿರುವ ಮೂಢನಂಬಿಕೆಗಳು, ಇವೆಲ್ಲವುಗಳ ಫಲವಾಗಿ ಉಂಟಾದ ದೈನೇಸಿ ಭಾವಗಳು ಇಂತಹ ಹತ್ಯೆಯ ಹಿನ್ನೆಲೆಯಲ್ಲಿವೆ. ದುರಾಸೆಯ ಸಂಬಂಧಿಕ, ಲಾಲಸೆಯ ಶ್ರೀಮಂತ, ಸ್ವಪ್ರತಿಷ್ಠೆಯ ಮಂತ್ರವಾದಿ, ಪೂಜಾರಿಗಳು ಅಸಹಾಯಕ, ನಿಷ್ಪಾಪಿ ಹೆಂಗಸರನ್ನು ಮಾಟಗಾತಿಯರೆಂದು ಕರೆದು, ಅವರ ಜೀವವನ್ನು ಹೊಸಕಿಹಾಕಿಬಿಡುತ್ತಾರೆ. ಯಾವುದೇ ಹೆಂಗಸಿನ ಮೇಲೆ ಯಾವುದೇ ವ್ಯಕ್ತಿಗೆ ಮಾಟಗಾತಿ ಎನ್ನುವ ಸಂಶಯ ಬಂದರೆ ಸಾಕು, ಆ ಹೆಣ್ಣಿಗೆ ಸಾವು ಕಟ್ಟಿಟ್ಟ ಬುತ್ತಿ.




ಇಂತಹ ಪರಿಸ್ಥಿತಿಯಲ್ಲಿ ನಿಜವಾದ ಮಾಟಗಾತಿಗೆ ತಾನೊಬ್ಬ ಮಾಟಗಾತಿ ಎಂದು ಹೇಳಿಕೊಳ್ಳಲು ಎಂಟೆದೆ ಬೇಕು. ಅಂತಹ ಸಾಹಸಿ ಇಪ್ಸಿತಾ ರಾಯ್ ಚಕ್ರವರ್ತಿ. ತನ್ನನ್ನೇ ತಾನು ಮಾಟಗಾತಿ ಎಂದು ಹೇಳಿಕೊಂಡಿರುವುದಷ್ಟೇ ಅಲ್ಲ, ತನ್ನ ಆತ್ಮಚರಿತ್ರೆಯನ್ನು ಪ್ರಕಟಿಸುವ ಮೂಲಕ ಅದನ್ನು ಢಣಾಡಂಗುರವಾಗಿ ಸಾರಿದ್ದಾರೆ. 'ಪ್ರಿಯ ಮಾಟಗಾತಿ' (ಬಿಲವೆಡ್ ವಿಚ್) ಅವರ ಆತ್ಮಕಥೆ. ಇಂಗ್ಲಿಷಿನ ಈ ಕೃತಿಯನ್ನು (ಹಾರ್‌ಪರ್ ಕಾಲಿನ್ಸ್ ಇಂಡಿಯಾ) ಇವರು ೨೦೦೦ದಲ್ಲಿ ಪ್ರಕಟಿಸಿದ್ದಾರೆ.

ಇಪ್ಸಿತಾ ಜನಿಸಿದ್ದು ಕಲ್ಕತ್ತಾದ ಒಂದು ಉಚ್ಚ ವರ್ಗದ ಕುಟುಂಬದಲ್ಲಿ. ಅವರೇ ಹೇಳಿಕೊಳ್ಳುವಂತೆ, ''ನನ್ನ ಕೆಲಸವನ್ನು ಪರಿಪೂರ್ಣಗೊಳಿಸಲು ನನಗೆ ಒಂದು 'ಪ್ರಭಾವಶಾಲಿ' ಕುಟುಂಬದ ಅವಶ್ಯಕತೆ ಇತ್ತು, ಆದುದರಿಂದ ಇದೇ ತಂದೆ-ತಾಯಿಗಳನ್ನು ನಾನು ಆಯ್ಕೆ ಮಾಡಿಕೊಂಡೆ.'' ತನ್ನ ತಂದೆಯನ್ನು ಹಿಂದಿನ ಜನ್ಮಗಳಲ್ಲಿಯೇ ಭೇಟಿ ಮಾಡಿದುದಾಗಿಯೂ, ಅವರಿಂದ ಅನೇಕ ಬಾರಿ ಸಲಹೆ, ಸಹಕಾರಗಳನ್ನು ಪಡೆದುದಾಗಿಯೂ ಇಪ್ಸಿತಾ ನಂಬಿದ್ದಾರೆ. ಪುನರ್‌ಜನ್ಮದಲ್ಲಿ ಗಾಢನಂಬಿಕೆಯನ್ನು ಹೊಂದಿರುವ ಇಪ್ಸಿತಾ, ಹದಿನಾರನೆಯ ಶತಮಾನದಲ್ಲಿದ್ದ ಮಾಟಗಾತಿ ಲೂಸಿಯಾನಳೇ ತಾನು ಎಂದೂ ನಂಬಿದ್ದಾರೆ.

ಇಪ್ಸಿತಾರ ಅಜ್ಜ ಬ್ರಹ್ಮಸಮಾಜಿ. ಅವರ ತಂದೆ ಮಾಂಟ್ರಿಯಲ್‌ನ ಅಂತರರಾಷ್ಟ್ರೀಯ ವಿಮಾನಯಾನ ಸಂಸ್ಥೆಯ ಭಾರತದ ಖಾಯಂ ಸದಸ್ಯರು. ಅಲ್ಲಿಯೇ ಇಪ್ಸಿತಾಗೆ ಮಿಸೆಸ್ ಡೆಲಾರಿಯೋರ ಪರಿಚಯವಾಗುತ್ತದೆ. ಅವರ ಮೂಲಕವೇ ಇಪ್ಸಿತಾ ಒಂದು ಗುಪ್ತ ಸಂಘಟನೆಯೊಂದಿಗೆ ಸಂಪರ್ಕ ಬೆಳೆಸುತ್ತಾರೆ. ಆ ಸಂಘಟನೆಯಲ್ಲಿಯೇ ಅಪರೂಪದ ವಿಷಯಗಳ ಅಧ್ಯಯನ ನಡೆಸುತ್ತಾರೆ. ಪ್ರಾಚೀನ ನಾಗರಿಕತೆ ಮತ್ತು ಸಂಸ್ಕೃತಿಗಳು, ಈಜಿಪ್ಟಿನ ಪುರಾಣಶಾಸ್ತ್ರ, ಹಿಂದೂ ಪುರಾಣಶಾಸ್ತ್ರ ಮತ್ತು ದೇವತೆಗಳು, ತಾವೋ ಧರ್ಮ, ವಿವಿಧ ಜನಾಂಗಗಳ ನಿಗೂಢ ನಂಬಿಕೆಗಳು ಇತ್ಯಾದಿಗಳನ್ನು ಅವರ ಅಧ್ಯಯನವು ಒಳಗೊಂಡಿತ್ತು. ಆ ಮೂಲಕವೇ ಅವರು ಮಾಟಗಾತಿಯಾಗುವ ನಿರ್ಧಾರ ತೆಗೆದುಕೊಳ್ಳುತ್ತಾರೆ. ಇದಕ್ಕಾಗಿ ಸತತ ನಾಲ್ಕು ವರ್ಷಗಳ ಕಾಲ ಅಧ್ಯಯನ, 'ಸಾಧನೆ' ಮಾಡುತ್ತಾರೆ. ಮುಂದೆ ಅಧಿಕೃತವಾಗಿ ಮಾಟಗಾತಿಯಾಗುತ್ತಾರೆ.

ಮಾಂಟ್ರಿಯಲ್‌ನಿಂದ ಸ್ವಲ್ಪ ದೂರದ ಪರ್ವತದ ತಪ್ಪಲಿನಲ್ಲಿನ ಒಂದು ಷ್ಯಾಲೆಯೇ (ಕುಟೀರ) ಅವರ ಶಾಲೆ. ಹೊರನೋಟಕ್ಕೆ ಅದೊಂದು ಕ್ಲಬ್‌ಹೌಸ್. ಎರಡು ಅಂತಸ್ತುಗಳ ಆ ಕಟ್ಟಡವೂ ಸಹ, ಅಲ್ಲಿ ವಾಸಿಸುತ್ತಿದ್ದ ಜನರಂತೆಯೇ ಮೇಲುನೋಟಕ್ಕೆ ಸಾಧಾರಣ ಕಟ್ಟಡದಂತೆ ಕಂಡರೂ, ಅನೇಕ ಅದ್ಭುತ, ಆಶ್ಚರ್ಯಕರ ನಿಗೂಢಗಳನ್ನು ಹೊಂದಿತ್ತು. ಅಲ್ಲಿನ ನೆಲ ಅಗೋಚರ, ಆದರೆ ಅನುಭವಗಮ್ಯಶಕ್ತಿಯಿಂದ ಪರಿಪೂರ್ಣಗೊಂಡಿತ್ತು.

ಇಲ್ಲಿನ ಮತ್ತು ನಂತರದ ತಮ್ಮ ಅನುಭವಗಳ ಮೂಲಕ ಇಪ್ಸಿತಾ ಅವರು ನಾವು ಇದುವರೆಗೆ ಕಂಡು ಕೇಳರಿಯದ ವಿಸ್ಮಯಗಳ ಪರಿಚಯ ಮಾಡಿಕೊಡುತ್ತಾರೆ. ಪುಸ್ತಕವನ್ನು ಓದುತ್ತಿರುವಂತೆಯೇ ಹೌದೇ ? ಇದು ಸಾಧ್ಯವೇ ? ಹೀಗೆ ಆಗಬಹುದೇ ? ಎನ್ನುವ ಪ್ರಶ್ನೆಗಳನ್ನು ನಮಗೆ ನಾವೇ ಕೇಳಿಕೊಳ್ಳುತ್ತೇವೆ. ಆದರೆ ಅವರ ಮಾತುಗಳನ್ನು ನಂಬದಿರಲು ಯಾವುದೇ ಕಾರಣಗಳು ನಮಗೆ ಹೊಳೆಯುವುದಿಲ್ಲ.

ಮಾಟಗಾತಿಯಾಗಲು ನಡೆಸುವ ದೀಕ್ಷಾಕ್ರಮ, ಅದಕ್ಕಾಗಿ ಜಗತ್ತಿನ ನಾನಾ ಕಡೆಗಳಿಂದ ಸಂಗ್ರಹಿಸಲಾದ ವಸ್ತುಗಳ ಬಳಕೆ, ಸ್ಫಟಿಕದ ತಲೆಬುರುಡೆಗಳು, ಷ್ಯಾಲೆಯಲ್ಲಿದ್ದ ಸಾವಿರ ಸ್ಫಟಿಕಗಳ ಕೊಠಡಿ, ಮರ ಮತ್ತು ಕಲ್ಲುಗಳ ಜೊತೆಗಿನ ಮಾತುಕತೆ (?), ಅರಿಝೋನಾದ ಗ್ರ್ಯಾಂಡ್ ಕ್ಯಾನ್ಯನ್ ಕೊಲರಾಡೋ ನದಿ ದಂಡೆಯಲ್ಲಿ ಆದ ಅನುಭವ – ಇತ್ಯಾದಿಗಳ ವಿವರಣೆ, ವರ್ಣನೆಗಳನ್ನು ಓದುತ್ತಿರುವಾಗ ಒಂದು ಫ್ಯಾಂಟಸಿ ಸಿನಿಮಾ ನೋಡಿದ ಅನುಭವ ನಮಗಾಗುತ್ತದೆ.

**ಜಿ. ಕುಮಾರಪ್ಪ**

*ನಾಲ್ಕು ವಿಭಾಗಗಳಲ್ಲಿ ಬರೆಯಲಾಗಿರುವ ಇಪ್ಸಿತಾ ಅವರ ಜೀವನ ಚರಿತ್ರೆಯಲ್ಲಿ ಅವರ ಬದುಕು, ಮಾಟಗಾತಿ ವಿದ್ಯೆಯ ಅಧ್ಯಯನ, ಆ ನಿಗೂಢ ಬದುಕಿನ ಅಸ್ಪಷ್ಟ ನೋಟ, ಪ್ರಾಚೀನ ಹಾಗೂ ಸಮಕಾಲೀನ ಕಾಲದ ಮಾಟಗಾತಿಯರೆನ್ನಿಸಿಕೊಂಡ ಹತಭಾಗಿ ಹೆಣ್ಣುಗಳ ಮೇಲೆ ನಡೆದ, ನಡೆಯುತ್ತಿರುವ ಕ್ರೂರ ಹಿಂಸೆ – ಎಲ್ಲವೂ ಹಾಸುಹೊಕ್ಕಾಗಿವೆ. ಹಾಗೆಂದು ಅವರು ಎಲ್ಲವನ್ನೂ ವಿವರವಾಗಿ ಹೇಳುವುದಿಲ್ಲ. ತಮ್ಮ ವಿದ್ಯೆ ಮತ್ತು ಆಚರಣೆಗಳ ಬಗ್ಗೆ ಹೇಳುವಾಗ ಬಹಳ ಎಚ್ಚರ ವಹಿಸುತ್ತಾರೆ. ಆ ಬಗ್ಗೆ ತುಣುಕು-ತುಣುಕಾದ ಮಾಹಿತಿಯನ್ನು ಮಾತ್ರ ಇಲ್ಲಿ ನೀಡುತ್ತಾರೆ. ಇಡೀ ಸಿನಿಮಾ ತೋರಿಸದೆ, ಕೇವಲ ಟ್ರೈಯ್ಲರ್ ತೋರಿಸಿದಂತೆ.*

ಆದರೆ, ತನ್ನ ಚಿಕ್ಕಪ್ಪನ ಬಗ್ಗೆ ತೋರುವ ಸಿಟ್ಟು, "೧೯೮೭ರಲ್ಲಿ ಪಶ್ಚಿಮ ಬಂಗಾಳದಲ್ಲಿ ಹದಿನೇಳು ಜನ ಹೆಂಗಸರನ್ನು ಮಾಟಗಾತಿಯರೆನ್ನುವ ಸಂಶಯದ ಮೇಲೆ ಕೊಲೆಮಾಡಲಾಗಿದೆ'' ಎನ್ನುವ ಜ್ಯೋತಿ ಬಸು ಅವರ ಹೇಳಿಕೆಗೆ ಇಪ್ಸಿತಾರ ಕಟು ಟೀಕೆ, ತನ್ನ ಮಾಟವಿದ್ಯೆಯನ್ನು ಬಳಸಿ ಜನರಿಗೆ ನೀಡುವ ಚಿಕಿತ್ಸೆ, ಅವರ ವಿವಾಹ ಮತ್ತು ವಿವಾಹ ಜೀವನದ ವರ್ಣನೆಗಳನ್ನು ಓದುವಾಗ ಇಪ್ಸಿತಾ ಈ ನೆಲದ ಹೆಣ್ಣು ಎನ್ನುವುದು ನಮಗೆ ಪದೇ ಪದೇ ನೆನಪಿಗೆ ಬರುತ್ತದೆ.



ನಾಲ್ಕು ವಿಭಾಗಗಳಲ್ಲಿ ಬರೆಯಲಾಗಿರುವ ಇಪ್ಸಿತಾ ಅವರ ಜೀವನ ಚರಿತ್ರೆಯಲ್ಲಿ ಅವರ ಬದುಕು, ಮಾಟಗಾತಿ ವಿದ್ಯೆಯ ಅಧ್ಯಯನ, ಆ ನಿಗೂಢ ಬದುಕಿನ ಅಸ್ಪಷ್ಟ ನೋಟ, ಪ್ರಾಚೀನ ಹಾಗೂ ಸಮಕಾಲೀನ ಕಾಲದ ಮಾಟಗಾತಿಯರೆನ್ನಿಸಿಕೊಂಡ ಹತಭಾಗಿ ಹೆಣ್ಣುಗಳ ಮೇಲೆ ನಡೆದ, ನಡೆಯುತ್ತಿರುವ ಕ್ರೂರ ಹಿಂಸೆ – ಎಲ್ಲವೂ ಹಾಸುಹೊಕ್ಕಾಗಿವೆ. ಹಾಗೆಂದು ಅವರು ಎಲ್ಲವನ್ನೂ ವಿವರವಾಗಿ ಹೇಳುವುದಿಲ್ಲ. ತಮ್ಮ ವಿದ್ಯೆ ಮತ್ತು ಆಚರಣೆಗಳ ಬಗ್ಗೆ ಹೇಳುವಾಗ ಬಹಳ ಎಚ್ಚರ ವಹಿಸುತ್ತಾರೆ. ಆ ಬಗ್ಗೆ ತುಣುಕು-ತುಣುಕಾದ ಮಾಹಿತಿಯನ್ನು ಮಾತ್ರ ಇಲ್ಲಿ ನೀಡುತ್ತಾರೆ. ಇಡೀ ಸಿನಿಮಾ ತೋರಿಸದೆ, ಕೇವಲ ಟ್ರೈಯ್ಲರ್ ತೋರಿಸಿದಂತೆ.

ಮಾಟಗಾತಿಯ ಕಥೆ ಎಂದ ಕೂಡಲೇ ನಾವು ಕಲ್ಪಿಸಿಕೊಳ್ಳಬಹುದಾದ ಹ್ರಾಂ... ಹ್ರೀಂ... ಹ್ರೂಂ... ಕಾರಗಳ ಹೂಂಕಾರ ಇಲ್ಲಿಲ್ಲ; ಚದುರಿಬಿದ್ದ ತಲೆಬುರುಡೆ, ಮೂಳೆಗಳ ದರ್ಶನವಿಲ್ಲ; ಬಲಿಕೊಟ್ಟ ಪ್ರಾಣಿಗಳ ರುಂಡ ಮುಂಡಗಳಿಲ್ಲ; ಅವುಗಳ ಮೈಯಿಂದ ಹರಿದ ರಕ್ತದಿಂದ ನೆಲ ಕೆಂಪಾಗುವುದಿಲ್ಲ; ಮಂತ್ರವಾದಿಯ ಪೂಜೆಗೆ ಒಳಗಾಗುವ ಅಕರಾಳ ವಿಕರಾಳ ಮೂರ್ತಿಗಳಿಲ್ಲ; ಉನ್ಮಾದಕ್ಕೆ ಒಳಗಾಗಿ ತಲೆಯನ್ನೆಲ್ಲ ಕೆದರಿಕೊಂಡು ಕುಳಿತ ಹೆಂಗಸರಿಲ್ಲ. ಇರುವುದೆಲ್ಲವೂ ತಣ್ಣನೆಯ ಬದುಕು; ಗಾಜಿನ ಬೋಗುಣಿಯಲ್ಲಿ ತುಂಬಿದ ನೀರಿನಲ್ಲಿ ತೇಲುವ ಗುಲಾಬಿ ಪಕಳೆಗಳು; ಮೆಲು ಉಸಿರಿನಲ್ಲಿ ಹೇಳುವ ಮಂತ್ರೋಕ್ತಿಗಳು; ನಟ್ಟ ನಡುರಾತ್ರಿಯಲ್ಲಿ ಪಂಚ ಭೂತಗಳನ್ನೂ ಒಳಗೊಂಡ ಚತುರ್ಭೂತಗಳ ಅನುಭವಗಮ್ಯ ಪಿಸು ಸದ್ದು; ಮನುಷ್ಯನ ಸ್ಪರ್ಶ ಮಾತ್ರಕ್ಕೆ ಪ್ರತಿಕ್ರಿಯಿಸುವ ಮರ; ಅಂಗಾಲುಗಳ ಮೂಲಕ ಶರೀರವನ್ನು ಪ್ರವೇಶಿಸುವ ನೆಲದ ಪವಿತ್ರ ಚೈತನ್ಯ – ಹೀಗೆ ಅಸಹಜವೆನ್ನಿಸುವ ಎಷ್ಟೋ ವಿಚಾರಗಳೂ, ಘಟನೆಗಳೂ ಇಲ್ಲಿ ಸಹಜವೆನ್ನಿಸಿಬಿಡುತ್ತವೆ.

೨೮೨ ಪುಟಗಳ ಈ ಕೃತಿಯನ್ನು ಓದುತ್ತಿರುವಾಗ ಆ್ಯಲಿಸಳೊಂದಿಗೆ ವಿಚಿತ್ರ ಜಗತ್ತಿನಲ್ಲಿ ಪ್ರವಾಸ ಮಾಡಿದಂತೆ ಅನ್ನಿಸಿ ಎದೆಬಡಿತ ಕೊಂಚಮಟ್ಟಿಗಾದರೂ ಹೆಚ್ಚುತ್ತದೆ. ಇಡೀ ಪುಸ್ತಕವನ್ನು ಓದಿ ಮುಗಿಸಿದ ಮೇಲೆ ಜೀವ-ಜಂತುಗಳನ್ನೂ, ಮರ-ಗಿಡಗಳನ್ನೂ – ಒಟ್ಟಾರೆ ಜಗತ್ತನ್ನು – ನೋಡುವ ನಮ್ಮ ದೃಷ್ಟಿಕೋನ ಸ್ವಲ್ಪಮಟ್ಟಿಗಾದರೂ ಬದಲಾಗುತ್ತದೆ. ಪುಸ್ತಕದ ಸಾರ್ಥಕತೆ ಇರುವುದೂ ಇದರಲ್ಲಿಯೇ.

"ಪ್ರತಿಯೊಬ್ಬ ಶಕ್ತ, ಸಮರ್ಥ, ಸುಂದರ ಹೆಂಗಸೂ ಮಾಟಗಾತಿಯೇ. ಯಾವಾಗಲೂ ಆಕೆ ಬೇಟೆಯ ಪ್ರಾಣಿ. ತನ್ನ ಅಂಕೆಗೆ ಸಿಗದ ಹೆಂಗಸನ್ನು ಸಹಿಸುವುದು ಬಹುಪಾಲು ಪುರುಷರಿಗೆ ಸ್ವಭಾವವಿರುದ್ಧವಾದುದು'' ಎನ್ನುತ್ತಾರೆ ಇಪ್ಸಿತಾ ರಾಯ್ ಚಕ್ರವರ್ತಿ 'Beloved Witch' ಕೃತಿಯಲ್ಲಿ.

ಜಿ. ಕುಮಾರಪ್ಪ
ಅಸಿಸ್ಟೆಂಟ್ ಲೈಬ್ರೇರಿಯನ್ ಅಂಡ್ ಇನ್‌ಫರ್‌ಮೇಷನ್ ಆಫೀಸರ್, ನ್ಯಾಷನಲ್ ಲೈಬ್ರರಿ, ಬೆಲವೆಡೆರ್, ಕೋಲ್ಕತ್ತ - ೭೦೦ ೦೨೭

*೫೩ನೇ ಪುಟದಿಂದ (ಕೃತ್ತಿಕಾ "ಗ್ರಹಣ")*



*೨೫ರ ಬೆಳಗಿನ ಜಾವ ಶುಕ್ರ-ಚಂದ್ರ ಸಮಾಗಮ*

ಆರುವರ್ಷಗಳಿಗೊಮ್ಮೆ ಬಂದುಹೋಗುವ ಈ ಚಿಕ್ಕ ಕಾಯ ೧೯೯೫ರಲ್ಲಿ ಬಂದಿದ್ದಾಗ ಮೂರು ಪಾಲಾಗಿ ಸಿಡಿಯಿತು. ಒಂದೊಂದು ತುಂಡೂ ಪ್ರಕಾಶಮಾನವಾಗಿ ಕಂಡಿತ್ತು. ಈಗದು ಎಷ್ಟು ಪ್ರಕಾಶಮಾನವಾಗಿ ಕಾಣಬಹುದು ? ಇದನ್ನು ಖಚಿತವಾಗಿ ಹೇಳುವಂತಿಲ್ಲ.

## ಖಗೋಳ ದಿನಚರಿ

೦೧ ಚಂದ್ರನ ಪಕ್ಕ ಬುಧ (೪ ಡಿಗ್ರಿ)*
೦೨ ಬುಧಗ್ರಹದ ಹಿನ್ನಡೆ ಆರಂಭ
೦೫ ಗುರುಗ್ರಹದ ಹಿನ್ನಡೆ ಆರಂಭ
ಕೃತ್ತಿಕೆಯ ಆಚ್ಛಾದನೆ*
೦೬ ಮಂಗಳ-ಚಂದ್ರ ನಡುವೆ ೩ ಡಿಗ್ರಿ ಕೋನ*
ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ)
೧೦ ಶನಿ-ಚಂದ್ರ ನಡುವೆ ೪ ಡಿಗ್ರಿ ಕೋನ*
ಮಂಗಳ ರೋಹಿಣಿ ನಡುವೆ ೭ ಡಿಗ್ರಿ ಕೋನ
೧೩ ಭೂಮಿ-ಚಂದ್ರ ನಡುವೆ ಕನಿಷ್ಠ ದೂರ
೧೫ ಹುಣ್ಣಿಮೆ. ಬೆಳಿಗ್ಗೆ ೦೫.೦೫ಕ್ಕೆ
ಪಾರ್ಶ್ವಛಾಯಾ ಚಂದ್ರಗ್ರಹಣ (೨.೫೨ರಿಂದ ೭.೪೩)
೧೭ ಚಂದ್ರ-ಚಿತ್ರಾ ನಡುವೆ ಕನಿಷ್ಠಕೋನ
(ಆಚ್ಛಾದನೆ ಕಾಣುವುದಿಲ್ಲ)
೧೯ ಚಂದ್ರ-ಗುರು ನಡುವೆ ೫ ಡಿಗ್ರಿ ಕೋನ*
೨೦ ವಸಂತ ವಿಷುವ ೨೩.೨೬ಕ್ಕೆ
೨೧ ಚಂದ್ರ-ಜ್ಯೇಷ್ಠಾ ನಡುವೆ ಕನಿಷ್ಠ ಕೋನ (ಆಚ್ಛಾದನೆ ಕಾಣುವುದಿಲ್ಲ)*
೨೨ ಚಾಂದ್ರಮಾಸದ ಕೊನೆಯ ಪಾದ
(ಚಂದ್ರೋದಯ ನಡುರಾತ್ರಿಗೆ)
೨೪ ಬುಧಗ್ರಹದ ಹಿನ್ನಡೆ ಮುಕ್ತಾಯ
೨೫ ಶುಕ್ರಗ್ರಹದ ಕೋನೋನ್ನತಿ, ಗರಿಷ್ಠ ಚಂದ್ರ-ಶುಕ್ರ ನಡುವೆ ೬ ಡಿಗ್ರಿ ಕೋನ*
೨೭ ಚಂದ್ರ-ಬುಧ ಎರಡು ಡಿಗ್ರಿ ಕೋನ
ಯುರೇನಸ್ ಗ್ರಹವನ್ನು ಚಂದ್ರ ಮುಚ್ಚುವುದು
೨೮ ಭೂಮಿ-ಚಂದ್ರ ನಡುವೆ ಗರಿಷ್ಠದೂರ
೨೯ ಅಮಾವಾಸ್ಯೆ ೧೫.೪೫ಕ್ಕೆ
ಸೂರ್ಯಗ್ರಹಣ (೧೩.೦೭ರಿಂದ ೧೮.೧೫)
ದಕ್ಷಿಣ ಭಾರತಕ್ಕೆ ಕಾಣುವುದಿಲ್ಲ.

(* ಛಾಯಾಗ್ರಹಣಕ್ಕೆ ಒಳ್ಳೆಯ ಅವಕಾಶ)

ಡಾ॥ ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು - [illegible]



## ಫಿಸಿಕ್ಸ್ ಮತ್ತು ಐನ್‌ಸ್ಟೈನ್

*ಅಡ್ಡನಡ್ಕ ಕೃಷ್ಣಭಟ್*

**ಪುಟ : ೧೩೨** **ಬೆಲೆ : ರೂ. ೭೦**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೧

ಮಹತ್ತರವಾದದ್ದನ್ನು ಸಾಧಿಸಿ ಮರೆಯಾದವರನ್ನು ಅವರ ಸಾಧನೆಗಳ ಮೂಲಕ ನೆನಪಿಸಿಕೊಳ್ಳುತ್ತಾ ಶತಾಬ್ದಿಗಳನ್ನು ಆಚರಿಸುವುದು ನಾವುಗಳು ಅವರಿಗೆ ತೋರಿಸುತ್ತ ಬಂದಿರುವ ಗೌರವ. ಆಲ್ಬರ್ಟ್ ಐನ್‌ಸ್ಟೈನ್ ಮಹಾನ್ ಪ್ರತಿಭೆ; ಯುಗಪ್ರವರ್ತಕ ಸಂಶೋಧನೆಗಳನ್ನು ಮಾಡಿದಾತ. ಜರ್ಮನಿಯಲ್ಲಿ ಹುಟ್ಟಿ ಅಮೆರಿಕಾದಲ್ಲಿ ಮರೆಯಾದ ಈತ ಜಗತ್ತಿನ ಎಲ್ಲರಿಗೂ ತಮ್ಮವನೆನಿಸುವಂತೆ ಸಾಗಿದ ಜೀವನ ರೇಖೆ. ಈತನ ಜನ್ಮ ಶತಾಬ್ದವನ್ನು 'ಜಾಗತಿಕ ಫಿಸಿಕ್ಸ್ ವರ್ಷ'ದ ಆಚರಣೆಯಲ್ಲಿ ಭೌತ ಅಧ್ಯಯನದ ಬಗ್ಗೆ ಅಭಿರುಚಿಯನ್ನು ಅರಿವನ್ನು ಬೆಳೆಸಲು ಮಾಡಿರುವ ಪ್ರಯತ್ನವೇ ಅಡ್ಡನಡ್ಕ ಕೃಷ್ಣಭಟ್ಟರ ಈ ಕೃತಿ. ಐನ್‌ಸ್ಟೈನ್ ಜೀವನದ ಹಲವು ಒಳನೋಟಗಳು ಈ ಕೃತಿಯಲ್ಲಿವೆ.

## ರವೀಂದ್ರನಾಥ ಠಾಕೂರ್ ಕವಿತಾ ಸಂಚಯ



*ಅನು : ಜಿ. ರಾಮನಾಥ ಭಟ್*

**ಪುಟ : xii+೨೬೦** **ಬೆಲೆ : ರೂ. ೧೬೦**

**ಕಾವ್ಯಾಲಯ**, ಜಯನಗರ, ಮೈಸೂರು - ೫೭೦ ೦೧೪

ಜಿ. ರಾಮನಾಥ ಭಟ್‌ರವರು ಸಿವಿಲ್ ಇಂಜಿನಿಯರಿಂಗ್‌ನಲ್ಲಿ ಶಿಕ್ಷಣ ಪಡೆದು ಲೋಕೋಪಯೋಗಿ ಹಾಗೂ ನೀರಾವರಿ ಇಲಾಖೆಗಳಲ್ಲಿ ಸೇವೆ ಸಲ್ಲಿಸಿದ್ದರೂ ಸಾಹಿತ್ಯ ಅವರ ಬಹು ಮುಖ್ಯ ಆಸಕ್ತಿಯ ಕ್ಷೇತ್ರವಾಗಿದೆ. ಇದಕ್ಕೆ ನಿದರ್ಶನ ಅವರ 'ಕವಿತಾ ಸಂಚಯ'. ವಿಶ್ವಕವಿ ರವೀಂದ್ರನಾಥ ಠಾಕೂರರು ತಮ್ಮ ಮೂಲ ಬಂಗಾಲಿ ಕವನಗಳನ್ನು ಇಂಗ್ಲಿಷ್ ಭಾಷೆಗೆ ಅನುವಾದಿಸಿ ಪ್ರಕಟಿಸಿದ ಸಂಕಲನಗಳಿಂದ ಆಯ್ದ ೧೫೦ ಕವನಗಳನ್ನು ಹಾಗೂ 'ಫೈರ್‌ಫ್ಲೈಸ್' ಸಂಕಲನದ ಎಲ್ಲಾ ೨೫೬ ಹನಿಗವನಗಳು, 'ಲೇಖನ್'ನಿಂದ ಆರಿಸಿದ ೧೮ ಹನಿಗವನಗಳನ್ನು ರಾಮನಾಥ ಭಟ್ಟರು ಕನ್ನಡಕ್ಕೆ ಅನುವಾದಿಸಿದ್ದಾರೆ. ಮೂಲದ ಗೇಯತೆಯನ್ನು ಉಳಿಸಿಕೊಳ್ಳುವ ಪ್ರಯತ್ನ ಕಂಡುಬರುತ್ತದೆ.

## ಮಾಗಡಿ ಸೀಮೆ : ಇತಿಹಾಸ-ಸಂಸ್ಕೃತಿ



*ಡಾ|| ಮುನಿರಾಜಪ್ಪ*

**ಪುಟ : ೨೩೭+೮** **ಬೆಲೆ : ರೂ. ೧೪೦**

**ಸ್ಫೂರ್ತಿ ಪ್ರಕಾಶನ**, ಹೊಸಪಾಳ್ಯ, ಜನತಾ ಕಾಲೋನಿ, ದೊಡ್ಡ ಸೋಮನಹಳ್ಳಿ ಅಂಚೆ, ಮಾಗಡಿ ತಾಲ್ಲೂಕು

ಇತಿಹಾಸ ಪ್ರಾಧ್ಯಾಪಕ ಹಾಗೂ ಎನ್.ಸಿ.ಸಿ. ಅಧಿಕಾರಿಯಾಗಿರುವ ಡಾ|| ಮುನಿರಾಜಪ್ಪನವರು ಮಾಗಡಿ ಸೀಮೆಯಲ್ಲಿ ಕ್ಷೇತ್ರ ಕಾರ್ಯ ಆಧರಿಸಿ ಮಾಡಿದ ಪ್ರಾದೇಶಿಕ ವ್ಯಾಸಂಗದ ಮಾಲಿಕೆ ಇದಾಗಿದೆ. ಲೇಖಕರು ಅವರ ಮಿತ್ರರೊಂದಿಗೆ ಮಾಗಡಿ ಸುತ್ತಲಿನ ಐತಿಹಾಸಿಕ ಸ್ಥಳಗಳ ಪ್ರವಾಸ ಕೈಗೊಂಡಾಗ ಕಲ್ಲ ಮತ್ತು ಹೂಜಗಳಲ್ಲಿನ ಇತಿಹಾಸ ಮತ್ತು ಸಂಸ್ಕೃತಿಯ ಕುರಿತು ಸ್ಥಳೀಯರ ಕಾಳಜಿ ಕಂಡು ಅವರೊಳಗೆ ಮೂಡಿದ ಕುತೂಹಲ ಮಾಗಡಿ ಸೀಮೆ ಕುರಿತ ಸಂಶೋಧನೆಗೆ ತೊಡಗಿಸಿದೆ. ಚರಿತ್ರೆಯ ಶಿಸ್ತನ್ನು ಅರಮನೆ, ಗುರುಮನೆಗೆ ಸೀಮಿತಗೊಳಿಸುವುದನ್ನು ಬಿಟ್ಟು ಕಡೆಗಣಿಸಿದ್ದನ್ನು ಪರಿಗಣಿಸುವ ಪ್ರಯತ್ನಗಳಿಂದ ಚರಿತ್ರೆಯಲ್ಲಿರುವ ಹಲವಾರು ಗೊಂದಲ ಹಾಗೂ ಪೂರ್ವಗ್ರಹಗಳನ್ನು ನಿವಾರಿಸಬಹುದೆಂಬ ಬಲವಾದ ನಂಬಿಕೆ ನನ್ನದು' ಎಂದಿರುವ ಲೇಖಕರು ತಮ್ಮ ಸಂಶೋಧನ ಕೃತಿಗೆ ನ್ಯಾಯ ಒದಗಿಸಿದ್ದಾರೆ. ಮಾಗಡಿ ಸೀಮೆಯ ರಾಜಕೀಯ ಚರಿತ್ರೆ, ಆಡಳಿತ ಸ್ವರೂಪ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿ, ಧರ್ಮ ಮತ್ತು ಆಚರಣೆಗಳು, ಶಿಕ್ಷಣ-ಸಾಹಿತ್ಯ-ಕಲೆ ಒಂದೊಂದನ್ನೂ ಶಾಸನಗಳನ್ನು ಆಧರಿಸಿ ಬರೆದಿದ್ದಾರೆ.



## ತಲಪರಿಗೆ

*ಸಂ : ಕೋಟಿಗಾನಹಳ್ಳಿ ರಾಮಯ್ಯ*

**ಪುಟ : ೪೮೬ + ೧೨** **ಬೆಲೆ : ರೂ. ೩೦೦**

**ಚೌಕಿ ಸಂಸ್ಕೃತಿ ಕೇಂದ್ರ**, ೧೦೦೭, ಸಿದ್ಧಾರ್ಥ ಬಡಾವಣೆ, ಚನ್ನಸಂದ್ರ ರಸ್ತೆ, ಕಾಡುಗೋಡಿ, ಬೆಂಗಳೂರು - ೬೭

ಅಸ್ಪೃಶ್ಯತೆ ಒಂದು ವರ್ಗದ ಜನರನ್ನು ಅವಮಾನಕ್ಕೆ ಗುರಿಪಡಿಸಿ ಕೆಳಸ್ತರದಲ್ಲಿ ಬದುಕುವಂತೆ ಮಾಡಿದ ನೀಚ ಪದ್ಧತಿ. ಆಗಾಗ ವಿಷಮ ಸಂದರ್ಭಗಳು ಎದುರಾದವು ಎನ್ನುವುದಕ್ಕೆ ಕಂಬಾಲಪಲ್ಲಿ ಹಾಗೂ ನಾಗಲಾಪಲ್ಲಿಗಳಲ್ಲಿ ಜರುಗಿದ ಘಟನೆಗಳ ಉದಾಹರಣೆಗಳಿವೆ. ಇದಕ್ಕೆ ಕಾರಣ ಪ್ರತಿಯೊಬ್ಬ ಭಾರತೀಯನೂ ಕೂಡ 'ಭೇದ' ಅಥವಾ ತಾರತಮ್ಯವನ್ನು ಸಾರ್ವಜನಿಕವಾಗಿ 'ತಪ್ಪು' ಅನ್ನುತ್ತಾನೆ. ಆದರೆ ವೈಯಕ್ತಿಕ ನೆಲೆಯಲ್ಲಿ ಅದನ್ನು ಯಾವ ದ್ವಂದ್ವವೂ ಇಲ್ಲದೆ 'ಸರಿ' ಎಂಬಂತೆ ಆಚರಿಸುತ್ತಾನೆ. ಇಂಥ ಸಂದರ್ಭ ದಲ್ಲಿ ಅಸ್ಪೃಶ್ಯತೆಯ ಬಗ್ಗೆ ಮರುಚಿಂತಿಸುವ ಅಗತ್ಯವಿದೆ. ಈ ಕೃತಿ ಜೀವನದಿಯ ಜಾಡು ಹಿಡಿದು ಅಸ್ಪೃಶ್ಯ ಲೋಕದಲ್ಲೊಂದು ಪಯಣ ಎಂಬ ಅಡಿಬರಹ ಇದೆಯಾದರೂ ಇದು ಅಸ್ಪೃಶ್ಯ ಲೋಕದ ತಲ್ಲಣಗಳನ್ನು ಒಂದು ನಿರ್ದಿಷ್ಟ ಕಾಲಘಟ್ಟದಲ್ಲಿ ಗ್ರಹಿಸುವ ಪ್ರಯತ್ನ ಅಷ್ಟೇ. ಕೃತಿಯನ್ನು ಐದು ಭಾಗಗಳಾಗಿ ವಿಂಗಡಿಸಿ ಕೊಂಡು ಅನೇಕ ವಿಚಾರಗಳನ್ನು ಕಲೆಹಾಕಿದ್ದಾರೆ. ಇದೊಂದು ಸಾರ್ವಕಾಲಿಕ ದಾಖಲೆ.



## ಹೆಜ್ಜೆ ಗುರುತು

*ವ್ಯಾಸರಾಯ ಬಲ್ಲಾಳ*

**ಪುಟ : ೩೩೨** **ಬೆಲೆ : ರೂ. ೧೭೫**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**,

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು -೧

'ಹೆಜ್ಜೆ ಗುರುತು' ಬಲ್ಲಾಳರ ಮತ್ತೊಂದು ಮಹತ್ತರ ಕಾದಂಬರಿ. ಸ್ವಾತಂತ್ರ್ಯ ಹೋರಾಟದ ಕಥನ ಬಹುಪಾಲು ಇತಿಹಾಸದ ಭಾಗವೇ ಆಗಿಹೋಗಿದೆ. ಗಾಂಧೀಜಿಯ ನೇತೃತ್ವದಲ್ಲಿ ಮೊದಲುಗೊಂಡ ಹೋರಾಟವು ತಂದ ಸಾಮಾಜಿಕ ಪರಿವರ್ತನೆಯ ಸನ್ನಿವೇಶಗಳಿಗೆ ಸೃಜನಶೀಲ ಆಕಾರ ಕೊಡಲು ಇಚ್ಛಿಸಿದವರು ಬಲ್ಲಾಳರು. 'ಸ್ವತಂತ್ರ ಭಾರತದಲ್ಲಿ ಭಾರತದ ಲೋಕಸತ್ತಾತ್ಮಕ ಆಡಳಿತೆಗೆ ಭದ್ರ ಬುನಾದಿ ಹಾಕಿದ ನೆಹರೂ ಆಡಳಿತೆಯ ಹದಿನೇಳು ವರ್ಷ ಕಾಲ ಬೇರೆಯದೇ ಘಟ್ಟ. ಈ ಅವಧಿಯ ಸಾಮಾಜಿಕ ತಲ್ಲಣಗಳು ಈ ಕಾದಂಬರಿಗೆ ವಸ್ತುವನ್ನು ಒದಗಿಸಿವೆ' ಎಂದು ಕಾದಂಬರಿಯ ಹರವಿನ ಬಗ್ಗೆ ಬಲ್ಲಾಳರು ಹೇಳಿಕೊಂಡಿದ್ದಾರೆ. ಈ ಕಾದಂಬರಿಯಲ್ಲಿ ಕಾಣಬರುವ ಚರಿತ್ರೆಗಳನ್ನು - ರಾಜಕೀಯ ಚರಿತ್ರೆ, ಜಾತಿಗಳ ಕಟ್ಟುಪಾಡು, ಸಡಿಲಿದ ಸಾಮಾಜಿಕ ಚರಿತ್ರೆ, ಆರ್ಥಿಕ ಚರಿತ್ರೆ, ಸ್ತ್ರೀಯರ ಸ್ಥಾನಮಾನದ ಚರಿತ್ರೆ, ಮಹಾಯುದ್ಧಗಳ ಚರಿತ್ರೆ – ಈ ಎಲ್ಲವನ್ನು ಸುಮತೀಂದ್ರ ನಾಡಿಗರು ಗುರುತಿಸಿ 'ಹೆಜ್ಜೆಗುರುತು' ಕಾದಂಬರಿಯನ್ನು 'ಕನ್ನಡದ ಮಹಾಕಾದಂಬರಿಗಳಲ್ಲೊಂದು' ಎಂದು ಕರೆದಿದ್ದಾರೆ. ಒಟ್ಟಿನಲ್ಲಿ ಇದು ಅಧ್ಯಯನಯೋಗ್ಯ ಕಾದಂಬರಿ.

## ನೆನಪಿನ ಅಲೆಗಳು



*ಪ್ರೊ|| ಜೆ. ಆರ್. ಲಕ್ಷ್ಮಣರಾವ್*

**ಪುಟ : ೨೨೪** **ಬೆಲೆ : ರೂ. ೧೨೫**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**,

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು -೧

'ನನ್ನ ಜೀವನ ವೃತ್ತಾಂತದಲ್ಲಿ ಸಾರ್ವಜನಿಕರಿಗೆ ಆಸಕ್ತಿ ಇರುವ ಸಂಭವವಿಲ್ಲ ಎಂಬುದನ್ನು ನಾನು ಬಲ್ಲೆ' ಎಂದು ಗುರುತಿಸಿಕೊಂಡಿರುವ ಲೇಖಕರು ಆತ್ಮಕಥೆಯನ್ನು ಬರೆಯಲು ಕಾರಣ ಅನೇಕ ಮಹನೀಯರೊಂದಿಗಿದ್ದ ಅವರ ಒಡನಾಟ, ಆತ್ಮೀಯತೆ, ಅದು ಬೋಧಪ್ರದವಾದ ಬಗೆ ಇತ್ಯಾದಿ. ಈ ಬಗ್ಗೆ ಮಾತನಾಡಬೇಕಾಗಿ ಬಂದಾಗ ಲಕ್ಷ್ಮಣರಾಯರು ಅಮಿತ ಉತ್ಸಾಹದಿಂದ ಆಯಾ ಸಂದರ್ಭಗಳನ್ನು ವರ್ಣಿಸುತ್ತಾರೆ. ಈ ಕೌಶಲ್ಯವನ್ನು ಮೆಚ್ಚಿ ಬೆನ್ನುತಟ್ಟಿದ್ದರ ಫಲವಾಗಿ ಈ ಆತ್ಮಕಥೆ ರೂಪುಗೊಂಡಿದೆ. ಸಾಹಿತಿಗಳೊಂದಿಗಿನ ಅವರ ಒಡನಾಟದ ಚಿತ್ರಣ ಬಹಳ ಕಾಲ ಮನಸ್ಸಿನಲ್ಲಿ ಉಳಿಯುತ್ತದೆ. ಸಾಮಾನ್ಯವಾಗಿ ಆತ್ಮಕಥೆಗಳಲ್ಲಿ ಹೆಚ್ಚಾಗಿ ನುಸುಳುವ ಹಾಗೂ ವಿಜೃಂಭಿಸುವ 'ನಾನು' ಅಂಶ ಈ ಪುಸ್ತಕದಲ್ಲಿ ಅಗತ್ಯಕ್ಕಿಂತ ಹೆಚ್ಚಾಗಿ ಢಾಳಾಗಿ ಕಾಣಿಸಿಕೊಳ್ಳುವ ಪ್ರಯತ್ನ ಮಾಡದೆ ತುಂಬ ಸಹಜವಾಗಿ ಹಾಸುಹೊಕ್ಕಿದೆ. ಲೇಖಕರು ತಾವು ಕುವೆಂಪುರವರ ಶಿಷ್ಯರಾಗಿದ್ದಾಗಿನ ನೆನಪುಗಳನ್ನು ದಾಖಲಿಸಿರುವ ಪರಿ ಬಹಳ ಕಾಲ ಮನಸ್ಸಿನಲ್ಲಿ ಉಳಿಯುವಂಥದ್ದಾಗಿದೆ. ಅಲ್ಲಿ ಲೇಖಕರಿಗಿಂತ ಕುವೆಂಪುರವರ ಭವ್ಯ ಚಿತ್ರ ಕಣ್ಮುಂದೆ ನಿಲ್ಲುತ್ತದೆ.

ಎನ್. ಸಿ. ಮಹೇಶ್

# ಮೇರಿ ವುಲ್‌ಸ್ಟನ್‌ಕ್ರಾಫ್ಟ್‌ಳ ಸ್ತ್ರೀವಾದಿ ಚಿಂತನೆಗಳು

ಹೇಮಲತ ಎಚ್. ಎಮ್.

*ಸಮಾಜದ ಪ್ರಗತಿಗೆ ಸ್ತ್ರೀ-ಪುರುಷರ ಸಮಾನತೆ ಅತ್ಯವಶ್ಯ ಎಂದರಿತ ಮೇರಿ ೧೮ನೇ ಶತಮಾನದಲ್ಲೇ ಮಹಿಳೆಯರ ಹಕ್ಕುಗಳ ಪ್ರಶ್ನೆಗಳನ್ನು ಎತ್ತಿ ಮುಂದೆ ಸ್ತ್ರೀವಾದಿ ಚಿಂತನೆಗೆ ದಾರಿಮಾಡಿಕೊಟ್ಟಳು. ಮೇರಿ ಉದಾರವಾದಿ ಸ್ತ್ರೀವಾದಿ ಎಂದು ಗುರುತಿಸಲ್ಪಟ್ಟರೂ ೧೮ನೇ ಶತಮಾನದ ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ಪರಿಸ್ಥಿತಿಗೆ ಹೋಲಿಸಿದರೆ ಅವಳ ಚಿಂತನೆಗಳು ಕ್ರಾಂತಿಕಾರಿಯಾಗಿದ್ದವು ಎಂದು ಹೇಳಬಹುದು.*

ಸ್ತ್ರೀವಾದದ ಮೊದಲ ಚಿಂತಕಿಯರಲ್ಲಿ ಮೇರಿ ವುಲ್‌ಸ್ಟನ್‌ಕ್ರಾಫ್ಟ್ ಒಬ್ಬಳು. ೧೮ನೇ ಶತಮಾನದಲ್ಲಿ ರಾಜಪ್ರಭುತ್ವ, ಧಾರ್ಮಿಕ ಕಟ್ಟುಪಾಡು ಹಾಗೂ ಪುರುಷ ಪ್ರಧಾನ ಮೌಲ್ಯಗಳು ಪ್ರಬಲವಾಗಿದ್ದವು. ಅಂತಹ ಸಮಯದಲ್ಲಿ ಸ್ತ್ರೀ ಸಮಾನತೆ ಮತ್ತು ಸ್ತ್ರೀಯರ ಹಕ್ಕುಗಳನ್ನು ಎತ್ತಿಹಿಡಿದು ಮೇರಿ ಒಬ್ಬ ಕ್ರಾಂತಿಕಾರಕ ಚಿಂತಕಿ ಎನಿಸಿಕೊಂಡಿದ್ದಾಳೆ. ಅವಳ ಗ್ರಂಥ 'ಎ ವಿಂಡಿಕೇಶನ್ ಆಫ್ ದಿ ರೈಟ್ಸ್ ಆಫ್ ವಿಮೆನ್-೧೭೯೨' ಸ್ತ್ರೀವಾದಿ ಚಿಂತನೆಯ ಮೊಟ್ಟ ಮೊದಲ ಉತ್ಕೃಷ್ಟ ಕೃತಿಯಾಗಿದೆ. ಇದರಲ್ಲಿ ಫ್ರೆಂಚ್ ಕ್ರಾಂತಿಯ 'ಸಮಾನತೆ' ಪರಿಕಲ್ಪನೆ ಹಾಗೂ ಮಾನವ ಜನಾಂಗದ ಅರ್ಧಭಾಗದಷ್ಟಿರುವ ಸ್ತ್ರೀಯರನ್ನು ನಿರ್ಲಕ್ಷಿಸಿದ ಬಗೆಯನ್ನು ಹೊರಗೆಡಹುತ್ತಾಳೆ. ಥಾಮಸ್ ಪೇನ್ ಮತ್ತು ರಿಚರ್ಡ್ ಪ್ರೈಸನ್ ಸಮಾನತೆ ಮತ್ತು ವೈಚಾರಿಕ ಚಿಂತನೆಗಳು ಅವಳ ಮೇಲೆ ಅಗಾಧವಾದ ಪ್ರಭಾವ ಬೀರಿದವು. ೧೮ನೇ ಶತಮಾನದಲ್ಲಿ ಹುಟ್ಟಿಕೊಂಡ ಪ್ರಜಾಪ್ರಭುತ್ವದ ತತ್ವಗಳು ಅವಳು ಸ್ತ್ರೀ ಸಮಾನತೆಯ ನಿಟ್ಟಿನಲ್ಲಿ ಚಿಂತಿಸುವಂತೆ ಪ್ರೇರೇಪಿಸಿದವು. ಭಿನ್ನಮತೀಯರೊಂದಿಗೆ ಸಂಪರ್ಕವಿಟ್ಟುಕೊಂಡಿದ್ದ ಮೇರಿ ಮಾನವೀಯತೆಯನ್ನು ಹೊಂದುವುದಕ್ಕೆ ತಾರ್ಕಿಕ ಚಿಂತನೆ ಎಷ್ಟು ಅಗತ್ಯವೆಂಬುದನ್ನು ಮನಗಂಡಳು. ಅವಳ ವಾದಸರಣಿಯು ಫ್ರೆಂಚ್ ಕ್ರಾಂತಿಯ ಸಮಾನತೆ, ಸ್ವಾತಂತ್ರ್ಯ ಮತ್ತು ಭ್ರಾತೃತ್ವ ತತ್ವಗಳನ್ನು ಆಧರಿಸಿವೆ. ಸ್ತ್ರೀಯರ ಪರಾಧೀನತೆ ಕೃತಕವಾದುದು ಎನ್ನುತ್ತಾಳೆ ಮೇರಿ. ತರ್ಕ ಮತ್ತು ಮಾನವಪ್ರಗತಿ ಕುರಿತ ಅವಳ ಆಶಾದಾಯಕ ದೃಷ್ಟಿಕೋನವು ಅವಳನ್ನು ವಿಶಿಷ್ಟ ಚಿಂತಕಳನ್ನಾಗಿ ಮಾಡಿದೆ. ಅವಳ ಚಿಂತನೆಯ ಕೇಂದ್ರ ಬಿಂದು ಮಹಿಳೆಯರ ಸ್ವಾತಂತ್ರ್ಯ, ಸಮಾನತೆ ಮತ್ತು ಹಕ್ಕುಗಳು.

ಫ್ರೆಂಚ್ ಕ್ರಾಂತಿಯ ಸಮಾನತೆಯ ತತ್ವ ಮಹಿಳೆಯರಿಗೂ ಅನ್ವಯವಾಗುತ್ತದೆ ಎಂದು ಮೇರಿ ನಂಬಿದ್ದಳು. ಆದರೆ ೧೭೮೯ರಲ್ಲಿ 'ಎ ಡಿಕ್ಲರೇಷನ್ ಆಫ್ ದಿ ರೈಟ್ಸ್ ಆಫ್ ಮ್ಯಾನ್' ಜಾರಿಗೆ ಬಂದಾಗ ಅದು ಕೇವಲ ಪುರುಷರಿಗೆ ಮಾತ್ರ ಅನ್ವಯವಾಗಿದ್ದು ಕಂಡುಬಂದಿತು. ನ್ಯಾಷನಲ್ ಅಸೆಂಬ್ಲಿಯು ಪುರುಷರನ್ನು ಮಾತ್ರ ಮತದಾರರನ್ನಾಗಿ ಗುರುತಿಸಿತು. ೧೭೮೯ರ ಅಕ್ಟೋಬರ್ ೨೮ರಂದು ಪರ್ಷಿಯಾದ ಮಹಿಳೆಯರು ಸಾರ್ವತ್ರಿಕ ಮತದಾನದ ಮನವಿಯನ್ನು ಸಲ್ಲಿಸಿದರಾದರೂ ಅದು ತಿರಸ್ಕೃತವಾಯಿತು. ಫ್ರಾನ್ಸಿನಲ್ಲಿ ಸ್ತ್ರೀಯರ ಹಕ್ಕುಗಳನ್ನು ಪ್ರತಿಪಾದಿಸಿದವರಲ್ಲಿ ಮೇಡಮ್ ದಿ ಸ್ಟೆಲ್, ಮೇಡಮ್ ರೋಲ್ಯಾಂಡ್, ಬಿಲಂತಿ ದಿ ರೋಜಸ್ ಹಾಗೂ ಥಿಯೋಜೆನ್ ದಿ ಮೇರಿಕೋಟ್ ಪ್ರಮುಖರು. ಪ್ರೆಂಚ್ ಕ್ರಾಂತಿಯಲ್ಲಿ ಪಾಲ್ಗೊಂಡಿದ್ದ ಪುರುಷರು ಸ್ತ್ರೀಯರಿಗೆ ಮನೆಯೇ ಸರಿಯಾದ ಸ್ಥಳ, ಅದೇ ಅವರಿಗೆ ಸ್ವಾತಂತ್ರ್ಯವನ್ನು ನೀಡುತ್ತದೆ ಎಂದು ಘೋಷಿಸಿ ಕ್ರಾಂತಿಯ ಆದರ್ಶಮಯ ತತ್ವಗಳು ಮಹಿಳೆಯರಿಗೆ ಅನ್ವಯವಾಗದಂತೆ ನೋಡಿಕೊಂಡರು. ಇದನ್ನು ವಿರೋಧಿಸಿ ಮೇರಿ ತನ್ನ ಗ್ರಂಥದಲ್ಲಿ ಪುರುಷರ ಹಕ್ಕುಗಳಲ್ಲಿ ಮಹಿಳೆಯರ ಹಕ್ಕುಗಳನ್ನು ಸೇರಿಸಬೇಕೆಂದು ವಾದಿಸಿದಳು. ರಾಜಕೀಯ ತತ್ವದಲ್ಲಿ ಲಿಂಗ ಸಂಬಂಧಿತ ಪ್ರಶ್ನೆಗಳು ಸೇರ್ಪಡೆಯಾದದ್ದು ಅವಳ ಅಮೋಘ ಸಾಧನೆಯಾಗಿದೆ.

ಸ್ತ್ರೀವಾದಿ ದೃಷ್ಟಿಕೋನದಿಂದ ರಾಜಕೀಯ ತತ್ವದ ಚರಿತ್ರೆಯನ್ನು ಪುನರ್‌ಪರಿಶೀಲಿಸಿದಾಗ ಪ್ರಮುಖ ಚಿಂತಕರು ಮತ್ತು ತತ್ವಜ್ಞಾನಿಗಳು ರಾಜಕೀಯ ಹಾಗೂ ಕಾನೂನು ಕ್ಷೇತ್ರಗಳಿಂದ ಮಹಿಳೆಯರನ್ನು ಹೊರಗಿಟ್ಟಿರುವುದು ಕಂಡುಬರುತ್ತದೆ. ಉದಾಹರಣೆಗೆ, ಪ್ಲೇಟೋ, ಅರಿಸ್ಟಾಟಲ್, ರೂಸೊ, ಹೆಗಲ್, ಹನ್ನಾ ಆರ್ಡೆಂಟ್ ಇವರೆಲ್ಲರೂ ಸ್ತ್ರೀಯರ ಅಸ್ತಿತ್ವವನ್ನು ನಿರ್ಲಕ್ಷಿಸಿದ್ದಾರೆ. ೧೮ನೇ ಶತಮಾನದಲ್ಲಿ ಕ್ರಾಂತಿಕಾರರು ಹಾಗೂ ಭಿನ್ನಮತೀಯರು ರಾಜಕೀಯ ಮತ್ತು ಸಾಮಾಜಿಕ ಸಿದ್ಧಾಂತಗಳಲ್ಲಿ ಮಹತ್ತರ ಮಾರ್ಪಾಡುಗಳನ್ನು ತಂದರು. ಆ ಮಾರ್ಪಾಡುಗಳನ್ನು ಮೇರಿ ಸ್ತ್ರೀಯರ ಪ್ರಶ್ನೆಗೆ ಅನ್ವಯಿಸಿ ದೊಡ್ಡ ಕೊಡುಗೆಯನ್ನು ನೀಡಿದ್ದಾಳೆ. ಸ್ತ್ರೀಯರನ್ನು ಮಾನವ ಜನಾಂಗದ ತೊಟ್ಟಿಲು ಎಂದು ಕರೆಯುತ್ತಾಳೆ. ಉದಾರವಾದಿ ತತ್ವಗಳನ್ನು ಮಹಿಳೆಯರಿಗೆ ವಿಸ್ತರಿಸುತ್ತಾ ಅವರು ಸ್ವತಂತ್ರ ಮನಸ್ಸನ್ನು ಹೊಂದಿದರೆ ಮಾತ್ರ ಉತ್ತಮ ಪತ್ನಿಯರು, ತಾಯಂದಿರು ಆಗಲು ಸಾಧ್ಯವಿದೆ; ಮೆದುಸ್ವಭಾವದ ಸ್ತ್ರೀಯರು ಮೂರ್ಖ ತಾಯಿಯರಾಗುತ್ತಾರೆ, ಅವರು ಮೊದಲು ವಿಚಾರವಾದಿಗಳಾಗಬೇಕು, ನಂತರ ತಾಯಂದಿರಾಗಬೇಕು ಎಂದು ಪ್ರತಿಪಾದಿಸುತ್ತಾಳೆ.

**ಸ್ತ್ರೀಯರ ಕುರಿತು ಮೇರಿಯ ದೃಷ್ಟಿಕೋನ**

ಸ್ತ್ರೀಯರನ್ನು ಲೈಂಗಿಕ ಜೀವಿಗಳೆಂದು ಪರಿಗಣಿಸುವುದಕ್ಕಿಂತ ಮಾನವ ಜೀವಿಗಳನ್ನಾಗಿ ನೋಡಬೇಕು; ಅವರ ಬೇಡಿಕೆಗಳನ್ನು ಕೇವಲ ಮಹಿಳೆಯರ ಬೇಡಿಕೆಯನ್ನಾಗಿ ಪೂರೈಸುವುದಕ್ಕಿಂತ ಮಾನವ ಜೀವಿಯ ಬೇಡಿಕೆಗಳಾಗಿ ಪೂರೈಸುವುದು ತುಂಬಾ ಮುಖ್ಯ ಎನ್ನುತ್ತಾಳೆ ಮೇರಿ. ಸ್ತ್ರೀಯರಲ್ಲೂ ತಾರ್ಕಿಕ ಶಕ್ತಿಯಿದೆ, ವಿಚಾರ ಮಾಡುವ, ನಿರ್ಧಾರ ಕೈಗೊಳ್ಳುವ ಸಾಮರ್ಥ್ಯ ಹೊಂದಿದ್ದಾರೆ, ತಾರ್ಕಿಕ ಶಕ್ತಿಯಿರುವುದರಿಂದ ಪುರುಷರಂತೆ ಹಕ್ಕುಗಳನ್ನು ಹೊಂದಲು ಬಾಧ್ಯರಾಗಿದ್ದಾರೆ. ಮನುಷ್ಯನು ತಾರ್ಕಿಕ ಶಕ್ತಿಯನ್ನು ಹೊಂದಿರುವುದರಿಂದ ಪ್ರಾಣಿಗಿಂತ ಭಿನ್ನವಾಗಿದ್ದಾನೆ ಎಂದು ಸ್ವಾಭಾವಿಕ ಹಕ್ಕುಗಳ ಸಿದ್ಧಾಂತವು ಹೇಳುತ್ತದೆ. ಮಹಿಳೆಯರಿಗೆ ಸ್ವಾಭಾವಿಕ ಹಕ್ಕುಗಳನ್ನು ನಿರಾಕರಿಸಿದರೆ ಅವರು ತಾರ್ಕಿಕ ಜೀವಿಗಳಲ್ಲವೆಂದು ಹೇಳಿದಂತಾಗುತ್ತದೆ. ಕೆಲವು ಪುರುಷರಿಗೆ ಪ್ರತಿಭೆ ಕೌಶಲ್ಯವಿಲ್ಲವೆಂದು ಹಕ್ಕುಗಳನ್ನು ಹೇಗೆ ನಿರಾಕರಿಸುವುದಿಲ್ಲವೋ ಹಾಗೆ ಸ್ತ್ರೀಯರು ಪುರುಷರಿಗಿಂತ ಕೀಳು ಎಂದು ಹಕ್ಕುಗಳನ್ನು ನಿರಾಕರಿಸುವಂತಿಲ್ಲ. ಸ್ತ್ರೀಯರು ಪುರುಷರಿಗಿಂತ ಕೀಳು ಎಂಬುದನ್ನು ಮೇರಿ ಒಪ್ಪಿಕೊಳ್ಳುವುದಿಲ್ಲ. ಆದರೆ ಅನೇಕ ಪೀಳಿಗೆಗಳಿಂದ ಅವರ ಸಾಮರ್ಥ್ಯ ಕೌಶಲ್ಯಗಳನ್ನು ನಿರ್ಲಕ್ಷಿಸಿ ಬಳಸಿಕೊಳ್ಳದೇ ಇರುವುದರಿಂದ ಅವರು ಮರಗಟ್ಟಿಹೋಗಿದ್ದಾರೆ. ಅವರಿಗೆ ಸಾಕಷ್ಟು ಅವಕಾಶ, ಸ್ವಾತಂತ್ರ್ಯ ಹಾಗೂ ಶಿಕ್ಷಣ ದೊರೆತರೆ ತಮ್ಮ ಸಾಮರ್ಥ್ಯವನ್ನು ಬೆಳೆಸಿಕೊಂಡು ಪರಿಸ್ಥಿತಿಯನ್ನು ಉತ್ತಮಪಡಿಸಿಕೊಳ್ಳುತ್ತಾರೆ ಎಂಬುದು ಅವಳ ಅಭಿಮತ.

ಮೇರಿಯ ಟೀಕಾಪ್ರಹಾರಕ್ಕೆ ಒಳಗಾದ ಅಂದಿನ ಪ್ರಮುಖ ಚಿಂತಕರಲ್ಲಿ ರೂಸೋ ಒಬ್ಬನು. ಶಿಕ್ಷಣ ಕುರಿತ ಅವನ ವಾದಗಳಿಗೆ ಅತ್ಯಂತ ಸಮರ್ಪಕವಾದ ಪ್ರತಿವಾದಗಳನ್ನು ಮುಂದಿಡುತ್ತಾಳೆ. ರೂಸೊ ೧೭೬೦ರಲ್ಲಿ ಬರೆದ ತನ್ನ ಗ್ರಂಥ 'ಇಮಿಲ್'ನಲ್ಲಿ ''ನಾವು ಯಾವುದನ್ನು ಜನ್ಮತಃ ಪಡೆದಿಲ್ಲವೋ ಅವೆಲ್ಲವನ್ನು ಬೆಳೆಯುತ್ತಾ ಹೋದಂತೆ ಕಲಿಯುತ್ತೇವೆ, ಅದೇ ಶಿಕ್ಷಣ'' ಎಂದು ವ್ಯಾಖ್ಯಾನಿಸುತ್ತಾನೆ. ಆ ಮಾತುಗಳಲ್ಲಿ ಸ್ವಭಾವತಃ ಸ್ತ್ರೀ-ಪುರುಷರು ಭಿನ್ನರಾಗಿರುತ್ತಾರೆ ಎಂಬ ಅರ್ಥವಿದೆ. ಪುರುಷ ಉತ್ಪಾದಕನಾದರೆ ಸ್ತ್ರೀ ಜನ್ಮ ನೀಡುವವಳಾಗಿದ್ದಾಳೆ. ಇಬ್ಬರ ಲೈಂಗಿಕ ಸ್ವಭಾವ ಭಿನ್ನವಾಗಿರುವುದರಿಂದ ಅವರಿಗೆ ನೀಡುವ ಶಿಕ್ಷಣವು ಭಿನ್ನವಾಗಿರಬೇಕೆಂದು ಹೇಳುತ್ತಾನೆ. ಲೈಂಗಿಕತೆಯ ಪರಿಣಾಮ ಇಬ್ಬರ ಮೇಲೂ ಬೇರೆ ಬೇರೆ ರೀತಿಯಲ್ಲಾಗಿರುತ್ತದೆ. ಪುರುಷ ಯಾವಾಗಲೂ ಪುರುಷನೇ, ಸ್ತ್ರೀ ಸ್ತ್ರೀಯೇ.

ಅವರ ಕರ್ತವ್ಯಗಳು ಒಂದೇ ರೀತಿಯಾಗಿರಲು ಸಾಧ್ಯವಿಲ್ಲ. ಅವರಿಬ್ಬರ ನಡುವಿನ ಅಸಮಾನತೆ ಪುರುಷ ನಿರ್ಮಿತವಲ್ಲ, ಪೂರ್ವಗ್ರಹ ಪೀಡಿತವಾದುದಲ್ಲ, ಆದರೆ ತರ್ಕದಿಂದ ಕೂಡಿದ್ದು ಎಂದು ಹೇಳುತ್ತಾನೆ. ಸ್ತ್ರೀ-ಪುರುಷರ ನಡುವಿನ ವ್ಯತ್ಯಾಸಕ್ಕೆ ಸ್ತ್ರೀಯ ಸಂತಾನೋತ್ಪತ್ತಿಯೇ ಕಾರಣ. ಇದು ಅವರನ್ನು ಪುರುಷರಿಗೆ ಸಮವಾಗಲು ಬಿಡುವುದಿಲ್ಲ. ಪುರುಷರು ಮಾಡುವ ಕೆಲಸಗಳನ್ನು ಸ್ತ್ರೀಯರು ಮಾಡಲಾಗುವುದಿಲ್ಲ. ಆದುದರಿಂದ ಸಂತಾನೋತ್ಪತ್ತಿ ಕಾರ್ಯಕ್ಕೆ ಅನುಗುಣವಾಗಿ ಸ್ತ್ರೀ ಶಿಕ್ಷಣ ರೂಪಿಸಬೇಕೆಂದು ಪ್ರತಿಪಾದಿಸುತ್ತಾನೆ. ಸ್ತ್ರೀ-ಪುರುಷರ ಜೈವಿಕ ರಚನೆ ಹಾಗೂ ಲೈಂಗಿಕ ಸ್ವಭಾವ ಭಿನ್ನವೆಂದು ರೂಪಿಸಿದ ಮೇಲೆ ಅವರ ಶಿಕ್ಷಣವೂ ಭಿನ್ನವಾಗಿರಬೇಕೆಂದು ಹೇಳುತ್ತಾನೆ.

ಶಿಕ್ಷಣವು ಹೆಣ್ಣುಮಕ್ಕಳನ್ನು ಒಳ್ಳೆಯ ತಾಯಿ ಹಾಗೂ ಪತ್ನಿಯರನ್ನಾಗಿ ಸಿದ್ಧಪಡಿಸಬೇಕು. ಸ್ತ್ರೀಯು ತನ್ನ ಆಶೆ ಮತ್ತು ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಪುರುಷನನ್ನು ಅವಲಂಬಿಸಿದ್ದಾಳೆ. ಆದುದರಿಂದ ಅವಳು ಪಡೆಯುವ ಶಿಕ್ಷಣ ಪುರುಷನನ್ನು ಸಂತೋಷಗೊಳಿಸುವಂತಿರಬೇಕು ಎಂದು ಹೇಳುತ್ತಾನೆ. ಸ್ತ್ರೀ-ಪುರುಷರ ಪರಸ್ಪರ ಅವಲಂಬನೆಯನ್ನು ಹೇಳುತ್ತಲೇ, ಸ್ತ್ರೀಯರ ಪರಾವಲಂಬಿತನ, ನಿಷ್ಕ್ರಿಯತೆ, ನಿಷ್ಠೆಗೆ ಹೆಚ್ಚು ಒತ್ತು ನೀಡುತ್ತಾನೆ. ಪುರುಷ ಆರೈಕೆ, ಮಕ್ಕಳ ಬಾಲ್ಯ, ಶಿಕ್ಷಣ, ಆರೋಗ್ಯ ಪಾಲನೆ ಸ್ತ್ರೀಯರ ಕೈಯಲ್ಲಿರುವುದರಿಂದ ಅದನ್ನು ಸಮರ್ಥವಾಗಿ ನಿರ್ವಹಿಸಲು ಅವರಿಗೆ ಶಿಕ್ಷಣ ನೀಡಬೇಕು, ಆದರೆ ಪುರುಷರಿಗೆ ಸ್ವತಂತ್ರ ವ್ಯಕ್ತಿಗಳಾಗಿ ಬೆಳೆಯಲು ಶಿಕ್ಷಣ ನೀಡಬೇಕು ಎಂದು ಹೇಳುತ್ತಾನೆ. ಸ್ತ್ರೀಯರಿಗೆ ಕಲೆ ಮತ್ತು ಸಂಸ್ಕೃತಿಯಲ್ಲಿ ತರಬೇತಿ ನೀಡಬೇಕು. ಅದು ಎಷ್ಟರ ಮಟ್ಟಿಗೆ ಎಂದರೆ ಸಂಪೂರ್ಣ ಜ್ಞಾನ ಪಡೆಯುವಷ್ಟು ಅಲ್ಲ, ಪತಿಗೆ ಒಪ್ಪಿಗೆಯಾಗುವಷ್ಟು ಮತ್ತು ಮಕ್ಕಳ ಪಾಲನೆಗೆ ಬೇಕಾಗುವಷ್ಟು ಮಾತ್ರ. ಪುರುಷನಿಗೆ ಸಮವಾಗಿ ವಿಚಾರ ಮಾಡುವಂತಹ ಸ್ವತಂತ್ರ ಮಾನವ ಜೀವಿಯನ್ನಾಗಿ ಮಾಡುವುದಕ್ಕೆ ಶಿಕ್ಷಣವನ್ನು ನೀಡಬಾರದೆಂದು ಹೇಳಿ ಪುರುಷ-ಪಕ್ಷಪಾತ ಧೋರಣೆಯನ್ನು ತೋರುತ್ತಾನೆ.



ಮೇರಿಯು ರೂಸೋನ ಈ ಎಲ್ಲಾ ಹೇಳಿಕೆಗಳನ್ನು ಅತ್ಯಂತ ಸಮರ್ಥವಾಗಿ ಟೀಕಿಸುತ್ತಾಳೆ. ಸ್ತ್ರೀಯರನ್ನು ಕೇವಲ ಲೈಂಗಿಕ ಜೀವಿಗಳನ್ನಾಗಿ ಪರಿಗಣಿಸಿ ಸ್ವಾತಂತ್ರ್ಯವನ್ನು ನಿರಾಕರಿಸುವುದು, ಆದರೆ ಪುರುಷರಿಗೆ ಎಲ್ಲಾ ಸಮಯದಲ್ಲೂ ಸ್ವಾತಂತ್ರ್ಯ, ಸಮಾನತೆ ನೀಡಬೇಕೆನ್ನುವ ರೂಸೋನ ವಿಚಾರವನ್ನು ಕಟುವಾಗಿ ಟೀಕಿಸುತ್ತಾಳೆ. ಸ್ತ್ರೀಯಲ್ಲಿರುವ ಒಳ್ಳೆಯ ಸ್ವಭಾವವನ್ನು ಪುರುಷ ದುರುಪಯೋಗ ಮಾಡಿಕೊಂಡು ಅವಳನ್ನು ವಿಧೇಯಳನ್ನಾಗಿಸಿಕೊಂಡಿದ್ದಾನೆ. ಅವಳನ್ನು ಅಪರಿಪೂರ್ಣಳನ್ನಾಗಿಸಿ ಅನ್ಯಾಯವನ್ನು ಸೈರಿಸಿಕೊಂಡು ತಾನು ಮಾಡುವ ಅವಮಾನವನ್ನು ಮೌನವಾಗಿ ಸಹಿಸಿಕೊಳ್ಳುವಂತೆ ಮಾಡಿದ್ದಾನೆ. ಯಾರು ಅನ್ಯಾಯವನ್ನು ಸಹಿಸಿಕೊಳ್ಳುತ್ತಾರೋ ಅವರೇ ಅನ್ಯಾಯಿಗಳಾಗುತ್ತಾರೆ. ಅವಮಾನಕ್ಕೊಳಗಾದ ಹೃದಯ ಕರಗಿ ಅನ್ಯಾಯವನ್ನು ಪ್ರತಿಭಟಿಸುವ ಬದಲು ಅದನ್ನೇ ಒಪ್ಪಿಕೊಳ್ಳುತ್ತದೆ, ಅದನ್ನೇ ಸ್ತ್ರೀಯರು ಮಾಡುತ್ತಿರುವುದು. ರೂಸೋ ಹೇಳುವ 'ಸ್ತ್ರೀಯರು ಅಂಜುಬುರುಕಿಯರಾಗಿ, ದುರ್ಬಲರಾಗಿರಬೇಕು, ಅವರಲ್ಲಿ ಸೂಕ್ಷ್ಮತೆ ಮತ್ತು ಸೌಂದರ್ಯ ಬಿಟ್ಟರೆ ಬೇರಾವ ಒಳ್ಳೆಯ ಗುಣಗಳು ಇಲ್ಲದಿರುವುದರಿಂದ ಅವುಗಳನ್ನು ರೂಪಿಸಿಕೊಳ್ಳುವುದೇ ಸೂಕ್ತ' ಎಂಬ ಸಲಹೆಯನ್ನು ಮೇರಿ ಅಲ್ಲಗಳೆಯುತ್ತಾಳೆ. ಸ್ತ್ರೀಯರು ಕೇವಲ ಸೌಂದರ್ಯ ಕಾಪಾಡಿಕೊಳ್ಳಲು ಗಮನ ನೀಡದೆ ತಮ್ಮ ಜೀವನವನ್ನು ಸ್ವತಂತ್ರವಾಗಿ ನಡೆಸಲು ಸಾಮರ್ಥ್ಯ ಬೆಳೆಸಿಕೊಳ್ಳಬೇಕು. ಅದಿಲ್ಲದೆ ಅವರು ಸ್ವಾತಂತ್ರ್ಯ ಪಡೆಯಲು ಸಾಧ್ಯವಿಲ್ಲ ಎನ್ನುತ್ತಾಳೆ ಮೇರಿ. ಸ್ತ್ರೀ-ಪುರುಷರ ಸಮಾನತೆಯನ್ನು ಎತ್ತಿಹಿಡಿದರೂ ಕುಟುಂಬದೊಳಗಿದ್ದುಕೊಂಡೇ ಸ್ತ್ರೀಯರು ಸ್ವಾತಂತ್ರ್ಯ ಸಮಾನತೆಯನ್ನು ಪಡೆಯಬೇಕೆನ್ನುತ್ತಾಳೆ. ಕುಟುಂಬದೊಳಗಿನ ಪಾರಂಪರಿಕ ಕಾರ್ಯ ಮತ್ತು ತಾಯಿಯಾಗಿ, ಪತ್ನಿಯಾಗಿ ಅವರ ಪಾತ್ರಗಳನ್ನು ಗೌರವಿಸಿ ಪ್ರತಿಪಾದಿಸುವ ಮೂಲಕ ಉದಾರವಾದಿ ಸ್ತ್ರೀವಾದಿ ಎನಿಸಿಕೊಳ್ಳುತ್ತಾಳೆ.

**ಶಿಕ್ಷಣದ ಪಾತ್ರ ಮತ್ತು ಮಹತ್ವದ ಕುರಿತು ಮೇರಿಯ ಅಭಿಪ್ರಾಯ**

ಸ್ತ್ರೀಯರ ವಾಸ್ತವಿಕತೆಯನ್ನು ವಿರೂಪಗೊಳಿಸಿದ ಪುರುಷರ ಅಭಿಪ್ರಾಯಗಳನ್ನು ಪರಿಶೀಲಿಸಿದ ಮೇರಿ ಆ ವಿರೂಪಗಳನ್ನು ಸರಿಪಡಿಸಲು ಶಿಕ್ಷಣವನ್ನು ಇತ್ಯಾತ್ಮಕವಾಗಿ ಮತ್ತು ರಚನಾತ್ಮಕವಾಗಿ ಬಳಸಿಕೊಳ್ಳಬೇಕೆಂದು ಹೇಳುತ್ತಾಳೆ. ಒಳ್ಳೆಯ ಶಿಕ್ಷಣವು ವ್ಯಕ್ತಿಯನ್ನು ಸೃಜನಶೀಲ ಚಿಂತನೆಗೆ ಹಚ್ಚುವುದಲ್ಲದೆ ಒಳ್ಳೆಯ ಜೀವನವನ್ನು ರೂಪಿಸಿಕೊಂಡು ಉನ್ನತ ಹಂತವನ್ನು ತಲುಪುವುದಕ್ಕೆ ದಾರಿಮಾಡಿಕೊಡುತ್ತದೆ. ಇದಕ್ಕೆ ಆರ್ಥಿಕ ಸ್ವಾತಂತ್ರ್ಯ ಮತ್ತು ಸ್ವಾವಲಂಬನೆ ತುಂಬ ಅವಶ್ಯಕ. ಮಾನವ ಚೈತನ್ಯವು ಸಂಪೂರ್ಣವಾಗಿ, ಮುಕ್ತವಾಗಿ ಅಭಿವ್ಯಕ್ತಗೊಳ್ಳಬೇಕೆಂದರೆ ಅದು ಪೂರ್ವಗ್ರಹ, ದುರಾಸೆ ಮತ್ತು ಆರ್ಥಿಕ ಅಭದ್ರತೆಯಿಂದ ಮುಕ್ತವಾಗಬೇಕು. ಆದರೆ ಸ್ತ್ರೀಯರಿಗೆ ನೀಡುವ ಶಿಕ್ಷಣವು ಈ ಅವಶ್ಯಕತೆಗಳನ್ನು ಪೂರೈಸುವಲ್ಲಿ ವಿಫಲವಾಗಿದೆ. ಇದರಿಂದ ಸ್ತ್ರೀಯರು ಸ್ವಂತ ಆಲೋಚನೆ ಮಾಡುವುದು ಅಥವಾ ತಮ್ಮದೇ ಗ್ರಹಿಕೆಯನ್ನು ಹೊಂದುವುದು ಸಾಧ್ಯವಾಗಿಲ್ಲ. ಇದು ಅವರನ್ನು ಹೆಚ್ಚು ಭಾವನಾತ್ಮಕವಾಗಿ ಜೀವಿಗಳನ್ನಾಗಿಸಿದೆ. ಸ್ತ್ರೀಯರ ಜೀವನಕ್ರಮ ಯಾವ ರೀತಿಯಾಗಿರಬೇಕು ಎಂದು ನಿರೀಕ್ಷಿಸಲಾಗುತ್ತದೋ ಅದರಂತೆ ಶಿಕ್ಷಣವು ಅವರನ್ನು ನಿರ್ಮಿಸುತ್ತದೆ. ಮನೆಕೆಲಸಕ್ಕೆ ಸೀಮಿತಗೊಳಿಸುತ್ತದೆ. ಪುರುಷರಂತೆ ಹೊಸ ಹೊಸ ಚಟುವಟಿಕೆಗಳಲ್ಲಿ ತೊಡಗಿಸುವುದಿಲ್ಲ. ಇದರಿಂದ ಅವರ ಗ್ರಹಿಕೆ ಸಾಮರ್ಥ್ಯ ಹೆಚ್ಚಾಗುವುದಿಲ್ಲ. ಜನ ಎಂತಹ ಚಟುವಟಿಕೆಗಳಲ್ಲಿ ತೊಡಗಿರುತ್ತಾರೋ ಅದಕ್ಕೆ ತಕ್ಕಂತೆ ಅವರ ಗುಣ ಮತ್ತು ದೃಷ್ಟಿಕೋನಗಳು ರೂಪುಗೊಳ್ಳುತ್ತವೆ. ಸಾಮಾನ್ಯವಾಗಿ ಶ್ರೀಮಂತರು ಮತ್ತು ಮಹಿಳೆಯರು ನಿಸ್ಸಾರವಾಗಿರುತ್ತಾರೆ. ಶ್ರೀಮಂತರು ಸಂಪತ್ತು ಮತ್ತು ಅಧಿಕಾರದಲ್ಲಿಯೇ ಹುಟ್ಟಿ ಅದನ್ನು ಪಡೆಯುವುದು, ಉಳಿಸಿಕೊಳ್ಳುವುದನ್ನೇ ಗುರಿಯಾಗಿಸಿಕೊಂಡಿರುತ್ತಾರೆ. ಸ್ತ್ರೀಯರು ಸೌಂದರ್ಯ ಹೆಚ್ಚಿಸಿಕೊಂಡು ಲೈಂಗಿಕ ಆಕರ್ಷಣೆಯಿಂದ ಪ್ರಶಂಸೆಗೊಳಗಾಗುವುದನ್ನೇ ಗುರಿಯಾಗಿಸಿಕೊಂಡಿರುತ್ತಾರೆ. ಆದರೆ ಉದ್ಯೋಗ ಕ್ಷೇತ್ರವನ್ನು ಪ್ರವೇಶಿಸಿ ಅಲ್ಲಿ ತಮ್ಮ ಸಾಮರ್ಥ್ಯ ಮತ್ತು ಸದ್ಗುಣಗಳನ್ನು ಪ್ರಯೋಗಿಸುವುದರಿಂದ ಮಾತ್ರ ಸ್ತ್ರೀಯರು ವಿಚಾರವಂತರಾಗಲು ಸಾಧ್ಯ ಎಂದು ಹೇಳುವ ಮೇರಿ, ಸ್ತ್ರೀಯರು ಹೊರಗಿನ ದುಡಿಮೆಯಲ್ಲಿ ತೊಡಗಬೇಕು ಎನ್ನುವ ವಿಚಾರವನ್ನು ಎತ್ತಿಹಿಡಿಯುತ್ತಾಳೆ.

ವ್ಯಕ್ತಿಯ ಗುಣ ಮತ್ತು ವ್ಯಕ್ತಿತ್ವಗಳನ್ನು ರೂಪಿಸುವಲ್ಲಿ ಶಿಕ್ಷಣವು ಮಹತ್ತರ ಪಾತ್ರ ವಹಿಸುತ್ತದೆ ಎಂಬುದನ್ನು ಕಂಡುಕೊಂಡ ಮೇರಿ ಆ ಕುರಿತು 'ಹರ್ ಥಾಟ್ಸ್ ಆನ್ ದ ಎಜುಕೇಶನ್ ಆಫ್ ಡಾಟರ್ಸ್' (೧೭೮೬), 'ಒರಿಜಿನಲ್ ಸ್ಟೋರೀಸ್ ಫ್ರಮ್ ರಿಯಲ್ ಲೈಫ್' (೧೭೮೮), 'ದ ಫಿಮೇಲ್ ರೀಡರ್' (೧೭೮೯) ಮತ್ತು ಅಪೂರ್ಣವಾಗಿದ್ದ ಕರಡು ಪ್ರತಿ 'ಲೆಟರ್ ಆನ್ ದ ಮ್ಯಾನೇಜಮೆಂಟ್ ಆಫ್ ಇನ್‌ಫ್ಯಾಂಟ್ಸ್' ಎಂಬ ಕೃತಿಗಳನ್ನು ರಚಿಸಿದಳು. ಈ ಕೃತಿಗಳಲ್ಲಿ ಸ್ತ್ರೀಯರು ವಿಚಾರವಂತರಾಗಬೇಕು, ಸ್ನೇಹ ಸಂಗಾತಿಯನ್ನು ಪಡೆಯಲು ವಿವಾಹವಾಗಬೇಕು ಎನ್ನುತ್ತಾಳೆ. ಆಗಿನ ಶಿಕ್ಷಣ ವ್ಯವಸ್ಥೆ ಹೆಣ್ಣು ಮಕ್ಕಳನ್ನು ನಿರ್ಲಕ್ಷ್ಯ ಮಾಡುತ್ತಿದ್ದುದನ್ನು ಟೀಕೆ ಮಾಡುತ್ತಾಳೆ. ಜೊತೆಗೆ ಮಹಿಳೆಯರು ಅನುಭವಿಸುತ್ತಿದ್ದ ಸಾಮಾಜಿಕ, ಮಾನಸಿಕ, ದೈಹಿಕ ಸಂಕಷ್ಟಗಳ ಬಗ್ಗೆ ಅತೀವ ಕಾಳಜಿ ವ್ಯಕ್ತಪಡಿಸುತ್ತಾ ಅವುಗಳನ್ನು ಸಹಿಸಿಕೊಳ್ಳುವುದಕ್ಕಿಂತ ನಿವಾರಿಸಿಕೊಳ್ಳಲು ಪ್ರಯತ್ನಿಸುವುದು ಒಳ್ಳೆಯದೆಂದು ಸಲಹೆ ನೀಡುತ್ತಾಳೆ.

ಸ್ತ್ರೀಯರು ಸ್ವಲ್ಪಮಟ್ಟಿಗಾದರೂ ಪುರುಷರ ಹಿಡಿತದಿಂದ ಮುಕ್ತರಾಗಬೇಕು. ಇಲ್ಲದಿದ್ದರೆ ಅವರು ಉತ್ತಮ ತಾಯಿ ಮತ್ತು ಪತ್ನಿಯರಾಗಲು ಸಾಧ್ಯವಿಲ್ಲ. ಗಂಡು ಮತ್ತು ಹೆಣ್ಣು ಮಕ್ಕಳಿಬ್ಬರೂ ಒಂದೇ ಶಾಲೆಯಲ್ಲಿ ಕಲಿಯಬೇಕು. ಇಬ್ಬರಿಗೂ ಒಬ್ಬರೇ ಶಿಕ್ಷಕರಿರಬೇಕೆಂದು ಸಹ ಶಿಕ್ಷಣದ ಬಗ್ಗೆ ಪ್ರತಿಪಾದಿಸುತ್ತಾಳೆ. ಅವರಿಬ್ಬರನ್ನು ಪ್ರತ್ಯೇಕಿಸಿದರೆ ಕೆಟ್ಟ ಹವ್ಯಾಸಗಳಿಗೆ ತುತ್ತಾಗುತ್ತಾರೆ ಎನ್ನುತ್ತಾ, ಇನ್ನಷ್ಟು ಮುಂದುವರೆದು 'ಲೈಂಗಿಕ ಶಿಕ್ಷಣ'ದ ಕೋರ್ಸನ್ನು ತೆರೆಯಬೇಕೆನ್ನುತ್ತಾಳೆ. ಅವಳ ಈ ಕ್ರಾಂತಿಕಾರಕ ದೃಷ್ಟಿಕೋನದಿಂದ ಅಂದಿನ ದಿನಗಳಲ್ಲಿ ಮೇರಿ ಅನೈತಿಕ ಲೇಖಕಿ ಎಂಬ ಕಳಂಕವನ್ನು ಹೊರಬೇಕಾಯಿತು. ಹೆಣ್ಣುಮಕ್ಕಳ ಶಿಕ್ಷಣವಲ್ಲದೆ ಪ್ರಾಥಮಿಕ ಶಾಲೆಗಳಲ್ಲಿ ವರ್ಗ ತಾರತಮ್ಯವನ್ನು ಹೋಗಲಾಡಿಸಬೇಕೆಂದು ಹೇಳುವುದರ ಮೂಲಕ ಈಕೆ ಲಿಂಗ

ಮತ್ತು ವರ್ಗಸಮಾನತೆ ಎರಡನ್ನೂ ಪ್ರತಿಪಾದಿಸುವ ಚಿಂತಕಿಯಾಗಿದ್ದಾಳೆ.

ಸ್ತ್ರೀಯರು ಪಡೆಯುತ್ತಿದ್ದ ಶಿಕ್ಷಣವನ್ನು ಟೀಕಿಸುವ ಮೇರಿ ಅವರಿಗೆ ಶಿಕ್ಷಣದಿಂದ ದೊರಕುವ ಲಾಭ ಮತ್ತು ಅವಕಾಶಗಳ ಬಗ್ಗೆ ಅರಿವಿಲ್ಲದಿರುವುದರಿಂದ ಅದನ್ನೇ ಉತ್ತಮ ಶಿಕ್ಷಣವೆಂದು ತಿಳಿಯುತ್ತಾರೆ. ಸ್ತ್ರೀಯರು ಹಾಗೆ ಪಡೆಯುತ್ತಿರುವ ಶಿಕ್ಷಣಕ್ಕೆ ಯಾವುದೇ ಹೆಸರಿಲ್ಲ, ಸಣ್ಣ-ಪುಟ್ಟ ವಸ್ತುಗಳಿಗಾಗಿ ಅವರು ಕುತಂತ್ರ ಕಾರ್ಯಗಳಲ್ಲಿ ತೊಡಗುವುದನ್ನು ನೋಡಿದರೆ ಮನಸ್ಸು ಪಶ್ಚಾತ್ತಾಪಪಡುತ್ತದೆ. ಸ್ವತಂತ್ರವಾಗಿ ಖರ್ಚುಮಾಡುವಂತಿಲ್ಲ, ಸ್ವಂತದ್ದು ಎಂದು ಹೇಳಿಕೊಳ್ಳಲು ಏನೂ ಇಲ್ಲ. ಸ್ತ್ರೀಯರಿಗೆ ಪುರುಷರನ್ನು ಆಕರ್ಷಿಸುವ ಲೈಂಗಿಕ ಜೀವಿಯನ್ನಾಗಿಸಲು ಶಿಕ್ಷಣ ನೀಡಲಾಗುತ್ತದೆ. ಇದಕ್ಕೆ ಮುಖ್ಯ ಕಾರಣ ಅವರ ಆರ್ಥಿಕ ಪರಾವಲಂಬನೆ. ಸ್ತ್ರೀಯರು ಆದಾಯ ಗಳಿಸುವ ಸಾಮರ್ಥ್ಯವನ್ನು ಬೆಳೆಸಿಕೊಂಡರೆ ಮಾತ್ರ ಸ್ವತಂತ್ರವಾಗಿ ಗೌರವದಿಂದ ಬದುಕಲು ಸಾಧ್ಯ ಎಂಬುದು ಮೇರಿಯ ನಿಲುವು. ಶಿಕ್ಷಣ ಮತ್ತು ಸ್ವಾತಂತ್ರ್ಯ ಸ್ತ್ರೀಯರನ್ನು 'ಅಲೈಂಗಿಕ ಗೊಳಿಸುತ್ತವೆ' ಎಂಬುದನ್ನು ಅವಳು ಒಪ್ಪುವುದಿಲ್ಲ. ನನ್ನ ತರ್ಕ ಮತ್ತು ಅನುಭವದಿಂದ ಹೇಳುವುದಾದರೆ ಸ್ತ್ರೀಯರು ತಮ್ಮ ಕರ್ತವ್ಯಗಳನ್ನು ಪೂರೈಸಬೇಕೆಂದರೆ ಎಲ್ಲಾ ಅಡ್ಡಿ ಆತಂಕಗಳಿಂದ ಮುಕ್ತರಾಗಬೇಕು, ಅವರು ಮಾನವ ಹಕ್ಕುಗಳನ್ನು ಹೊಂದುವಂತಾಗಬೇಕು ಎಂದು ಹೇಳುತ್ತಾಳೆ.

ಮೇರಿಯು ತಾರ್ಕಿಕ ಶಕ್ತಿಯ ಬಗ್ಗೆ ಅತೀವ ವಿಶ್ವಾಸವನ್ನು ಹೊಂದಿದ್ದಳು. ತಾರ್ಕಿಕತೆಯಿಂದ ವಿಭಿನ್ನ ಮತ್ತು ಉನ್ನತ ಸ್ಥಾನವನ್ನು ಪಡೆಯಬಹುದು; ಅದು ವ್ಯಕ್ತಿಯು ತನ್ನನ್ನು ತಾನು ಅರ್ಥಮಾಡಿಕೊಳ್ಳುವಂತೆ ಮಾಡುತ್ತದೆ; ವ್ಯಕ್ತಿಯನ್ನು ಪರಿಪೂರ್ಣವಾಗಿಸುತ್ತದೆ; ತರ್ಕವು ಜೀವನಕ್ಕೆ ವರದಾನವಾಗಿದೆ; ಎಲ್ಲ ಸದ್ಗುಣಗಳ ಆಧಾರವಾಗಿದೆ; ಸ್ವಾತಂತ್ರ್ಯದ ಸಂಕೇತವಾಗಿದೆ; ಇಂತಹ ತಾರ್ಕಿಕ ಗುಣವನ್ನು ಮಹಿಳೆಯರಲ್ಲೂ ಬೆಳೆಸಬೇಕು; ಅವರಿಗೆ ಶಿಕ್ಷಣ ನೀಡಬೇಕು ಎನ್ನುತ್ತಾಳೆ. ಸ್ತ್ರೀಯರಿಗೆ ನೀಡುತ್ತಿರುವ ಶಿಕ್ಷಣವು ಅವರನ್ನು ದುರ್ಬಲರನ್ನಾಗಿ, ಅವಲಂಬಿತರನ್ನಾಗಿ ಮತ್ತು ಭಾವನಾತ್ಮಕ ಜೀವಿಗಳನ್ನಾಗಿಸುತ್ತದೆಯೇ ಹೊರತು ವಿಚಾರವಂತರನ್ನಾಗಿ ಅಲ್ಲ. ಮಾನವರು ಜನ್ಮತಃ ಸ್ವತಂತ್ರರು ಹಾಗೂ ವಿಚಾರ ಶೀಲರಾಗಿರುತ್ತಾರೆ. ಶಿಕ್ಷಣವು ಸ್ತ್ರೀ-ಪುರುಷರಿಬ್ಬರಲ್ಲೂ ಈ ಗುಣಗಳನ್ನು ಬೆಳೆಸುವ ಗುರಿಯನ್ನು ಹೊಂದಿರಬೇಕು. ಅವಳ ಪ್ರಕಾರ ತರ್ಕ, ಜ್ಞಾನ ಹಾಗೂ ಮನಸ್ಸುಗಳಿಗೆ ಲಿಂಗದ ಆಯಾಮವಿರುವುದಿಲ್ಲ.

ಅದು ಇರುವುದು ಸಂತಾನೋತ್ಪತ್ತಿಯಲ್ಲಿ ಮಾತ್ರ. ಮಾನವರ ಎಲ್ಲಾ ಪ್ರಯತ್ನಗಳು ತರ್ಕವನ್ನು ಆಧರಿಸಿರಬೇಕು. ವ್ಯಕ್ತಿಯು ಅವನ/ಅವಳ ಸಾಮರ್ಥ್ಯವನ್ನು ಸಂಪೂರ್ಣವಾಗಿ ಬೆಳೆಸಿಕೊಳ್ಳಲು ಅವಕಾಶವಿರಬೇಕು.

**ಸ್ವಾತಂತ್ರ್ಯ ಮತ್ತು ಸಮಾನತೆ**

ಮಾನವನು ಜನ್ಮತಃ ಸ್ವತಂತ್ರ ಎನ್ನುವ ರೂಸೋ ತತ್ವವನ್ನು ಸ್ತ್ರೀಯರಿಗೂ ಅನ್ವಯಿಸಬೇಕು. ಜನರ ಕುರುಡು ವಿಧೇಯತೆಯನ್ನು ವಿರೋಧಿಸುವ ಮೇರಿ ಅದು ತರ್ಕಬದ್ಧವಾಗಿರಬೇಕು; ಜನರು ಹಕ್ಕುಗಳ ಬಗ್ಗೆ ಜಾಗೃತರಾಗಿರಬೇಕು; ಗುಲಾಮತನ ಮತ್ತು ಅವಕಾಶ ಕಸಿದು ಕೊಳ್ಳುವ ಪರಿಸ್ಥಿತಿಯಲ್ಲಿ ಔದಾರ್ಯ ಹುಟ್ಟಿಕೊಳ್ಳುವುದಿಲ್ಲ ಎಂಬುದನ್ನು ಮೇರಿ ಅರ್ಥಮಾಡಿ ಕೊಂಡಿದ್ದಳು. ಮಹಿಳೆಯರ ಸುಧಾರಣೆಗೆ ಸಮಾನತೆಯೇ ಮೂಲಾಧಾರವಾಗಿದೆ. ಸಮಾನತೆ ಯೆಂದರೆ ಒಬ್ಬ ವ್ಯಕ್ತಿ ಮತ್ತೊಬ್ಬ ವ್ಯಕ್ತಿಯನ್ನು ಅವಲಂಬಿಸಿರುವುದು. ಅದು ವಿಶೇಷ ಸ್ಥಾನವನ್ನು ಹೊಂದುವುದಕ್ಕಾಗಿರಬಹುದು ಅಥವಾ ಸಂಪತ್ತು ಮತ್ತು ಬಡತನಕ್ಕೆ ಸಂಬಂಧಿಸಿರಬಹುದು. ಸಮಾನತೆ ವ್ಯಕ್ತಿಯನ್ನು ಉತ್ತಮ ನಾಗರಿಕನನ್ನಾಗಿ ರೂಪಿಸುತ್ತದೆ. ಜನರು ನಾಗರಿಕ ಹಕ್ಕು, ಸಮಾನ ಅವಕಾಶ ಮತ್ತು ಸ್ವಾತಂತ್ರ್ಯ ಹೊಂದುವುದು ತುಂಬಾ ಅವಶ್ಯಕ ಎನ್ನುತ್ತಾಳೆ. ಲಾಕ್ ಮತ್ತು ಆ್ಯಡಮ್ ಸ್ಮಿತ್‌ರ ತತ್ವಗಳನ್ನು ಬೆಂಬಲಿಸಿ ಅವರ ಮುಕ್ತ ಉದ್ಯಮಶೀಲತೆ ಮತ್ತು ಮಧ್ಯಮವರ್ಗದ ಜನರ ಪ್ರಗತಿಪರ ದೃಷ್ಟಿಕೋನ, ಧೋರಣೆ, ನಂಬಿಕೆ, ಸ್ವತಂತ್ರ ವಿಚಾರವನ್ನು ಪ್ರೋತ್ಸಾಹಿಸುತ್ತಾಳೆ.

ಸ್ತ್ರೀಯರು ಸಮಾನ ನಾಗರಿಕ ಹಕ್ಕುಗಳನ್ನು ಹೊಂದಲು ಅರ್ಹರು ಎಂದು ಪ್ರತಿಪಾದಿಸಿದರೂ ಅವರ ರಾಜಕೀಯ ಹಕ್ಕುಗಳ ಬಗ್ಗೆ ಸ್ಪಷ್ಟ ನಿಲುವನ್ನು ವ್ಯಕ್ತಪಡಿಸುವುದಿಲ್ಲ. ಸರ್ಕಾರದ ಆಡಳಿತದಲ್ಲಿ ಯಾವ ರೀತಿ ಪ್ರಾತಿನಿಧ್ಯ ಪಡೆಯಬೇಕು, ಪುರುಷರಂತೆ ರಾಜಕೀಯ ಹಕ್ಕುಗಳನ್ನು ಹೇಗೆ ಹೊಂದಬೇಕು ಎಂಬುದರ ಬಗ್ಗೆ ಹೇಳುವುದಿಲ್ಲ. ೩೮ನೇ ವಯಸ್ಸಿಗೆ ಅಕಾಲ ಮೃತ್ಯುವಿಗೆ ತುತ್ತಾಗಿದ್ದರಿಂದ ಬಹುಶಃ ಈ ವಿಷಯದಲ್ಲಿ ಆಳವಾಗಿ ಚಿಂತಿಸಲು ಅವಳಿಗೆ ಸಾಧ್ಯವಾಗಿಲ್ಲದಿರಬಹುದು. ವಿವಾಹ ಮತ್ತು ಕುಟುಂಬದೊಳಗೆ ಸ್ತ್ರೀಯರು ನಾಗರಿಕ ಸಮಾನ ಹಕ್ಕುಗಳನ್ನು ಪಡೆಯುವಂತಾಗಬೇಕೆಂದು ಮತ್ತೆ ಮತ್ತೆ ಉಚ್ಚರಿಸುತ್ತಾಳೆ. ವಿವಾಹ ಸಂಬಂಧದಲ್ಲಿ ಸಮಾನತೆ ಮತ್ತು ಸ್ವಾತಂತ್ರ್ಯವನ್ನು ಹೇಗೆ ಸಾಧಿಸಬೇಕೆಂದು ತಿಳಿಸುತ್ತಾಳೆ.

ಸ್ತ್ರೀಯರು ಮೂಲಭೂತ ಹಕ್ಕುಗಳನ್ನು ಪಡೆಯಬೇಕೆಂದರೆ ಅನೇಕ ತೊಡಕುಗಳು ಎದುರಾಗುತ್ತವೆ ಎಂದು ಅವಳಿಗೆ ತಿಳಿದಿತ್ತು. ಮಾನವ ಹಕ್ಕುಗಳ ಅಡಿಯಲ್ಲೇ ಮಹಿಳೆಯರ ಹಕ್ಕುಗಳನ್ನು ಗುರುತಿಸಿದಳು. ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವದ ತತ್ವಗಳನ್ನು ಸ್ತ್ರೀಯರಿಗೂ ಅನ್ವಯಿಸಬೇಕೆಂದು ಒತ್ತಿಹೇಳಿದಳು. ಮಹಿಳಾ ವಿಷಯಗಳು ಸ್ತ್ರೀಯರಿಗಷ್ಟೆ ಸಂಬಂಧಿಸಿಲ್ಲ, ಅವು ಪುರುಷರೊಂದಿಗೆ ಮತ್ತು ರಾಜ್ಯದ ಸಂಬಂಧದೊಂದಿಗೆ ತಳುಕು ಹಾಕಿಕೊಂಡಿವೆ. ಸ್ತ್ರೀಯರು ಪುರುಷರಿಗೆ ಅಧೀನರಾಗಿದ್ದರೆ ಪುರುಷರು ತಮಗೆ ತಾವೇ





ಮಂಗಳೂರಿನಲ್ಲಿ ಪ್ರಾರಂಭವಾದ ನವಕರ್ನಾಟಕ ಪುಸ್ತಕ ಪ್ರದರ್ಶನದ ಉದ್ಘಾಟನೆಯನ್ನು ತುಳು ಸಾಹಿತ್ಯ ಅಕಾಡೆಮಿಯ ಅಧ್ಯಕ್ಷ ಶ್ರೀ ಸೀತಾರಾಮ್ ಕುಲಾಲ್ ನೆರವೇರಿಸಿದರು. ಪತ್ರಕರ್ತ ಶ್ರೀ ಚಿದಂಬರ ಬೈಕಂಪಾಡಿ ಮುಖ್ಯ ಅತಿಥಿಯಾಗಿದ್ದರು. ಪ್ರದರ್ಶನದ ವ್ಯವಸ್ಥಾಪಕರಾದ ಶ್ರೀ ಜಿ. ಚೆನ್ನಪ್ಪ, ಉಸ್ತುವಾರಿ ವಹಿಸಿರುವ ಬಿ. ಜಗದೀಶ್ ಅಲ್ಲದೆ ನಾಗೇಶ ಕಲ್ಲೂರು, ಎಸ್. ಎಂ. ಕಟ್ಟೆ, ಹರೀಶ್, ಸಂದೇಶ್, ಸಂದೀಪ್ ಹಾಗೂ ಭಾರಿ ಸಂಖ್ಯೆಯ ಪುಸ್ತಕಪ್ರಿಯರು ಹಾಜರಿದ್ದರು.



ಉಡುಪಿಯಲ್ಲಿ ನವಕರ್ನಾಟಕ ಪುಸ್ತಕ ಪ್ರದರ್ಶನ ಮತ್ತು ಮಾರಾಟ ಮಳಿಗೆಯನ್ನು ಪೊಲೀಸ್ ವರಿಷ್ಠಾಧಿಕಾರಿ ಕೆ. ಸಿ. ವಿರೂಪಾಕ್ಷ ಉದ್ಘಾಟಿಸಿದರು. ಮುಖ್ಯ ಅತಿಥಿಯಾಗಿ ಸಾಹಿತಿ ಆರ್ಕೆ ಮಣಿಪಾಲ ಭಾಗವಹಿಸಿದ್ದರು. ಅಲ್ಲದೆ ಶ್ರೀ ದಿವಾಕರ ಸಾಲ್ಯಾನ್, ಸಂವರ್ಧನ್ ಮತ್ತು ಬಾಲಕೃಷ್ಣ ಮುಂತಾದ ಗಣ್ಯರು ಹಾಗೂ ಸಾಹಿತ್ಯಾಸಕ್ತರು ಭಾಗವಹಿಸಿದ್ದರು.

ಅಧೀನರಾಗಿದ್ದಾರೆ. ಆದುದರಿಂದ ಸ್ತ್ರೀ ವಿಮೋಚನೆಗೂ ಪುರುಷರ ವಿಮೋಚನೆಗೂ ಹತ್ತಿರದ ಸಂಬಂಧವಿದೆ, ಎನ್ನುತ್ತಾಳೆ.

ಮೇರಿ ಪುರುಷಪ್ರಧಾನತೆಯನ್ನು ಸಂಪೂರ್ಣವಾಗಿ ನಿರಾಕರಿಸುತ್ತಾಳೆ. ಕುಟುಂಬದೊಳಗಿನ ಸ್ತ್ರೀ-ಪುರುಷರ ನಡುವಿನ ಅಧಿಕಾರ ಸಂಬಂಧವನ್ನು ಸಹಜವಾದುದೆಂದು ಒಪ್ಪಿಕೊಳ್ಳುವುದಿಲ್ಲ. ಖಾಸಗಿ ವಲಯದಲ್ಲಿ ಪುರುಷರು ತಂದೆಯಾಗಿ, ಗಂಡನಾಗಿ, ತೋರುವ ಅಧಿಕಾರವು ಎಷ್ಟು ಕೃತಕವೋ ಸಾರ್ವಜನಿಕ ವಲಯದಲ್ಲಿ ರಾಜಪ್ರಭುತ್ವ ಜನರ ಮೇಲೆ ತೋರುವ ಅಧಿಕಾರವು ಅಷ್ಟೇ ಕೃತಕವಾಗಿರುತ್ತದೆ. ಸಮಾಜದ ಪ್ರಗತಿಯನ್ನು ಕುಂಠಿತಗೊಳಿಸುವುದರಿಂದ ರಾಜಪ್ರಭುತ್ವವನ್ನು ವಿರೋಧಿಸುತ್ತಾಳೆ. ಸ್ವ-ಅಭಿವೃದ್ಧಿಯಲ್ಲಿ ನಂಬಿಕೆಯಿಟ್ಟಿದ್ದ ಮೇರಿ ಮತದಾನವೊಂದೇ ಪರಿಹಾರವೆಂದು ತಿಳಿದಿರಲಿಲ್ಲ. ಖಾಸಗಿ ವಲಯದಲ್ಲಿ ಸ್ತ್ರೀಯರು ವಿಮೋಚನೆ ಹೊಂದಬೇಕೆಂದು ಹೇಳಿದಳು.

ಮನೆಯೊಳಗೆ ಸ್ತ್ರೀಯರ ಪಾತ್ರಕ್ಕೆ ಮಹತ್ವವನ್ನು ನೀಡುತ್ತಾಳೆ. ಮೊದಲು ಅವರು ತಾಯಿ ಮತ್ತು ಹೆಂಡತಿಯ ಪಾತ್ರಗಳನ್ನು ಸಮರ್ಥವಾಗಿ ನಿರ್ವಹಿಸಬೇಕು. ಅದೇ ಹೊತ್ತಿಗೆ ಅವರು ಸ್ವತಂತ್ರ ಸ್ವಾವಲಂಬಿ ಹಾಗೂ ವಿಚಾರವಂತ ವ್ಯಕ್ತಿಗಳಾಗಿರಬೇಕು ಎನ್ನುತ್ತಾಳೆ. ಸ್ತ್ರೀಯರ 'ನಾಗರಿಕ ಹಕ್ಕುಗಳ' ರಕ್ಷಣೆಗೆ ಮತ್ತು ತಮ್ಮ ಸಹಜ ಕರ್ತವ್ಯಗಳಿಗೆ ಹೊಂದಿಕೆಯಾಗುವ ವೃತ್ತಿಗಳನ್ನು (ಉದಾ: ದಾದಿ, ವೈದ್ಯೆ) ಕೈಗೊಳ್ಳಲು ಸ್ವಾತಂತ್ರ್ಯವಿರಬೇಕು ಎಂದು ಪ್ರತಿಪಾದಿಸುತ್ತಾಳೆ. ಶ್ರೇಷ್ಠಗುಣವುಳ್ಳ ಸ್ತ್ರೀಯರು ಮಾತ್ರ ಸ್ವತಂತ್ರವಾದ ಉಪಯುಕ್ತ ಜೀವನ ನಡೆಸಲು ಸಾಧ್ಯ. ಅನೇಕ ಮಹಿಳೆಯರಿಗೆ ಕುಟುಂಬವೇ ಪ್ರಧಾನ ಭೂಮಿಕೆಯಾಗಿದ್ದು ಅಲ್ಲಿಯೇ ಅವರು ಸಮಾನತೆ ಮತ್ತು ಸ್ವಾತಂತ್ರ್ಯ ಸಾಧಿಸಿಕೊಳ್ಳಬೇಕೆಂದು ಅದಕ್ಕೆ ಕೆಲವು ಸಲಹೆಗಳನ್ನು ನೀಡುತ್ತಾಳೆ :

೧. ಕುಟುಂಬದಲ್ಲಿ ಸ್ತ್ರೀಯನ್ನು ಸಮಾನ ಮತ್ತು ಜವಾಬ್ದಾರಿಯುತ ವ್ಯಕ್ತಿಯೆಂದು ಪರಿಗಣಿಸಬೇಕು. ಆಸ್ತಿ ಹಕ್ಕಿಗೆ ಸಂಬಂಧಿಸಿದಂತೆ ಅವಳು ಗಂಡನನ್ನು ಅವಲಂಬಿಸಿರಬಾರದು.

೨. ಒಂದು ವೇಳೆ ಸ್ತ್ರೀಯು ತಾನೇ ಸಂಪಾದಿಸಿಕೊಂಡು ಜೀವನ ನಡೆಸಬಲ್ಲವಳಾದರೆ ವಿವಾಹ ಜೀವನಾಧಾರವಾಗಬೇಕಿಲ್ಲ. ಗಂಡನಿರಲಿ ಇಲ್ಲದಿರಲಿ ಅವನನ್ನು ಅವಲಂಬಿಸಿಯೇ ಜೀವಿಸಬೇಕಿಲ್ಲ.

೩. ಮಹಿಳೆಯು ಗೃಹಕೃತ್ಯಗಳನ್ನು ಮಾಡಿಕೊಂಡು ತನ್ನ ಸಾಂಪ್ರದಾಯಿಕ ತಾಯಿ ಮತ್ತು ಹೆಂಡತಿ ಪಾತ್ರವನ್ನು ನಿರ್ವಹಿಸುತ್ತಲೇ ತನ್ನದೇ ಸ್ವಭಾವ, ಚಿಂತನೆ, ವಿಚಾರ ಹಾಗೂ ಸದ್ಗುಣಗಳನ್ನು ಬೆಳೆಸಿಕೊಳ್ಳಬಹುದು.

ವಿವಾಹದಲ್ಲಿ ಬಾಳಸಂಗಾತಿಗಳು ಇಬ್ಬರೂ ಸಮಾನರು, ಸ್ವತಂತ್ರರು ಹಾಗೂ ಪರಾವಲಂಬಿಗಳು. ತಮಗೆ ಒಪ್ಪಿಸಿದ ಕರ್ತವ್ಯಗಳನ್ನು ಅಂದರೆ ಗಂಡ ಸಲಹುವವನಾಗಿ ಸ್ತ್ರೀ ತಾಯಿಯಾಗಿ, ಪತ್ನಿಯಾಗಿ ಸರಿಯಾಗಿ ಪಾಲಿಸಬೇಕು. ಅವಳ ಪ್ರಕಾರ ಆದರ್ಶ ಕುಟುಂಬವೆಂದರೆ ಸ್ತ್ರೀಯು ಮಕ್ಕಳನ್ನು ನೋಡಿಕೊಂಡು ಆಳುಗಳಿಂದ ಗೃಹಕೃತ್ಯಗಳನ್ನು ಮಾಡಿಸಿಕೊಂಡು ಗಂಡ ಹೊರಗೆ ದುಡಿದು ಮನೆಗೆ ಬಂದರೆ ಅಲ್ಲಿ ಸ್ವಚ್ಛವಾದ ಮನೆ ಮತ್ತು ಸಂತೋಷದಿಂದಿರುವ ಮಕ್ಕಳಿರಬೇಕು ಎಂದು ಹೇಳುತ್ತಾ ಸಾಧಾರಣ ಮಧ್ಯಮ ವರ್ಗದ ಕುಟುಂಬವನ್ನು ಪ್ರತಿನಿಧಿಸುತ್ತಾಳೆ. ಆದರೆ ತೀವ್ರಗಾಮಿಗಳ ಪ್ರತಿಪಾದನೆಗೆ ವಿರುದ್ಧವಾಗಿ ಸಾಂಪ್ರದಾಯಿಕ ಪಾತ್ರವನ್ನು ಎತ್ತಿಹಿಡಿಯುತ್ತಾಳೆ. ೧೭೯೭ರಲ್ಲಿ ಬರೆದ 'ದ ರಾಂಗ್ಸ್ ಆಫ್ ವಿಮೆನ್' ಕಾದಂಬರಿಯಲ್ಲಿ ತುಳಿತಕ್ಕೊಳಗಾದ ಬಡ ಮಹಿಳೆಯರ ನೋವನ್ನು ವಿವರಿಸುತ್ತಾಳೆ.

ಮೇರಿ ಒಂದು ಸಂದರ್ಭದಲ್ಲಿ ಸ್ತ್ರೀ ಹೊರಗೆ ಹೋಗಿ ದುಡಿಯಬೇಕು ಎನ್ನುತ್ತಾಳೆ. ಇನ್ನೊಂದು ಸಂದರ್ಭದಲ್ಲಿ, ಅವರನ್ನು ಕುಟುಂಬದ ವ್ಯಾಪ್ತಿಯಿಂದ ಹೊರಗೆ ನೋಡುವುದಕ್ಕೆ ಇಷ್ಟಪಡುವುದಿಲ್ಲ. ಮಕ್ಕಳ ಪಾಲನೆಯು ಸ್ತ್ರೀಯು ನಿರ್ವಹಿಸಬೇಕಾದ ವಿಶಿಷ್ಟ ಕಾರ್ಯ. ಈ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಲು ಶಿಕ್ಷಣ ಅವರನ್ನು ಸಿದ್ಧಪಡಿಸಬೇಕು. ಅಜ್ಞಾನ, ವಿಚಾರವಂತಿಕೆಯಲ್ಲಿ ಅತಿಯಾದ ಸಂವೇದನಾಶೀಲ ಮಹಿಳೆಯರು ಮಕ್ಕಳನ್ನು ಪೋಷಿಸಲು ಸಮರ್ಥರಾಗಿರುವುದಿಲ್ಲ, ಎನ್ನುತ್ತಾಳೆ. ಪುರುಷ ತನ್ನ ತರ್ಕದ ನಿರ್ದೇಶನದಂತೆ ನಡೆದುಕೊಳ್ಳುತ್ತಾನೆ ಎನ್ನುವುದೇ ಎಲ್ಲಾ ಸದ್ಗುಣಗಳ ಮೂಲತತ್ವವಾಗಿದೆ. ಶಿಕ್ಷಣವು ಅವನನ್ನು ಸದ್ಗುಣಿಯನ್ನಾಗಿಸುತ್ತದೆ. ಅದೇ ರೀತಿ ಸ್ತ್ರೀಯರು ಸದ್ಗುಣಗಳನ್ನು ಪಡೆಯುವಂತಾಗಬೇಕು. ಅರೆ-ವ್ಯಕ್ತಿತ್ವವನ್ನು ಬೆಳೆಸುವ ಶಿಕ್ಷಣ ಪಡೆಯುವಂತಾಗಬಾರದು. ನಿಜ ಹೇಳಬೇಕೆಂದರೆ ಸ್ತ್ರೀಯರು ತಮ್ಮ ದೇಹಕ್ಕೆ ದಾಸರಾಗಿದ್ದಾರೆ. ತಮ್ಮ ಅಧೀನತೆಯನ್ನೇ ವೈಭವೀಕರಿಸಿಕೊಂಡಿದ್ದಾರೆ; ಮೊದಲು ಅದರಿಂದ ಹೊರಬರಬೇಕೆನ್ನುತ್ತಾಳೆ.

ಮೇರಿಯ ಪ್ರಕಾರ ಮಾದರಿ ಮಹಿಳೆಯೆಂದರೆ ಮಾನಸಿಕವಾಗಿ ಸದೃಢಳಾದ, ಶಿಕ್ಷಣವನ್ನು ಹೊಂದಿದ, ಸ್ವತಂತ್ರ ವ್ಯಕ್ತಿತ್ವವುಳ್ಳ, ಸ್ವಾವಲಂಬಿಯಾದ ಹಾಗೂ ಗಂಡನ ಗೌರವವನ್ನು ಸಂಪಾದಿಸಿಕೊಂಡವಳು. ಪರಿಶುದ್ಧವಾದ ದುರ್ಬಲ ಮಹಿಳೆ ಆದರ್ಶ ಮಹಿಳೆಯಾಗಲು ಸಾಧ್ಯವಿಲ್ಲ. ಈ ಹೊಸ ಮಹಿಳೆ ಪತಿಗೆ ಉತ್ತಮ ಸಂಗಾತಿಯಾಗಬಲ್ಲಳು. ಮಕ್ಕಳಿಗೆ ಉತ್ತಮ ತಾಯಿಯಾಗಬಲ್ಲಳು. ಒಟ್ಟಿನಲ್ಲಿ ಮೇರಿಗೆ ವಿವಾಹವು ಅನುಭೂತಿ, ಪಾಲುಗಾರಿಕೆ ಮತ್ತು ಸಂಗಾತಿಯನ್ನು ಹೊಂದುವ ಸಂಬಂಧವಾಗಿದೆ. ''ಪುರುಷರು ಸ್ತ್ರೀಯರನ್ನು ಯಜಮಾನಿಯರನ್ನಾಗಿಸದೇ ಸಂಗಾತಿಗಳನ್ನಾಗಿ ಸ್ವೀಕರಿಸದ ಹೊರತು ವಿವಾಹವು ಒಂದು ಪವಿತ್ರ ಬಂಧನವಾಗಲು ಸಾಧ್ಯವಿಲ್ಲ. ಅವರಿಬ್ಬರ ಗುಣಗಳು ತರ್ಕಬದ್ಧವಾಗಿರಬೇಕು. ಇಬ್ಬರು ಒಲುಮೆಯಿಂದ ಕೂಡಿ ತಮ್ಮ ಕರ್ತವ್ಯಗಳನ್ನು ನಿರ್ವಹಿಸಿದರೆ ಆದರ್ಶ ಸಮಾಜವನ್ನು ಕಟ್ಟಲು ಸಾಧ್ಯ'' ಎಂಬುದು ಅವಳ ಅಭಿಪ್ರಾಯವಾಗಿದೆ.

ತನ್ನ ಬಾಲ್ಯದಲ್ಲಿ ತಂದೆ-ತಾಯಿಯರ ವೈವಾಹಿಕ ಸಂಬಂಧವನ್ನು ನೋಡಿದ ಮೇರಿ ವಿವಾಹವೆಂದರೆ ದಾಸ್ಯದಿಂದ ಕೂಡಿದ, ಬಿಡುಗಡೆಯಿಲ್ಲದ ನಿರಾಶಾದಾಯಕ ಬಂಧನವೆಂದು ತಿಳಿದಿದ್ದಳು. ತನ್ನ ತಾಯಿಯ ಹೀನಸ್ಥಿತಿಯನ್ನು ಕಂಡು ತಾನು ವಿವಾಹವಾಗಬಾರದೆಂದೂ ನಿರ್ಧರಿಸಿದಳು. ಸ್ವತಂತ್ರ ಜೀವನವೆಂದರೆ ಯಾವುದೇ ಅಡ್ಡಿಯಿಲ್ಲದೆ ತಾನು ಅರ್ಥಮಾಡಿಕೊಂಡಂತೆ ಜೀವನ ನಡೆಸುವುದು. ಯಾರ ರಕ್ಷಣೆಯೂ ಇಲ್ಲದೆ ಕೇವಲ ತನ್ನ ಹಕ್ಕುಗಳನ್ನು ಅವಲಂಬಿಸಿ ಜೀವನ ನಡೆಸಬೇಕೆಂದು ಆಸೆಪಟ್ಟಳು. ಆದರೆ ೧೮ನೇ ಶತಮಾನದಲ್ಲಿನ ಕಾನೂನು ಮಹಿಳೆಯರಿಗೆ ರಕ್ಷಣೆ ನೀಡುತ್ತಿರಲಿಲ್ಲ. ಹಕ್ಕುಗಳು ಇಲ್ಲದ್ದರಿಂದ ಮೇರಿ ತನ್ನ ಹೋರಾಟವನ್ನು ಮುಂದುವರೆಸಲಾಗಲಿಲ್ಲ.

ಮೇರಿಯ ಗ್ರಂಥ 'ಎ ವಿಂಡಿಕೇಶನ್ ಆಫ್ ದ ರೈಟ್ಸ್ ಆಫ್ ವಿಮೆನ್'ನ ಮಹತ್ವವೆಂದರೆ ಅವಳ ಸಮಕಾಲೀನ ತೀವ್ರಗಾಮಿ ಚಿಂತಕರು ಕೇವಲ ಪುರುಷರ ಸ್ವಾತಂತ್ರ್ಯಕ್ಕೆ ಹೆಚ್ಚು ಗಮನಕೊಟ್ಟರು. ಆದರೆ ಇವಳು ಸ್ತ್ರೀಯರು ಸೇರಿದಂತೆ ಇಡೀ ಮಾನವ ಕುಲದ ಹಕ್ಕುಗಳ ಬಗ್ಗೆ ಮಾತನಾಡಿದಳು. ಸ್ತ್ರೀಯರನ್ನು ಪರಾಧೀನಗೊಳಿಸಿ ಗೃಹಕೃತ್ಯಗಳಿಗೆ ಸೀಮಿತಗೊಳಿಸಿದವರ ವಿರುದ್ಧ ದನಿ ಎತ್ತಿದಳು. ಸ್ತ್ರೀಯರ ಮತದಾನದ ಹಕ್ಕು ೨೦ನೇ ಶತಮಾನದಲ್ಲಿ ಜಾರಿಗೆ ಬಂದರೂ ಅದರ ಹೋರಾಟದ ಬುನಾದಿ ಹಾಕಿದವಳು ಮೇರಿ ಎಂಬುದು ಸ್ಪಷ್ಟವಾಗಿದೆ.

ಸ್ತ್ರೀಯರ ಗೌರವವನ್ನು ಕಾಪಾಡುವುದು ಸಮಾಜ ಸುಧಾರಣೆಯ ಒಂದು ಪ್ರಮುಖ ಭಾಗ ಎಂದು ಭಾವಿಸಿದಳು. ಆಗಿನ ಕಾಲದ ಎರಡು ಪ್ರಮುಖ ಸಮಸ್ಯೆಗಳನ್ನು ಗುರುತಿಸಿದಳು. ಒಂದು, ಸಂಪತ್ತಿನ ಅಸಮಾನ ಹಂಚಿಕೆ. ಎರಡು, ಸ್ತ್ರೀಯರು ಪುರುಷರಂತೆ ವಿಚಾರವಂತರು ಎಂದು ಒಪ್ಪಿಕೊಳ್ಳದಿರುವುದು. ಐಷಾರಾಮ ಜೀವನ, ಸೋಮಾರಿತನ, ಅಧಿಕಾರ ಮತ್ತು ಆಸ್ತಿಯ ಅಸಮಾನ ಹಂಚಿಕೆಗಳ ಪರಿಣಾಮಗಳನ್ನು ಅರಿತಿದ್ದಳು. ಸ್ತ್ರೀಯರ ಸ್ಥಾನವನ್ನು ಕೆಳಮಟ್ಟಕ್ಕೆ ಇಳಿಸಿರುವುದಕ್ಕೆ ಮುಖ್ಯ ಕಾರಣ ಅವರ ಮೌಲ್ಯವನ್ನು ಸರಿಯಾಗಿ ಮಾಪನ ಮಾಡದಿರುವುದು. ಸಾಹಸ, ಕಾವ್ಯ ರಚನೆ, ಸಂಗೀತ ಮೊದಲಾದ ಮಾನವ ಚಟುವಟಿಕೆಗಳಿಂದ ಅವರನ್ನು ಹೊರಗಿಟ್ಟಿರುವುದು ಅವರನ್ನು ಕೀಳಾಗಿಸಿದೆ ಎನ್ನುತ್ತಾಳೆ.

ಆಸಕ್ತಿದಾಯಕ ವಿಷಯವೆಂದರೆ, ಸ್ತ್ರೀಯರ ಶಿಕ್ಷಣವನ್ನು ವಿರೋಧಿಸುವ ವಾದಗಳು ಮತ್ತು ಬಡಜನರ ಶಿಕ್ಷಣವನ್ನು ವಿರೋಧಿಸುವ ವಾದಗಳು ಒಂದೇ ಆಗಿವೆ ಎಂಬುದನ್ನು ಮೇರಿ ಅರಿತಿದ್ದಳು. ''ವ್ಯಕ್ತಿಯನ್ನು ವ್ಯಕ್ತಿಯಾಗಿ ಗೌರವಿಸುವುದೇ ಎಲ್ಲಾ ಶ್ರೇಷ್ಠ ಭಾವನೆಗಳ ತಳಪಾಯ'' ಎಂದು ಸ್ಪಷ್ಟವಾಗಿ ತಿಳಿಸಿದಳು. ಸ್ತ್ರೀಯರನ್ನು ಸಂತೋಷಗೊಳಿಸಲು ಪುರುಷರು ಉತ್ತಮ ಕಾರ್ಯಗಳನ್ನು ಕೈಗೊಂಡರೂ ಅವರನ್ನು ಪರಾಧೀನಗೊಳಿಸಿದರೆ ಅದು ಅನ್ಯಾಯವೆಂದು ಹೇಳುತ್ತಾಳೆ.

ಸಮಾಜದ ಪ್ರಗತಿಗೆ ಸ್ತ್ರೀ-ಪುರುಷರ ಸಮಾನತೆ ಅತ್ಯವಶ್ಯ ಎಂದರಿತ ಮೇರಿ ೧೮ನೇ ಶತಮಾನದಲ್ಲೇ ಮಹಿಳೆಯರ ಹಕ್ಕುಗಳ ಪ್ರಶ್ನೆಗಳನ್ನು ಎತ್ತಿ ಮುಂದೆ ಸ್ತ್ರೀವಾದಿ ಚಿಂತನೆಗೆ ದಾರಿಮಾಡಿಕೊಟ್ಟಳು. ಮೇರಿ ಉದಾರವಾದಿ ಸ್ತ್ರೀವಾದಿ ಎಂದು ಗುರುತಿಸಲ್ಪಟ್ಟರೂ ೧೮ನೇ ಶತಮಾನದ ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ಪರಿಸ್ಥಿತಿಗೆ ಹೋಲಿಸಿದರೆ ಅವಳ ಚಿಂತನೆಗಳು ಕ್ರಾಂತಿಕಾರಿಯಾಗಿದ್ದವು ಎಂದು ಹೇಳಬಹುದು.

**ಹೇಮಲತ ಎಚ್. ಎಮ್.**
ಮಹಿಳಾ ಅಧ್ಯಯನ ವಿಭಾಗ, ಮಹಿಳಾ ವಿಶ್ವವಿದ್ಯಾಲಯ, ಬಿಜಾಪುರ

# ಇರಾನ್
# ಮತ್ತೆ ಅಮೆರಿಕಾದ ಒತ್ತಡಕ್ಕೆ ಮಣಿದ ಮನಮೋಹನ್ ಸಿಂಗ್ ಸರಕಾರ

ವಿಶ್ವವೀಕ್ಷಣೆ

ಇರಾನಿನ ನ್ಯೂಕ್ಲಿಯರ್ ಸ್ಥಾವರಗಳ ಮೇಲೆ ವೈಮಾನಿಕ ದಾಳಿ ನಡೆಸಲು ಅಮೆರಿಕಾ ಸಿದ್ಧತೆ ಪೂರ್ಣಗೊಳಿಸಿದೆ ಎಂದು ಬ್ರಿಟಿಷ್ ಪತ್ರಿಕೆಗಳು ವರದಿ ಮಾಡಿವೆ. ಅಮೆರಿಕಾದ ರಕ್ಷಣಾ ಇಲಾಖೆ ಅಂಥ ಹಠಾತ್ ದಾಳಿಗೆ ತಯಾರಿ ನಡೆಸಿದೆ. ಇಂಥ ಕ್ರಮ ಅನಿರೀಕ್ಷಿತವೇನಲ್ಲ. ಇರಾನನ್ನು ಕಬಳಿಸಲು ತುದಿಗಾಲ ಮೇಲೆ ನಿಂತಿರುವ ಬುಷ್ ಆಡಳಿತ ಎಂಥ ದುಸ್ಸಾಹಸವನ್ನಾದರೂ ಮಾಡೀತು. ಹಾಗೇನಾದರೂ ಆದಲ್ಲಿ ಆ ಪಾತಕ ಕೃತ್ಯದಲ್ಲಿ ಭಾರತವೂ ಪಾಲುದಾರನಾದಂತಾಗುತ್ತದೆ. ಅಮೆರಿಕಾದ ಒತ್ತಡಕ್ಕೆ ಆಮಿಷಗಳಿಗೆ ಮಣಿದ ಭಾರತದ ಪ್ರಧಾನಿ ಮನಮೋಹನ್ ಸಿಂಗ್ ಜನಾಭಿಪ್ರಾಯವನ್ನು ಕಡೆಗಣಿಸಿ ಐಎಇಎ ಬೋರ್ಡ್ ಸಭೆಯಲ್ಲಿ ಎರಡನೇ ಬಾರಿ ಇರಾನಿನ ವಿರುದ್ಧ ಮತ ಹಾಕಿದ್ದಾರೆ. ಭಾರತದ ಸ್ವತಂತ್ರ ವಿದೇಶಾಂಗ ನೀತಿಗೆ ಆ ಮೂಲಕ ತಿಲಾಂಜಲಿ ನೀಡಲಾಗಿದೆಯಲ್ಲದೆ, ಅದನ್ನು ಅಮೆರಿಕಾದ ಮರ್ಜಿಗೆ ಲಗತ್ತಿಸಿದೆ. ಇದರಿಂದಾಗಿ ಭಾರತದ ಪ್ರಜೆ ತಲೆತಗ್ಗಿಸುವಂತಾಗಿದೆ. ಮೊದಲಬಾರಿ ಮತ ನೀಡಿದಾಗಲೆ ಮನಮೋಹನ್ ಸಿಂಗ್ ಏನೇ ಸಮಜಾಯಿಷಿ ನೀಡಿದರೂ ತಾನು ತಳೆದ ಧೋರಣೆಯನ್ನು ಸಮರ್ಥಿಸಿಕೊಳ್ಳಲಾಗಲಿಲ್ಲ. ಸರಕಾರಕ್ಕೆ ಹೊರಗಿನಿಂದ ಬೆಂಬಲ ನೀಡುತ್ತಿರುವ ಎಡಪಕ್ಷಗಳು ಕಾಂಗ್ರೆಸ್ಸಿನ ಈ ನೀತಿಯನ್ನು ಬಲವಾಗಿ ವಿರೋಧಿಸಿದ್ದುವು, ಪ್ರತಿಭಟಿಸಿದ್ದುವು. ಯುಪಿಎ ಮತ್ತು ಎಡಪಕ್ಷಗಳ ಸಮನ್ವಯ ಸಮಿತಿಯ ಸಭೆಯಲ್ಲಿ ಈ ಬಾರಿ ಎಡಪಕ್ಷಗಳು ಸರಕಾರವನ್ನು ತರಾಟೆಗೆ ತೆಗೆದುಕೊಂಡಿವೆ. ಎಡಪಕ್ಷಗಳ ಬೆಂಬಲ ಇಂದಿನ ಪರಿಸ್ಥಿತಿಯಲ್ಲಿ ಅನಿವಾರ್ಯವಾಗಿ ತನಗೆ ದೊರೆಯುವುದು ಎಂದು ಸರಕಾರ ತಿಳಿದುಕೊಂಡಿದ್ದರೆ ಅದು ತಪ್ಪಾಗುತ್ತದೆ. ಸರಕಾರ ಪಾರ್ಲಿಮೆಂಟಿನಲ್ಲಿ ಇರಾನಿನ ಬಗ್ಗೆ ಪೂರ್ಣ ಪ್ರಮಾಣದ ಚರ್ಚೆಗೆ ಒಪ್ಪಿದೆ. ಪಾರ್ಲಿಮೆಂಟಿನ ಒಳಗೂ ಹೊರಗೂ ಸರಕಾರದ ಇರಾನ್ ನೀತಿಯ ಬಗ್ಗೆ ಹೋರಾಟ ನಡೆಸಲು ಎಡಪಕ್ಷಗಳು ತೀರ್ಮಾನಿಸಿವೆ. ಹಾಗೆಯೇ, ಈ ಎಲ್ಲ ಅವಾಂತರಗಳಿಗೆ ಮೂಲ ಕಾರಣವಾದ ಅಮೆರಿಕಾದ ಅಧ್ಯಕ್ಷ ಜಾರ್ಜ್ ಡಬ್ಲ್ಯು. ಬುಷ್‌ನ ಭಾರತದ ಭೇಟಿಯನ್ನು ತೀವ್ರವಾಗಿ ಪ್ರತಿಭಟಿಸಲೂ ಈ ಪಕ್ಷಗಳು ನಿರ್ಧರಿಸಿವೆ. ಈ ಮಧ್ಯೆ ಪ್ರಧಾನ ವಿರೋಧಪಕ್ಷ ಭಾರತೀಯ ಜನತಾ ಪಕ್ಷ ತನ್ನ ನಿಜವಾದ ಬಣ್ಣವನ್ನು ತೋರಿಸಿದೆ. ಇರಾನಿನ ವಿರುದ್ಧ ಯುಪಿಎ ಸರಕಾರ ನೀಡಿದ ಮತವನ್ನು ಬಲವಾಗಿ ವಿರೋಧಿಸಿದ್ದ ಭಾಜಪ ಈಗ ಏಕಾಏಕಿಯಾಗಿ ಸರಕಾರದ ನೀತಿಯನ್ನು ಬೆಂಬಲಿಸಿದೆ. ಇದರಲ್ಲಿ ಆಶ್ಚರ್ಯವೇನಿಲ್ಲ. ವಾಜಪೇಯಿ ಅಂಡ್ ಕಂಪೆನಿ ಆಡಳಿತದಲ್ಲಿದ್ದಿದ್ದರೆ ಮಾಡುತ್ತಿದ್ದುದೂ ಇದನ್ನೇ. ಪ್ರಾಯಶಃ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಅಮೆರಿಕಾದ ಯಜಮಾನರಿಗೆ ನಜರು ಒಪ್ಪಿಸುತ್ತಿದ್ದರು. ಇಲ್ಲಿಯವರೆಗೆ ಸರಕಾರದ ಇರಾನ್ ನೀತಿಯನ್ನು ವಿರೋಧಿಸುತ್ತಿದ್ದ ಭಾಜಪ ಏಕ್‌ದಂ ಬೇರೆ ರಾಗ ಹಾಡಲು ಕಾರಣ ಅದರ ಮಾತೃಸಂಸ್ಥೆ ಆರ್‌ಎಸ್‌ಎಸ್ ತಳೆದ ಧೋರಣೆಯಿಂದ. ಭಾರತದ ನೆರೆಯಲ್ಲಿ ಇನ್ನೊಂದು ಮುಸ್ಲಿಂ ರಾಷ್ಟ್ರ ನ್ಯೂಕ್ಲಿಯರ್ ಅಸ್ತ್ರ ತಯಾರಿಸಿದರೆ ಅಪಾಯಕಾರಿ ಎನ್ನುವುದೇ ಸಬೂಬು.

ಆದರೆ ನಿಜವಾಗಿಯೂ ಇರಾನ್ ನ್ಯೂಕ್ಲಿಯರ್ ಅಸ್ತ್ರ ತಯಾರಿಕೆಯಲ್ಲಿ ತೊಡಗಿಕೊಂಡಿದೆಯೇ ? ತಾನು ಅಂಥ ಕಾರ್ಯದಲ್ಲಿ ತೊಡಗಿಲ್ಲ ಎಂದು ಇರಾನ್ ಸರಕಾರ ಸ್ಪಷ್ಟಪಡಿಸಿದೆ. ಸಣ್ಣ ಪ್ರಮಾಣದಲ್ಲಿ ಯುರೇನಿಯಮ್ ಪುಷ್ಟೀಕರಣ ಕಾರ್ಯದಲ್ಲಿ ತೊಡಗಿದ್ದ ಇರಾನ್ ಅದನ್ನು ಸ್ಥಗಿತಗೊಳಿಸಿತು. ಅಂತಾರಾಷ್ಟ್ರೀಯ ಪರಮಾಣು ಶಕ್ತಿ ಏಜನ್ಸಿ (ಐಎಇಎ) ಅಧಿಕಾರಿಗಳೂ ತನಿಖೆ ನಡೆಸಿದ ನಂತರ ಇರಾನ್ ನ್ಯೂಕ್ಲಿಯರ್ ಅಸ್ತ್ರ ತಯಾರಿಕೆಯಲ್ಲಿ ತೊಡಗಿಲ್ಲ ಎಂದು ವರದಿ ಮಾಡಿದ್ದಾರೆ. ಆದರೂ ಅಮೆರಿಕಾ ಪಟ್ಟು ಹಿಡಿದು ಇರಾನಿನ ಮೇಲೆ ಆಪಾದನೆ ಹೊರಿಸಿ ಕ್ರಮ ಜರುಗಿಸಲು ಹಾತೊರೆಯುತ್ತಿದೆ. ಯೂರೋಪಿನ ರಾಷ್ಟ್ರಗಳ ಜೊತೆಗೆ ರಷ್ಯಾ, ಚೀಣಾಗಳನ್ನು ತನ್ನ ಬುಟ್ಟಿಯಲ್ಲಿ ಹಾಕಿಕೊಂಡಿರುವ ಅಮೆರಿಕಾಗೆ ಭಾರತವನ್ನು ಸೆಳೆದುಕೊಳ್ಳಲು ಕಷ್ಟವೇನಾಗಲಿಲ್ಲ. ಐಎಇಎಯಲ್ಲಿ ತನಗೆ ಅನುಕೂಲವಾಗುವಂಥ ನಿರ್ಣಯವನ್ನು ಪಡೆದುಕೊಂಡಿದೆ. ಇನ್ನು ವಿಷಯ ವಿಶ್ವಸಂಸ್ಥೆಯ ಭದ್ರತಾ ಮಂಡಲಿಯನ್ನು ತಲುಪುವುದರಲ್ಲಿ ತಡವಾಗದು. ಮುಂದಿನ ವೇಳಾಪಟ್ಟಿಯೆಲ್ಲ ಸಿದ್ಧ. ಮೊದಲು ಆರ್ಥಿಕ ದಿಗ್ಬಂಧನ, ಅನಂತರ ದುರಾಕ್ರಮಣ. ಸುಳ್ಳು ಆಪಾದನೆ ಮಾಡಿ, ಅದೇ ನಿಜವೆಂದು ಸಾರಿ ಎಲ್ಲ ಅಂತಾರಾಷ್ಟ್ರೀಯ ನಿಯಮಗಳನ್ನು ಜನಾಭಿಪ್ರಾಯವನ್ನು ಕಡೆಗಣಿಸಿ ದುರಾಕ್ರಮಣಗಳ ದುರ್ಘಟನೆ ಜನರ ನೆನಪಿನಲ್ಲಿ ಇನ್ನೂ ಹಸಿಯಾಗಿಯೇ ಇದೆ. ಇರಾನ್ ಸರಕಾರ ಬಿಕ್ಕಟ್ಟನ್ನು ಬಗೆಹರಿಸಲು ಈಗಲೂ ಸಿದ್ಧವಿದೆ. ಸಂಧಾನದ ಮಾರ್ಗಕ್ಕೆ ಒಲವು ತೋರಿದೆ. ಆದರೆ ಅಮೆರಿಕಾ ಒಂದಾದ ಮೇಲೊಂದು ಹೊಸ ಬೇಡಿಕೆ ಮಂಡಿಸಿ ಪರಿಸ್ಥಿತಿ ಬಿಗಡಾಯಿಸುವಂತೆ ಮಾಡಿದೆ. ಅಣ್ವಸ್ತ್ರ ಪ್ರಸರಣ ವಿರೋಧ ಒಪ್ಪಂದಕ್ಕೆ ಸಹಿ ಹಾಕಿ ಅದರ ನಿಯಮಗಳನ್ನು ಚಾಚೂ ತಪ್ಪದೆ ಪಾಲಿಸುತ್ತಿರುವುದಾಗಿ ಇರಾನ್ ಸರಕಾರ ಪ್ರಕಟಿಸಿದೆ.

ಆದರೂ ಅಮೆರಿಕಾ ಇರಾನ್ ಅಣ್ವಸ್ತ್ರ ತಯಾರಿಕೆಯಲ್ಲಿ ತೊಡಗಿದೆ ಎಂದು ಬೊಬ್ಬೆ ಹಾಕುತ್ತಿದೆ. ಯುರೇನಿಯಮ್ ಪುಷ್ಟೀಕರಿಸಿದ ಮಾತ್ರಕ್ಕೆ ಅಣ್ವಸ್ತ್ರ ತಯಾರಿಕೆಯಲ್ಲಿ ತೊಡಗಿದೆ ಎಂದರ್ಥವೇನಲ್ಲ. ಐಎಇಎ ನಿಯಮದ ಪ್ರಕಾರ ಯುರೇನಿಯಮ್ ಪುಷ್ಟೀಕರಣ ಅಪರಾಧವೇನಲ್ಲ. ಪಾಕಿಸ್ತಾನ ಮತ್ತು ಇಸ್ರೇಲ್ ಅಣ್ವಸ್ತ್ರ ತಯಾರಿಕೆಯಲ್ಲಿ ತೊಡಗಿದ್ದಾಗ ಅಮೆರಿಕಾ ಗೊತ್ತಿದ್ದೂ ತೆಪ್ಪಗಿದ್ದುದೇಕೆ ? ಇತ್ತೀಚಿನ ವರದಿಯೊಂದರ ಪ್ರಕಾರ ಇಸ್ರೇಲ್ ಜರ್ಮನಿಯಿಂದ ನ್ಯೂಕ್ಲಿಯರ್ ಸಬ್‌ಮೆರೀನ್ ಖರೀದಿಸಲಿದೆ. ಇದಕ್ಕೆ ಅಮೆರಿಕಾದ ಆಕ್ಷೇಪ ಇಲ್ಲ. ಇಂಥ ದ್ವಿಮುಖ ಧೋರಣೆ ಅಮೆರಿಕಾದ ವಿದೇಶಾಂಗ ನೀತಿಯ ಮೂಲಮಂತ್ರ. ಇರಾನ್ ಈಗ ಈ ಧೋರಣೆಗೆ ಬಲಿಪಶು. ಭಾರತ ಸರಕಾರ ಎಚ್ಚತ್ತು ತನ್ನ ತಪ್ಪನ್ನು ತಿದ್ದುಕೊಳ್ಳದಿದ್ದರೆ ಮುಂದೊಂದು ದಿನ ಅದೂ ಅಮೆರಿಕಾದ ಹೊಟ್ಟೆಗೆ ಆಹಾರವಾದೀತು.

**ಪ್ಯಾಲಸ್ತೈನ್‌ನಲ್ಲಿ ಹಮಾಸ್ ಅಧಿಕಾರಕ್ಕೆ- ಅಮೆರಿಕಾದ ಕಳವಳ**

ಇತ್ತೀಚೆಗೆ ಪ್ಯಾಲಸ್ತೈನಿನಲ್ಲಿ ನಡೆದ ಚುನಾವಣೆಗಳಲ್ಲಿ ಹಮಾಸ್ ಬಹುಮತ ಗಳಿಸಿ ಅಧಿಕಾರಕ್ಕೇರಿರುವುದು ಇಸ್ರೇಲ್ ಹಾಗೂ ಅದರ ಪೋಷಕ ಅಮೆರಿಕಾಗೆ ತಲೆನೋವಾಗಿದೆ. ಅದನ್ನು ಪದಚ್ಯುತಗೊಳಿಸಲು ಎರಡೂ ದೇಶಗಳು ಸಂಚು ಹೂಡುತ್ತಿವೆ. ಹಣಕಾಸಿನ ನೆರವು ನೀಡದೆ, ಇಸ್ರೇಲ್ ವಸೂಲಿ ಮಾಡುವ ತೆರಿಗೆಯಲ್ಲಿ ಪ್ಯಾಲಸ್ತೈನ್ ಆಡಳಿತಕ್ಕೆ ನೀಡುತ್ತಿರುವ ಪಾಲನ್ನು ಕೊಡದೆ ಆರ್ಥಿಕ ಬಿಕ್ಕಟ್ಟು ಉಂಟುಮಾಡಿ ಸರಕಾರ ಉರುಳುವಂತೆ ಮಾಡುವುದೇ ಉದ್ದೇಶ. ಸರಕಾರ ಉಳಿಸಿಕೊಳ್ಳ

ಮುಂದಿನ ಪುಟಕ್ಕೆ



ಸೀಯಾರ್ಕೆ

ತಿಳಿವು

# ಭಾಷೆ ಕಲಿತವರ ಸ್ವತ್ತು

ಭಾಷೆಯನ್ನು ಭಾವನಾತ್ಮಕ ದೃಷ್ಟಿಯಿಂದ ನೋಡುವುದು ಬೇರೆ; ಭಾಷೆಯನ್ನು ವೈಚಾರಿಕ ದೃಷ್ಟಿಯಿಂದ ನೋಡುವುದು ಬೇರೆ. ಸಾಮಾನ್ಯವಾಗಿ ಎಲ್ಲ ಭಾಷೆಯ ಜನರಿಗೆ ತಮ್ಮ ಭಾಷೆಯ ಬಗ್ಗೆ ಅಭಿಮಾನ ಇರುವುದು ಸಹಜ, ನ್ಯಾಯ. ಈ ಅಭಿಮಾನ ದುರಭಿಮಾನವಾದರೂ ಕಷ್ಟ, ಉಪೇಕ್ಷೆಗೆ ಒಳಗಾದರೂ ಕಷ್ಟ. ಒಂದು ಭಾಷೆ ಹಿನ್ನಡೆದರೆ, ಮುನ್ನಡೆದರೆ, ಅವಸಾನವಾದರೆ ಅದಕ್ಕೆ ನಾವೇ ಹೊಣೆ. ನಮ್ಮಲ್ಲಿ ಭಾಷೆಗಳನ್ನು ಮೇಲು-ಕೀಳು ಎಂದು ವಿಂಗಡಿಸುವ ಪರಿಪಾಠವಿದೆ. ಸಂಸ್ಕೃತಕ್ಕೆ ಕೆಲವರು ದೇವಭಾಷೆ ಸ್ಥಾನವನ್ನು ನೀಡಿರುವುದೇ ಸಾಕ್ಷಿ. ಯಾವುದೇ ಭಾಷೆಗೆ ಮೇಲು-ಕೀಳುಗಳಿಲ್ಲ; ಬಡವ-ಬಲ್ಲಿದನೆಂಬುದಿಲ್ಲ; ಆ ಬಣ್ಣ - ಈ ಬಣ್ಣ ಎನ್ನುವುದಿಲ್ಲ; ಗಡಿರೇಖೆಗಳಿಲ್ಲ. ಜೀವಂತ ಭಾಷೆಗಳೆಲ್ಲ ಸಮಾನ ಗೌರವಕ್ಕೆ ಪಾತ್ರವಾಗುತ್ತವೆ.

ಭಾಷೆ, ಧರ್ಮ ಮತ್ತು ಮತ ಯಾರಿಗೂ ಹುಟ್ಟಿನಿಂದ ಬರುವುದಿಲ್ಲ. ಯಾವುದೇ ಭಾಷೆ ಕಲಿಕೆಯಿಂದ ಮಾತ್ರ ಬರುತ್ತದೆ. ಭಾಷೆಯನ್ನೇ ಬಂಡವಾಳ ಮಾಡಿಕೊಂಡ ಕೆಲವರು, ಅತಿ ಉತ್ಸಾಹದಿಂದ, ಉದ್ರೇಕದಿಂದ, ಅಜ್ಞಾನದಿಂದ ''ಕನ್ನಡ ಭಾಷೆ ನನ್ನ ರಕ್ತದಲ್ಲಿ ಹರಿಯುತ್ತಿದೆ'' ಎಂದು ಉಗ್ಗಡಿಸುತ್ತಾರೆ. ವಾಸ್ತವವೆಂದರೆ, ಯಾರ ರಕ್ತದಲ್ಲೂ ಯಾವ ಭಾಷೆಯ ರಕ್ತವೂ ಹರಿದಾಡುವುದಿಲ್ಲ. ಅದು ನಿಜವಾಗಿದ್ದರೆ ಕನ್ನಡಿಗನ ರಕ್ತ ತಮಿಳನಿಗೆ ಕೊಟ್ಟಕೂಡಲೇ ಅವನು ಕನ್ನಡಿಗನಾಗಬೇಕಿತ್ತು; ಮುಸ್ಲಿಮನ ರಕ್ತ ಪಡೆದ ಹಿಂದು ಮುಸ್ಲಿಮನಾಗಬೇಕಿತ್ತು. ವೈದ್ಯಶಾಸ್ತ್ರ ಇದನ್ನು ಒಪ್ಪುವುದೇ ಇಲ್ಲ. ಜೀವನ್ಮರಣದ ಸಂದರ್ಭದಲ್ಲಿ, ರಕ್ತದ ಆರೋಗ್ಯ, 'ಗ್ರೂಪ್' ಮುಖ್ಯವೇ ಹೊರತು, ಭಾಷೆಯೂ ಅಲ್ಲ, ಧರ್ಮವೂ ಅಲ್ಲ. ವೈಜ್ಞಾನಿಕ ದೃಷ್ಟಿಯಿಂದ, ವಸ್ತುನಿಷ್ಠವಾಗಿ ನೋಡಿದರೆ ಯಾರೂ ಹುಟ್ಟಿನಿಂದ ಕನ್ನಡಿಗನಲ್ಲ; ಹುಟ್ಟು ತೆಲುಗನಲ್ಲ; ಹುಟ್ಟು ತಮಿಳನಲ್ಲ, ಹುಟ್ಟು ಮಲೆಯಾಳಿಯಲ್ಲ; ಹುಟ್ಟು ಮರಾಠಿಯಲ್ಲ. ನಾವು ಯಾವ ಭಾಷೆಯನ್ನು ಕಲಿಯುತ್ತೇವೆಯೋ, ಆ ಭಾಷೆ ನಮ್ಮದಾಗುತ್ತದೆ. ಕನ್ನಡನಾಡಿನಲ್ಲಿ ಹುಟ್ಟಿದ ಮಗು ಆಕಸ್ಮಿಕವಾಗಿ ಜರ್ಮನಿಯಲ್ಲಿ ಬೆಳೆದರೆ, ಆ ಮಗುವಿಗೆ ಜರ್ಮನ್ ಭಾಷೆ ಬರುತ್ತದೆಯೇ ಹೊರತು ಕನ್ನಡವಲ್ಲ. ಮಗು ಪರಿಸರದ ಭಾಷೆಯನ್ನು ರೂಢಿಸಿಕೊಳ್ಳುತ್ತದೆ. ಅವಶ್ಯಕತೆಗಳಿಗೆ ತಕ್ಕಂತೆ ಅದನ್ನು ಬೆಳೆಸುತ್ತದೆ. ಆದ್ದರಿಂದ, ಭಾಷೆ ಕಲಿತವರ ಸ್ವತ್ತು. ಶರೀಫ ಸಾಹೇಬರು ಕನ್ನಡ ನವೋದಯಕ್ಕೆ ನಾಂದಿ ಹಾಡಿದರು. ಕಿಟ್ಟಲ್ ಜರ್ಮನಿಯಿಂದ ಬಂದು ಕನ್ನಡ ನಿಘಂಟು ಸಿದ್ಧಗೊಳಿಸಿದರು. ಮಾಸ್ತಿ-ಬೇಂದ್ರೆ-ಕಾರ್ನಾಡ್ ಕನ್ನಡ ಕಲಿತು ಜ್ಞಾನಪೀಠ ಪ್ರಶಸ್ತಿಯನ್ನು ತಂದುಕೊಟ್ಟರು. ನಿಸಾರ್ ಅಹಮದ್ ನಿತ್ಯೋತ್ಸವ ಹಾಡಿದರು. ಇದೇ ರೀತಿಯಲ್ಲಿ ಕನ್ನಡ ಕಲಿತಿದ್ದ ಎಸ್. ಕೆ. ಮಧುಸೂದನ್, ತಮಿಳುನಾಡಿಗೆ ಹೋಗಿ, 'ಆತ್ಮಾರಾಂ' ಹೆಸರಿನಿಂದ ಆಧುನಿಕ ತಮಿಳು ಕಾವ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಭಾರತ ಮೂಲದ ನಯಿಪಾಲ್, ಇಂಗ್ಲಿಷಿನಲ್ಲಿ ಬರೆದು, ನೊಬೆಲ್ ಪ್ರಶಸ್ತಿ ಗಳಿಸಿದ್ದಾರೆ. ಆದ್ದರಿಂದ ಕನ್ನಡ ಎನ್ನುವುದು ಪಿತ್ರಾರ್ಜಿತ ಸ್ವತ್ತಲ್ಲ. ಬ್ಯಾಂಕು ಬ್ಯಾಲೆನ್ಸಿನಂತೆ ಹಿಂಬಾಲಿಸುವುದಿಲ್ಲ. ಭಾಷೆಯನ್ನು, ಪ್ರತಿಯೊಬ್ಬರೂ ಪ್ರೀತಿಯಿಂದ ಕಷ್ಟಪಟ್ಟು ಕಲಿಯಬೇಕು. ಸಾಧಿಸಬೇಕು. ಕನ್ನಡವನ್ನು ಜೀವಂತಗೊಳಿಸಬೇಕು. ಪರಿಸ್ಥಿತಿ ಹೀಗಿರುವಾಗ, ೨೧ನೆಯ ಶತಮಾನದಲ್ಲಿ ನಾವು ಕನ್ನಡವನ್ನು 'ತಾಯಿ ರಾಜರಾಜೇಶ್ವರಿ' ಎಂದೂ 'ತಾಯಿ ಭುವನೇಶ್ವರಿ' ಎಂದೂ ಅದ್ದೂರಿಯಾಗಿ ಮೆರವಣಿಗೆ ಮಾಡುವುದು, ಭಜನೆ ಮಾಡುವುದು, ಎಷ್ಟು ಸರಿ ಎಂಬುದನ್ನು ಚಿಂತಿಸಬೇಕು. ನಾವ್ಸ್ಟಿ ಮಾಡಬೇಕಾದ ಮೊದಲ ಕೆಲಸ, ಕನ್ನಡವನ್ನು 'ಸೆಕ್ಯುಲರ್'ಗೊಳಿಸುವುದು. ಈ ಹಿಂದೂ ಕಲ್ಪನೆಯನ್ನು ಒಬ್ಬ ಮುಸ್ಲಿಂ, ಒಬ್ಬ ಕ್ರಿಶ್ಚಿಯನ್ ಹೇಗೆ ಸ್ವೀಕರಿಸಲು ಸಾಧ್ಯ ? ಅವರಿಗೆ ಕನ್ನಡ ನನ್ನದೆನ್ನಲು ಮುಜುಗರವಾಗುತ್ತದೆ. ಇಂದಿನ ಅಗತ್ಯಗಳಿಗೆ ತಕ್ಕಂತೆ, ಇಂದಿನ ವಿದ್ಯಮಾನಗಳಿಗೆ ತಕ್ಕಂತೆ, ಎಲ್ಲರೂ ಒಪ್ಪಿಕೊಳ್ಳುವಂತೆ ಭಾಷೆಯನ್ನು ಬೆಳೆಸಬೇಕು. ಭಾಷೆ ನಾವೇ ರೂಪಿಸಿದ ಸಂಕೇತಗಳು; ದೈವಾಂಶ ಸಂಭೂತವಲ್ಲ ಎಂಬುದನ್ನು ಅರಿಯಬೇಕು. ಯಾರು ಚೆನ್ನಾಗಿ ಕನ್ನಡವನ್ನು ಕಲಿಯುತ್ತಾರೋ ಅವರೆಲ್ಲಾ ಕನ್ನಡಿಗರು.

ಇಂಗ್ಲಿಷ್ ಒಂದು ಸಾವಿರ ವರ್ಷಗಳ ಕೆಳಗೆ ಕನ್ನಡದಷ್ಟು ಸಮೃದ್ಧವಾಗಿರಲಿಲ್ಲ. ಇಂದು ಜಗತ್ತನ್ನೇ ವ್ಯಾಪಿಸಿದೆ. ಇದಕ್ಕಾಗಿ ಅವರು ಇಂಗ್ಲಿಷ್ ಅನ್ನು ಪೂಜೆಮಾಡಲಿಲ್ಲ. ಇಂಗ್ಲಿಷ್ ಅನ್ನು ಭಜನೆ ಮಾಡಲಿಲ್ಲ. ಅಂದಂದಿನ ಅಗತ್ಯಕ್ಕೆ ತಕ್ಕಂತೆ ಭಾಷೆಯನ್ನು ಕಟ್ಟಿದರು. ಈ ಕಟುಸತ್ಯವನ್ನು ನಾವು ತಿಳಿದುಕೊಳ್ಳಬೇಕು. ಕನ್ನಡವನ್ನು ಅವಸಾನದ ಅಂಚಿನಿಂದ ತಪ್ಪಿಸಬೇಕಾದರೆ, ಕನ್ನಡವನ್ನು ಎಲ್ಲರೂ ಒಂದಾಗಿ, ಗಟ್ಟಿಯಾಗಿ, ಚೆನ್ನಾಗಿ ಕಟ್ಟಬೇಕು. ಜೀವಂತವಾಗಿಟ್ಟಿರಬೇಕು.

ಕೃಪೆ : ಆಕಾಶವಾಣಿ

ಚಿ. ಶ್ರೀನಿವಾಸರಾಜು
ನಂ. ೨೧(ಲ), 'ಚಿರಂಜೀವಿ', ಹಳೆ ಈಜುಕೊಳ ರಸ್ತೆ, ಕೋದಂಡರಾಮಪುರ, ಬೆಂಗಳೂರು - ೩

*ಹಿಂದಿನ ಪುಟದಿಂದ (ವಿಶ್ವ ವೀಕ್ಷಣೆ)*

ಬೇಕಾದರೆ ಹಮಾಸ್ ಇಸ್ರೇಲಿನ ಅಸ್ತಿತ್ವವನ್ನು ಅಂಗೀಕರಿಸಬೇಕು, ಹಿಂಸೆ ತ್ಯಜಿಸಬೇಕು ಮತ್ತು ಹಿಂದಿನ ಎಲ್ಲ ಇಸ್ರೇಲಿ-ಪ್ಯಾಲಸ್ತೈನ್ ಒಪ್ಪಂದ ಗಳನ್ನು ಪಾಲಿಸಬೇಕು ಎಂದು ಇಸ್ರೇಲ್ ಷರತ್ತು ವಿಧಿಸಿದೆ. ಇದಕ್ಕೆ ಅಮೆರಿಕಾದ, ಯೂರೋಪಿಯನ್ ಯೂನಿಯನ್ನಿನ, ಪೂರ್ಣ ಬೆಂಬಲವೂ ಇದೆ. ಈ ರಾಷ್ಟ್ರಗಳ ದೃಷ್ಟಿಯಲ್ಲಿ ಹಮಾಸ್ ಒಂದು ಭಯೋತ್ಪಾದಕ ಸಂಸ್ಥೆ. ಹಿಂದೆ ಯಾಸೆರ್ ಅರಾಫತ್ ನಾಯಕತ್ವದಲ್ಲಿದ್ದ ಪ್ಯಾಲಸ್ತೈನ್ ವಿಮೋಚನಾ ಸಂಘಟನೆಯನ್ನು ಈ ರಾಷ್ಟ್ರಗಳು ಭಯೋತ್ಪಾದಕ ಎಂದೇ ಗುರ್ತಿಸಿದ್ದುವು.

ಪ್ಯಾಲಸ್ತೈನ್ ರಾಜ್ಯ ಸ್ಥಾಪನೆಗಾಗಿ ಜನತೆಯ ಚಳವಳಿಯಲ್ಲೇ ಹುಟ್ಟಿಬಂದ ಸಂಘಟನೆ ಹಮಾಸ್. ಪ್ಯಾಲಸ್ತೈನ್ ವಿಮೋಚನಾ ಸಂಘಟನೆಯ ಚೌಕಟ್ಟಿನೊಳಗೆ ಅದು ಕಾರ್ಯನಿರತವಾಗಿತ್ತು. ೧೯೭೦ರ ದಶಕದಲ್ಲಿ ಪ್ಯಾಲಸ್ತೈನ್ ವಿಮೋಚನಾ ಸಂಸ್ಥೆ ಇಸ್ರೇಲಿನ ಅಸ್ತಿತ್ವ ಅಂಗೀಕರಿಸಿ ಸಂಧಾನಮಾರ್ಗ ಅನುಸರಿಸಿದಾಗ ಹಮಾಸ್ ಹೊರ ಬಂದು ತನ್ನ ಹೋರಾಟ ಮುಂದುವರಿಸಿತು. ಪ್ಯಾಲಸ್ತೈನ್ ರಾಜ್ಯಕ್ಕೆ ನ್ಯಾಯವಾಗಿ ಸೇರಬೇಕಾಗಿರುವ, ಇಸ್ರೇಲ್‌ನ ಆಕ್ರಮಣದಲ್ಲಿರುವ ಪ್ರದೇಶಗಳನ್ನು ಒಳಗೊಂಡಂತೆ ಸ್ವತಂತ್ರ ಪ್ಯಾಲಸ್ತೈನ್ ರಾಜ್ಯ ಸ್ಥಾಪನೆಯೇ ಹಮಾಸ್‌ನ ಗುರಿ. ಗಾಜಾಪಟ್ಟಿಯಲ್ಲಿ ಹೆಚ್ಚು ಪ್ರಭಾವಶಾಲಿಯಾಗಿರುವ ಈ ಸಂಘಟನೆ ಇಸ್ರೇಲಿಗೆ ಸಿಂಹಸ್ವಪ್ನ, ಅದರ ದುರಾಕ್ರಮಣ ನೀತಿಗೆ ದೊಡ್ಡ ಸವಾಲು. ಯಾಸೆರ್ ಅರಾಫತ್‌ರ ನಿಧನಾನಂತರ ಜರುಗಿದ ಚುನಾವಣೆಗಳಲ್ಲಿ ಆಡಳಿತದಲ್ಲಿದ್ದ ಪಿಎಲ್‌ಒಗಿಂತ ಅಧಿಕ ಸ್ಥಾನಗಳನ್ನು ಗಳಿಸಿ ಅಧಿಕಾರಕ್ಕೆ ಬಂದಿದೆ. ಪ್ರಜಾಪ್ರಭುತ್ವ ರೀತ್ಯ ಚುನಾಯಿತಗೊಂಡಿರುವ ಹಮಾಸ್ ಸರಕಾರವನ್ನು ಉರುಳಿಸಲು ಅಮೆರಿಕಾದ ಬೆಂಬಲ ಪಡೆದಿರುವ ಇಸ್ರೇಲ್ ಎಲ್ಲ ಕ್ರಮಗಳನ್ನು ತೆಗೆದುಕೊಳ್ಳಲು ಸನ್ನದ್ಧವಾಗಿದೆ. ಹಣದ ಕೊರತೆಯಿಂದ ಪ್ಯಾಲಸ್ತೈನನ್ನು ಸೊರಗಿಸುವುದೇ ಕುತಂತ್ರ. ವೆಸ್ಟ್‌ಬ್ಯಾಂಕ್ ಮತ್ತು ಗಾಜಾಪಟ್ಟಿಯ ಪ್ರದೇಶದಿಂದ ಸಹಸ್ರಾರು ಕಾರ್ಮಿಕರು ಇಸ್ರೇಲಿಗೆ ಪ್ರತಿನಿತ್ಯ ಕೆಲಸಕ್ಕೆ ಹೋಗಿಬರುತ್ತಾರೆ. ಸಾಕಷ್ಟು ಸರಕುಗಳೂ ಇಸ್ರೇಲಿನಿಂದ ಬರುತ್ತವೆ. ಅದನ್ನು ತಡೆದರೆ ಪ್ಯಾಲಸ್ತೀನಿಯನ್ ಜನ ತೊಂದರೆಗೊಳಗಾಗುತ್ತಾರೆ. ಅಲ್ಲದೆ ಪ್ಯಾಲಸ್ತೈನಿನಲ್ಲಿ ಚಲಾವಣೆಯಲ್ಲಿರುವ ಹಣ ಇಸ್ರೇಲಿನ 'ಷೆಕೆಟ್'. ಮೊದಲೇ ಹೇಳಿರುವ ಹಾಗೆ ತೆರಿಗೆ ವಸೂಲಿಯಿಂದ ಇಸ್ರೇಲ್ ಪ್ಯಾಲಸ್ತೈನ್ ಆಡಳಿತಕ್ಕೆ ಪ್ರತಿ ತಿಂಗಳೂ ಸುಮಾರು ೫೦ ಮಿಲಿಯ ಡಾಲರುಗಳನ್ನು ನೀಡುತ್ತಿತ್ತು. ಪ್ಯಾಲಸ್ತೈನ್ ಆಡಳಿತ ಈಗಲೇ ತಿಂಗಳಿಗೆ ಸುಮಾರು ೧೧೦ ಮಿಲಿಯ ಡಾಲರುಗಳ ಕೊರತೆಯನ್ನು ಅನುಭವಿಸುತ್ತಿದೆ. ಅಮೆರಿಕಾ ಮತ್ತು ಯೂರೋಪಿಯನ್ ಒಕ್ಕೂಟ ನೀಡುತ್ತಿರುವ ನೆರವೂ ನಿಂತರೆ ಪ್ಯಾಲಸ್ತೈನ್ ಜನರ ಜೀವನ ದುಸ್ತರವಾಗುತ್ತದೆ. ಅನಿವಾರ್ಯವಾಗಿ ಸರಕಾರ ಉರುಳುತ್ತದೆ. ಹಾಗೇನಾದರೂ ಆದರೆ ಸಂಧಾನದ ಬಾಗಿಲು ಮುಚ್ಚಿದಂತೆಯೇ. ಪರಿಸ್ಥಿತಿ ಅಸ್ಥಿರಗೊಳ್ಳುತ್ತದೆ. ಇಸ್ರೇಲಿಗೆ ಬೇಕಾಗಿರುವುದೂ ಅದೇ.

ಸೀಯಾರ್ಕೆ
'ಚೌಬೀನ', ೮೪೯, ಬನಶಂಕರಿ ೩ನೇ ಹಂತ, ಕತ್ರಿಗುಪ್ಪೆ
ಬೆಂಗಳೂರು - ೫೬೦ ೦೮೫

## ದುಃಸ್ಥಿತಿ

ಪ್ರಜಾ ರಾಜತ್ವವೀಗ
ಪ್ರಜಾ ಹರಾಜತ್ವದತ್ತ
ಸಾಗುತ್ತಿದೆ
ಅಧಿಕಾರಕ್ಕಾಗಿ
ಹಾರಾಟ – ಹೋರಾಟ
ವಿರೋಧಿಗಳೊಡನೆ
ರಾಜಿ ಮಾಡಿಕೊಳ್ಳುವುದು
ಒಂದು ಬಾಜಿಯಾಗಿದೆ

ಹಾಲಾಡಿ ಮಾರುತಿರಾವ್
ಬೆಂಗಳೂರು





# ಉದಯೋನ್ಮುಖ ಕಲಾವಿದ ತಾರಾನಾಥ ಕೈರಂಗಳ



ಮಂಗಳೂರಿನ ಉದಯೋನ್ಮುಖ ಕಲಾವಿದರ ಪೈಕಿ ಶ್ರೀ ತಾರಾನಾಥ ಕೈರಂಗಳ ಒಬ್ಬರು. (ವಯಸ್ಸು : ೨೭). ಮಂಗಳೂರಿನ ಪ್ರಖ್ಯಾತ ಮಹಾಲಸಾ ಚಿತ್ರಕಲಾ ಶಾಲೆಯಲ್ಲಿ ಎ. ಎಂ., ಜಿ. ಡಿ. ಆರ್ಟ್ ಪದವಿಯನ್ನು ಪಡೆದ ನಂತರ ಗ್ರಾಫಿಕ್, ಕ್ರಿಯೇಟಿವ್ - ಕೊಲಾಜ್ - ಪೇಂಟಿಂಗ್ - ಟ್ರೆಡಿಶನಲ್ ಪೇಂಟಿಂಗ್ ಮುಂತಾದ ಚಿತ್ರಗಳನ್ನು ಎಲ್ಲಾ ಮಾಧ್ಯಮಗಳಲ್ಲೂ ಬಳಸಿಕೊಂಡಿದ್ದಾರೆ.

ಸುಮಾರು ೨೦ಕ್ಕಿಂತಲೂ ಹೆಚ್ಚು ಬಾರಿ ಕರ್ನಾಟಕದ ನಾನಾ ಕಡೆ ಅವರ ಕಲಾಕೃತಿಗಳು ಪ್ರದರ್ಶನಗೊಂಡಿವೆ. ರಾಜ್ಯದಲ್ಲಿ ಹಾಗೂ ವಿದೇಶಗಳಲ್ಲಿ ಕಲಾಕೃತಿಗಳು ಮಾರಾಟಗೊಂಡಿವೆ.

ಮಂಗಳೂರಿನ ಪ್ರಖ್ಯಾತ ಕಲಾವಿದ ಗೋಪಾಡ್ಕರ್ ಅವರೊಂದಿಗೆ ಕೆಲಸ ಮಾಡುತ್ತಿದ್ದಾರೆ.





HOSATHU Kannada Monthly / March 2006 Rs. 12 RNI Regn. No. KARKAN/1999/614 REGD. CPMG / KA / BGE – 7 / 2006-08
Licenced to post without prepayment. Licence No. WPP-14 Posted at Bangalore PSO on the 3rd of every month



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna